# ಕಸ್ತೂರಿ

ಮೇ, ೧೯೫೮



ಬೆಲೆ : ೧೨ ಆಣೆ
(೭೫ ನಯೇ ಪೈಸೆ)

ಜ್ಞಾನ ಮತ್ತು ಮನೋರಂಜನ

# ಕಸ್ತೂರಿ

ಕನ್ನಡ ಡೈಜೆಸ್ಟ್

ಪ್ರತಿತಿಂಗಳ ೧ನೆ ದಿನಾಂಕ
ಪ್ರಕಟವಾಗುವದು.

ಮುಖ್ಯ ಸಂಪಾದಕರು :
ಮೊಹರೆ ಹನುಮಂತರಾಯರು

ಪ್ರಕಾಶಕರು :
ಲೋಕಶಿಕ್ಷಣ ಟ್ರಸ್ಟ್-ಹುಬ್ಬಳ್ಳಿ

ಕಚೇರಿ :
ಸಂಯುಕ್ತ ಕರ್ನಾಟಕ ಕಾರ್ಯಾಲಯ
ಹುಬ್ಬಳ್ಳಿ

ಮುದ್ರಕರು :
ಸಂಯುಕ್ತ ಕರ್ನಾಟಕ ಮುದ್ರಣಾಲಯ
ಹುಬ್ಬಳ್ಳಿ

ಮುಖಪುಟ ಚಿತ್ರ.
ಸಾರನಾಥದ ಬುದ್ಧ
ಡಿ. ಎನ್. ಕೋನೇರಿ

ಚಂದಾ ದರ :

| | | |
|---|---|---|
| ವಾರ್ಷಿಕ (ಅಂಚೆಸೇರಿ) | | ರೂ. ೮.೦೦ |
| ಅರ್ಧ ವರ್ಷ | — | ರೂ. ೪.೫೦ |
| ಬಿಡಿಸಂಚಿಕೆ | — | ರೂ. ೦.೭೫ |


## ಲೇಖಕರಿಗೆ ಸೂಚನೆ

ಕಸ್ತೂರಿಯಲ್ಲಿ ಪ್ರಕಟನೆಗಾಗಿ ಲೇಖ ಪ್ರಬಂಧ, ಕಥೆ ಮೊದಲಾದವನ್ನು ಸ್ವೀಕರಿಸಲಾಗುವದು. ಕಾಗದದ ಒಂದೇ ಮಗ್ಗಲಿಗೆ ವಿರಳವಾಗಿ ಬರೆದು ಕಳಿಸಬೇಕು. ಲೇಖಕರು ತಮ್ಮ ಹೆಸರು ವಿಳಾಸಗಳನ್ನು ಸ್ಪಷ್ಟವಾಗಿ ತಿಳಿಸಬೇಕಲ್ಲದೆ, ಅನುವಾದ, ರೂಪಾಂತರ ಇಲ್ಲವೆ ಸಾಧಾರ ಲೇಖಗಳಾದರೆ ಅವುಗಳ ಮೂಲ ಲೇಖಕ ಹಾಗು ಪ್ರಕಾಶಕರ ಹೆಸರು ವಿಳಾಸಗಳನ್ನೂ ಒದಗಿಸಬೇಕು. ಮೂಲ ಲೇಖಕರ ಅನುಮತಿ ಪಡೆದೇ ಲೇಖಗಳನ್ನು ಕಳಿಸಿದರೆ ಅವುಗಳ ಮೇಲೆ ಬೇಗನೆ ನಿರ್ಣಯಕ್ಕೆ ಬರಲು ಸುಲಭವಾಗುವದು. ಅಸ್ವೀಕೃತ ಲೇಖಗಳು ತಿರುಗಿ ಬೇಕಾಗಿದ್ದರೆ **ಲೇಖಗಳ ಸಂಗಡವೇ** ತಿರುಗಿ ಕಳಿಸಲು ಅವಶ್ಯಬೀಳುವಷ್ಟು ಅಂಚೆ ತಿಕೀಟುಗಳನ್ನೂ ಕಳಿಸಿರಬೇಕು. ಲೇಖ ಸ್ವೀಕೃತವಾದರೆ ಯಥಾವಕಾಶ ಪ್ರಕಟಿಸಲಾಗುವದು. ಲೇಖಕರು ತಮ್ಮ ಲೇಖಗಳ ಸ್ಥಳಪ್ರತಿಗಳನ್ನು ಕಾಯ್ದಿಟ್ಟುಕೊಳ್ಳುವದೊಳಿತು. ಲೇಖಗಳು ಆಕಸ್ಮಾತ್ತಾಗಿ ಕಳೆದು ಹೋದರೆ ಸಂಪಾದಕರು ಹೊಣೆಗಾರರಲ್ಲ.

ಲೇಖ ಪ್ರಕಟವಾದರೆ "ಕಸ್ತೂರಿ" ಯು ಆಗಿಂದಾಗ್ಗೆ ಗೊತ್ತುಪಡಿಸಿಕೊಂಡ ಕ್ರಮದಲ್ಲಿ ಪ್ರತಿಫಲವನ್ನು ಆದಷ್ಟು ಬೇಗ ಕೊಡಲಾಗುವದು. ಲೇಖಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ.

---

## ಚಂದಾದಾರರಿಗೆ ಸೂಚನೆ

ಪ್ರತಿತಿಂಗಳ "ಕಸ್ತೂರಿ" ಆಯಾ ತಿಂಗಳ ೧ನೇ ದಿನಾಂಕದೊಳಗೇ ಪ್ರಕಟವಾಗುವುದು. ಅದು ಚಂದಾದಾರರಿಗೆ ಆಯಾ ತಿಂಗಳ ೫ ನೇ ದಿನಾಂಕದೊಳಗೆ ತಲಪುವದು. ಹಾಗೆ ಬಾರದಿದ್ದರೆ ಚಂದಾದಾರರು ತಮ್ಮ ಟಪಾಲು ಕಟ್ಟೆಯಲ್ಲಿ ಮೊದಲು ವಿಚಾರಿಸಿ ನಮಗೆ ತಿಳಿಸಬೇಕು. ಚಂದಾದಾರರು ಕಾರ್ಯಾಲಯದೊಡನೆ ಪತ್ರವ್ಯವಹಾರ ಮಾಡುವಾಗ್ಗೆ ತಮ್ಮ ಚಂದಾ ನಂಬರು ಕಾಣಿಸಲು ಮರೆಯಬಾರದು.

# ಈ ಸಂಚಿಕೆಯಲ್ಲಿ



# ಕಸ್ತೂರಿ

ವರ್ಷ ೨ ಮೇ ೧೯೫೮ ಸಂಚಿಕೆ ೯

ಒಂದು ಸ್ಪಾನಿಶ್ ನೀತಿ ಕಥೆ

# ಕತ್ತೆಗಳು ಹಾಗೇಕೆ ನಿಲ್ಲುತ್ತವೆ?

ಹುಆನ್ ಹಿಮಾನೇತ

ನೋಬೆಲ್ ಬಹುಮಾನ ಪಡೆದ ಸಾಹಿತಿ

ಹತ್ತು ಸಾವಿರ ಗುಲಾಮರ ಒಡೆಯನಾದ, ಮೂರ ಜನರ ಸರದಾರನಾದ ಬೋಗಾ ಮಾವನ ಮನೆಗೆ ಹೋಗಲು ಸಿದ್ಧನಾದ. ಆತ ತನ್ನ ಸಾಮಾನುಗಳನ್ನು ಕಟ್ಟಿಕೊಂಡು ಸರದಾರರ ಪದ್ಧತಿಯಂತೆ ಒಬ್ಬನೇ ತನ್ನ ಕತ್ತೆಯ ಮೇಲೆ ಕುಳಿತು ಹೊರಟ.

ಉತ್ಸಾಹಭರದಲ್ಲಿ ಆತ ಹಗಲಿಡೀ ಪ್ರವಾಸ ಮಾಡಿದ್ದಲ್ಲದೆ ರಾತ್ರಿಯೂ ಪ್ರವಾಸ ಮಾಡಿದ. ಮರುದಿನ ಮುಂಜಾನೆ ಆತ ತನ್ನ ಮಾವನ ರಾಜ್ಯದ ಸರಹದ್ದಿಗೆ ಬಂದು ತಲುಪಿದ. ಪುರಾತನ ಪರಂಪರೆಯಂತೆ ಆತ ಅಲ್ಲಿಯೇ ತನ್ನ ಡೇರೆ ಹೊಡೆದು ತನ್ನ ಸ್ವಾಗತದ ಸಿದ್ಧತೆ ಮಾಡಲು ಮಾವನಿಗೆ ಹೇಳಿಕಳಿಸಿದ. ಪರಂಪರೆಯಂತೆ ಅವನ ಪತ್ನಿ ಸ್ವತಃ ಒಬ್ಬಳೇ ತನ್ನ ಕತ್ತೆಯ ಮೇಲೆ ಕುಳಿತು ಅವನ ಸ್ವಾಗತಕ್ಕಾಗಿ ಅವನಿದ್ದಲ್ಲಿಗೆ ಬಂದಳು.

ಪತ್ನಿಯನ್ನು ಕಂಡು ಅವನು ಮುಂದೆ ಬಂದ. ಕತ್ತೆಯ ಮೇಲೆ ಕುಳಿತುಕೊಂಡೇ ಅವರಿಬ್ಬರೂ ತಮ್ಮ ಕೈಗಳನ್ನು ಮುಂದಕ್ಕೆ ಚಾಚಿದರು. ಪರಸ್ಪರ ಪ್ರೇಮವನ್ನೂ ಪ್ರಸನ್ನತೆಯನ್ನೂ ಪ್ರಕಟಿಸಿದರು. ಪತಿಪತ್ನಿಯರ ಈ ಮಿಲನಕಾಲದಲ್ಲಿ ಎರಡೂ ಕತ್ತೆಗಳು ಒಂದಕ್ಕೊಂದು ಎದುರು ಬಂದವು. ಸ್ವಭಾವಕ್ಕನುಗುಣವಾಗಿ ಅವೆರಡೂ ತಮ್ಮ ಕಿವಿಗಳನ್ನಲ್ಲಾಡಿಸಿ, ಮೂಗನ್ನು ಹಿಗ್ಗಿಸಿ ಯಾವನೋ ಪ್ರಶ್ನಕರ್ತ ತನ್ನ ಪ್ರಶ್ನೆಯ ಉತ್ತರಕ್ಕಾಗಿ ಕಾದು ನಿಂತಿರುವಂತೆ ಮೌನವಾಗಿ ನಿಂತುಕೊಂಡವು. ಅದನ್ನು ಕಂಡು ಬೋಗಾನಿಗೆ ಅತ್ಯಾಶ್ಚರ್ಯವಾಯಿತು. ಪತ್ನಿಯ ಇರವನ್ನು ಮರೆತು ಅವನು ಏಕಾಗ್ರಚಿತ್ತದಿಂದ ಕತ್ತೆಗಳ ಸ್ಥಿತಿಯನ್ನು ನೋಡುತ್ತ ನಿಂತನು.

ಪತ್ನಿ ತುಂಬ ಆಗ್ರಹಪಡಿಸಿದುದರಿಂದ ಅವನು ಮಾವನ ಮನೆಗೆ ಹೋಗಲು ಒಪ್ಪಿಕೊಂಡನು. ಆದರೆ ಅವನ ಮನಸ್ಸಿನಲ್ಲಿ ಎರಡೂ ಕತ್ತೆಗಳ ಆ ಅದ್ಭುತ ವ್ಯವಹಾರವು ಮೊದಲಿನಂತೆ ಕಠಿಣ

ಸಮಸ್ಯೆಯಾಗಿಯೇ ಉಳಿಯಿತು. ಎದ್ದಾಗ-ಕುಳಿತಾಗ, ನಿದ್ರೆ ಮಾಡಿದಾಗ-ಎಚ್ಚರಿದ್ದಾಗ, ತಿನ್ನುವಾಗ-ಕುಡಿಯುವಾಗ ಅವನ ಮನಸ್ಸಿನಲ್ಲಿ ಸದಾ ಎರಡೂ ಕತ್ತೆಗಳು ಪ್ರಥಮತಃ ಭೆಟ್ಟಿಯಾಗಿದ್ದರೂ ಚಿರಪರಿಚಿತರಂತೆ ಒಂದನ್ನೊಂದು ಮುಗ್ಧ ದೃಷ್ಟಿಯಿಂದ ಏಕೆ ನೋಡುತ್ತ ನಿಂತವು ಎಂಬ ಪ್ರಶ್ನೆ ಕಟಿಯುತ್ತಲೇ ಉಳಿಯಿತು. ಬೋಗಾನಿಗೆ ಊಟ, ವಿಶ್ರಾಂತಿ, ಮೋಜು ಎಲ್ಲವುಗಳಲ್ಲಿ ಆಸ್ಥೆ ಅಳಿದುಹೋಯಿತು. ಜೀವ ಭಾರವಾಗತೊಡಗಿತು.

ಸರದಾರ ಬೋಗಾನ ಶಂಕೆಯ ನಿವಾರಣೆ ಮಾಡುವವನಿಗೆ ಒಂಟೆಯ ಒಜ್ಜೆಯಷ್ಟು ಅಶರಫಿಗಳನ್ನು ಕೊಡುವುದಾಗಿ ಇಡೀ ರಾಜ್ಯದಲ್ಲಿ ಡಂಗುರ ಹೊಡಯಲ್ಪಟ್ಟಿತು. ಉತ್ತರ, ದಕ್ಷಿಣ, ಪೂರ್ವ, ಪಶ್ಚಿಮ-ನಾಲ್ಕೂ ದಿಕ್ಕುಗಳಿಂದ ದೊಡ್ಡ ದೊಡ್ಡ ಪಂಡಿತರು, ಜ್ಞಾನಿಗಳು, ಸಾಧು—ಸಂತರು ಬಂದರು. ಆದರೆ ಯಾರಿಗೂ ಬೋಗಾನ ಪ್ರಶ್ನೆಗೆ ಉತ್ತರ ಕೊಡುವದಾಗಲಿಲ್ಲ. ಚಿಂತೆಯಿಂದ ಬೋಗಾ ದಿನದಿನಕ್ಕೆ ಕೃಶನಾಗುತ್ತ ನಡೆದ.

ಒಂದು ದಿನ ಸಂಜೆ ಗುಲಾಮರೆಲ್ಲರು ದಿನದ ಕೆಲಸ ಮುಗಿಸಿಕೊಂಡು ಬರುತ್ತಿದ್ದಾಗ ವೃದ್ಧ ಗುಲಾಮನೊಬ್ಬ ತನ್ನ ಯಜಮಾನನ ಬಳಿಗೆ ಹೋಗಿ ಸಲಾಮು ಮಾಡಿ ಹೇಳಿದ: "ಅನ್ನದಾತಾ, ತಮ್ಮ ಅಳಿಯಂದಿರ ಪ್ರಶ್ನೆಗೆ ಉತ್ತರ ನನ್ನ ಬಳಿ ಇದೆ. ಅನುಜ್ಞೆಯಿತ್ತರೆ ನಾನು ಉತ್ತರವನ್ನು ಹೇಳುವೆ."

ಸರದಾರನ ಮುಖ ಅರಳಿತು. ಅವನು ಆ ವೃದ್ಧ ಗುಲಾಮನನ್ನು ಆಗಿಂದಾಗ ತನ್ನ ಅಳಿಯನ ಬಳಿಗೆ ಕರೆದುಕೊಂಡು ಹೋದ. ಬೋಗಾ ತನ್ನ ಪ್ರಶ್ನೆ ಕೇಳಿದ. ಗುಲಾಮ ಈ ರೀತಿ ಉತ್ತರವಿತ್ತ :

"ಒಡೆಯ, ಬಹಳ ಪ್ರಾಚೀನ ಕಾಲದ ಮಾತು. ಒಂದು ದಿನ ಕತ್ತೆಗಳೆಲ್ಲ ಸಭೆ ಸೇರಿ ಮನುಷ್ಯನ ಅತ್ಯಾಚಾರದಿಂದ ಮುಕ್ತಿಪಡೆಯುವ ಮಾರ್ಗವನ್ನು ಕುರಿತು ಯೋಚಿಸಿದವು. ಕೊನೆಯಲ್ಲಿ ಎಲ್ಲವೂ ಸರ್ವಾನುಮತದಿಂದ ಒಂದು ಕತ್ತೆಯನ್ನು ತಮ್ಮ ಪ್ರತಿನಿಧಿಯೆಂದು ಆರಿಸಿ ಅದನ್ನು ಪರಮಾತ್ಮನ ಬಳಿಗೆ ಕತ್ತೆಗಳ ಮುಕ್ತಿಯ ಅನುಜ್ಞೆಯನ್ನು ತರಲೆಂದು ಕಳಿಸಿದವು. ಹುಜೂರ, ಆ ಕತ್ತೆ ಇನ್ನೂ ತಿರುಗಿ ಬಂದಿಲ್ಲ. ಜಗತ್ತಿನ ಕತ್ತೆಗಳೆಲ್ಲ ಅದರ ಆಗಮನವನ್ನು ಬಹು ಆತುರದಿಂದ ನಿರೀಕ್ಷಿಸುತ್ತಿವೆ. ಅದಕ್ಕಾಗಿಯೇ ಎರಡು ಕತ್ತೆಗಳು ಎಲ್ಲಿಯೇ ಆಗಲಿ ಭೆಟ್ಟಿಯಾದಾಗ 'ನಮ್ಮ ಪ್ರತಿನಿಧಿಯ ಸುದ್ದಿಯೇನಾದರೂ ನಿನಗೆ ಸಿಕ್ಕಿದೆಯೆ?' ಎಂದು ಕೇಳದೆ ಇರುವದಿಲ್ಲ. ಈ ಪ್ರಶ್ನೆಯ ಜೊತೆಯಲ್ಲಿ ಎರಡರಲ್ಲೂ ಸಹಾನುಭೂತಿ ಮತ್ತು ಆತ್ಮೀಯತೆಯ ಭಾವ ತುಂಬಿಬಂದು ಎರಡೂ ಸ್ನೇಹದ ಈ ಕೊಡತೆಗೆದುಕೊಳ್ಳುವ ಪ್ರಚಂಡ ಆವೇಗದಲ್ಲಿ ವಿಹ್ವಲವಾಗಿ ನಿಲ್ಲುತ್ತವೆ. ವರ್ಷಾನುಗಟ್ಟಳೆ ಇದೇ ರೀತಿ ನಡೆಯುತ್ತ ಬಂದಿದೆ. ಆದರೆ ಕತ್ತೆಗಳು ಇನ್ನೂ ಆಶೆಯನ್ನು ಬಿಟ್ಟಿಲ್ಲ. ಒಡೆಯಾ, ಮುಕ್ತಿಯ ಆಶೆ ಈ ರೀತಿ ಅತ್ಯಂತ ಪ್ರಬಲವಾಗಿದೆ. ಅದು ಎಂದೂ ಕ್ಷೀಣವಾಗುವದಿಲ್ಲ.'

ಗುಲಾಮನ ಮಾತನ್ನು ಕೇಳಿದ ಬೋಗಾನ ಮುಖ ಗುಲಾಬಿ ಮೊಗ್ಗಿನಂತೆ ಅರಳಿತು. ಅವನಿಗೆ ತನ್ನ ಪ್ರಶ್ನೆಯ ಉತ್ತರ ಸಿಕ್ಕಿತ್ತು. ಈ ಉತ್ತರದಲ್ಲಿ ಅವನ ಆತ್ಮವು ಸದಾ ಕೇಳುತ್ತಿದ್ದ ಪ್ರಶ್ನೆಯ—ಜ್ಞಾನಿ ದಾರ್ಶನಿಕರು, ಸಂತ-ಯೋಗಿಗಳು ಸದಾ ಅಲೆಯುತ್ತಿದ್ದರೂ ಉತ್ತರ ಪಡೆಯದ ಪ್ರಶ್ನೆಯ—ಉತ್ತರವಿತ್ತು.

ಬೋಗಾನ ಕಣ್ಣಲ್ಲಿ ನೀರು ಬಂತು. ಆತ ತುಂಬ ಅತ್ತ. ಬಹುಕಾಲ ಅತ್ತ.

ಬಹಳ ಹೊತ್ತಿನ ನಂತರ ಅವನು ಎದ್ದು ನಿಂತು ಆ ವೃದ್ಧ ಗುಲಾಮನ ಎದುರು ಮೊಣಕಾಲೂರಿ, "ನಾವು ನಿಮ್ಮ ಜಾತಿಯ ಮೇಲೆ ತುಂಬ ಅತ್ಯಾಚಾರ ಮಾಡಿದ್ದೇವೆ. ನಮ್ಮ ಜನರ ಪರವಾಗಿ ನಾನಿಂದು ನಿನ್ನ ಕ್ಷಮೆ ಕೇಳುತ್ತೇನೆ. ನಾನು ಇಂದಿನಿಂದ ಎಲ್ಲ ಗುಲಾಮರನ್ನು ಮುಕ್ತ ಮಾಡಿದ್ದೇನೆ. ಮನುಷ್ಯ ಮನುಷ್ಯನನ್ನು ಪಶುವನ್ನಾಗಿ ಮಾಡುವದಕ್ಕಿಂತ ಹೆಚ್ಚಿನ ಪಾಪ ಇನ್ನಾವದಿದ್ದೀತು?" ಎಂದ.

ಅವರು ಇಡೀ ಮಾನವ ಜಾತಿಯನ್ನು
ದೇವತ್ವಕ್ಕೆತ್ತಲು ಹವಣಿಸಿದರು

# ಶ್ರೀ ಅರವಿಂದರ ಯೋಗ

ರಂ. ರಾ. ದಿವಾಕರ

ಸಂಸ್ಕೃತದಲ್ಲಿ **ಯೋಗ** ಶಬ್ದಕ್ಕೆ ತುಂಬ ವ್ಯಾಪಕ ಅರ್ಥವಿದೆ. **ಯಜ್ಞ** ಶಬ್ದದಂತೆ **ಯೋಗ** ಶಬ್ದಕ್ಕೂ ಪ್ರಾರಂಭದಲ್ಲಿ ಬಹಳ ಸರಳ ಅರ್ಥವಿತ್ತು. ಜೋಡಿಸುವುದು ( ಯುಜಿರ್ ಯೋಗೇ ) ಎಂದಿಷ್ಟೇ ಅದರ ತಾತ್ಪರ್ಯವಿತ್ತು. ಆದರೆ ಇಂದು ಅದರಷ್ಟು ಅರ್ಥವೈವಿಧ್ಯ ಮತ್ತು ಸೂಕ್ಷ್ಮವಾದ ವ್ಯಂಜಕತೆಯುಳ್ಳ ಇನ್ನೊಂದು ಶಬ್ದ ಸಿಗುವುದು ಕಷ್ಟ. ನಾನಿಲ್ಲಿ ಉಚ್ಚತಮವಾದ ಆಧ್ಯಾತ್ಮಿಕ ಅಭಿಲಾಷೆಯನ್ನು ಕೈಗೂಡಿಸಿಕೊಳ್ಳಲು ಅಗತ್ಯವಾದ ಅಂತರಂಗ ಮತ್ತು ಬಾಹ್ಯ ಸಾಧನಾವಿಧಿ ಎಂಬರ್ಥದಲ್ಲಿ ಆ ಶಬ್ದವನ್ನು ಪ್ರಯೋಗಿಸುತ್ತಿದ್ದೇನೆ.

ಶ್ರೀ ಅರವಿಂದರು **ಯೋಗ** ಶಬ್ದವನ್ನು ಅತ್ಯಂತ ವ್ಯಾಪಕವೂ ಗಹನವೂ ಆದ ಅರ್ಥದಲ್ಲಿ ಪ್ರಯೋಗಿಸಿದ್ದಾರೆ. ಅವರ ಸಾಧನೆ ಪ್ರಗತಿ ಹೊಂದಿದಂತೆ ಅವರ ಮನಸ್ಸಿನಲ್ಲಿಯೂ ಜೀವನದಲ್ಲಿಯೂ ಯೋಗ ಶಬ್ದದ ಅರ್ಥಾಭಿಪ್ರಾಯಗಳು ವಿಕಸಿತವಾಗುತ್ತ ಹೋಗಿ ಕೊನೆಗೆ ಅದು ಅವರ ಸಮಗ್ರ ಆಧ್ಯಾತ್ಮಿಕ ಸಾಧನೆ ಸಿದ್ಧಿಗಳ ವಾಚಕವಾಗಿಬಿಟ್ಟಿತು. ಒಂದೆರಡು ಉದಾಹರಣೆಗಳಿಂದ ಈ ಮಾತನ್ನು ವಿವರಿಸಬಹುದು.

ಬೆಂಕಿಯಲ್ಲಿ ಭೌತಿಕ ಪದಾರ್ಥಗಳನ್ನು ಆಹುತಿಕೊಡುವುದೇ **ಯಜ್ಞ** ಶಬ್ದಕ್ಕೆ ಮೊದಲು ಇದ್ದ ಅರ್ಥ. ಆದರೆ ಕಾಲಾಂತರದಲ್ಲಿ ಯಾವುದಾದರೊಂದು ಶ್ರೇಷ್ಠ ವಸ್ತುವಿನ ಉದ್ದೇಶಕ್ಕಾಗಿ ಅದಕ್ಕಿಂತ ಕಡಿಮೆ ಮಹತ್ವದ ಪದಾರ್ಥವನ್ನು ಆಹುತಿ ಕೊಡುವುದು, ಅರ್ಥಾತ್ ತ್ಯಾಗ ಮಾಡುವುದು ಎಂಬ ಅರ್ಥವನ್ನು ಅದು ಸೂಚಿಸತೊಡಗಿತು. ಹೀಗೆ ಅರ್ಥವಿಕಾಸವಾಗಬೇಕಾದರೆ ಹಲವು ಶತಮಾನಗಳು ಕಳೆದಿರಬೇಕೆಂದು ತೋರುತ್ತದೆ.

ಗೀತೆಯಲ್ಲಿ ಕರ್ಮಕಾಂಡದ ಯಜ್ಞವನ್ನು ಕುರಿತು ಅನಾದರವನ್ನು ವ್ಯಕ್ತಗೊಳಿಸಲಾಗಿದೆ. ಬಳಿಕ ಅದರಲ್ಲಿ ಉತ್ತರೋತ್ತರ ಶ್ರೇಷ್ಠತರವಾದ ಬೇರೆಬೇರೆ ಯಜ್ಞಗಳನ್ನು ವರ್ಣಿಸಿದ್ದಾಗಿದೆ. ಇವುಗಳಲ್ಲಿ ಕೊನೆಯ ಮತ್ತು ಎಲ್ಲಕ್ಕೂ ಮಿಗಿಲಾದ ಯಜ್ಞವು ಜ್ಞಾನಯಜ್ಞ. ಗೀತೆಯಲ್ಲಿ ಪ್ರಾಣಾಯಾಮವನ್ನೂ ಯಜ್ಞವೆಂದೇ ಹೇಳಿದೆ.

ಶಬ್ದಗಳ ಅರ್ಥವು ಅವುಗಳನ್ನು ಉಪಯೋಗಿಸುವ ವ್ಯಕ್ತಿಯ ಬೆಳವಣಿಗೆಯೊಡನೆ ಹೇಗೆ ವಿಸ್ತೃತವಾಗುತ್ತ ಹೋಗುವುದೆಂಬುದಕ್ಕೆ ಗಾಂಧೀಜಿಯ **ಅಹಿಂಸೆ** ಇನ್ನೊಂದು ದೃಷ್ಟಾಂತ. **ಅಹಿಂಸಾ** ಶಬ್ದದ ಸರಳವಾದ ಮೂಲ ಅರ್ಥವೆಂದರೆ, ನೋಯಿಸದಿರುವುದು, ಬಲುಮೆಮಾಡದಿರುವುದು, ಕೊಲ್ಲದಿರುವುದು. ಬಹಳವಾದರೆ ಈ ಅಹಿಂಸೆಯೆಂಬುದೊಂದು ನೈತಿಕ ಸದ್ಗುಣ

ವೆಂದು ನೀವು ಹೇಳುವಿರಿ. ಆದರೆ ಈ ಶಬ್ದವು ಈ ಸಾಮಾನ್ಯ ಅವಸ್ಥೆಯಿಂದ ಮೇಲೇರುತ್ತೇರುತ್ತ ಕೊನೆಗೆ ಒಂದು ಆಧ್ಯಾತ್ಮಿಕ ಭಾವದ ರೂಪ ವನ್ನು ಧರಿಸಿ ಸಾಕ್ಷಾತ್ ಸತ್ಯಕ್ಕೆ ಸರಿದೊರೆ ಯಾದ ಸ್ಥಾನವನ್ನು ಪಡೆಯಿತು. ಹೀಗೆ ಗಾಂಧೀ ಜಿಯ ದೃಷ್ಟಿಯಲ್ಲಿ ಸತ್ಯ ಅಹಿಂಸೆಗಳ ಜೋಡಿಯು ಮಾನವನ ಮತ್ತು ಸಮಾಜದ ಆಧ್ಯಾತ್ಮಿಕ ಜೀವನದ ಆಧಾರಭೂತ ಮತ್ತು ಅವಿಭಾಜ್ಯ ತತ್ವವಾಗಿ ರೂಪುಗೊಂಡುಬಿಟ್ಟಿತು.

ನೀವು **ಅಹಿಂಸಾ** ಶಬ್ದದ ಸ್ಥಾನದಲ್ಲಿ **ಪ್ರೇಮ** ಶಬ್ದವನ್ನೇಕೆ ಉಪಯೋಗಿಸುವುದಿಲ್ಲ? ಎಂದು ಗಾಂಧೀಜಿಯನ್ನು ಯಾರೋ ಒಂದು ಸಲ ಕೇಳಿದರು. ಅದಕ್ಕೆ ಅವರು, "ನನ್ನ ದೃಷ್ಟಿಯಲ್ಲಿ ಪ್ರೇಮವೂ ಅಹಿಂಸೆಯಲ್ಲಿ ಸೇರಿ ಕೊಂಡಿದೆ" ಎಂದು ಉತ್ತರವಿತ್ತರು. ಇದಲ್ಲದೆ ಪ್ರೇಮ ಶಬ್ದದಂತೆ ಅಹಿಂಸಾ ಶಬ್ದವನ್ನು ತಪ್ಪು ಇಲ್ಲವೆ ಸಂಕುಚಿತ ಅರ್ಥದಲ್ಲಿ ಬಳಸಬಹುದೆಂಬ ಅಂಜಿಕೆಯಿಲ್ಲ. ಕೊನೆಕೊನೆಗೆ ಗಾಂಧೀಜಿ ಎಷ್ಟು ಮುಂದೆ ಹೋದರೆಂದರೆ, ಗೌಪ್ಯ ಅಥವಾ ಬಚ್ಚಿ ಡುವುದು ಕೂಡ ಒಂದು ಬಗೆಯ ಹಿಂಸೆಯೆಂದೇ ಅವರು ಹೇಳಿದರು. ಅಹಿಂಸೆಯ ಅರ್ಥ ಅವರ ಪಾಲಿಗೆ ಅಷ್ಟು ಗಹನವೂ ಸೂಕ್ಷ್ಮವೂ ಆಗಿ ಬಿಟ್ಟಿತ್ತು.

ಶ್ರೀ ಅರವಿಂದರ ಜೀವನದಲ್ಲಿ ಯೋಗ ಶಬ್ದವೂ ಹೀಗೆಯೇ ಆಯಿತು. ಅರವಿಂದರಿ ಗೇನೋ ಪ್ರಾರಂಭದಲ್ಲೇ ಕೆಲ ಆಧ್ಯಾತ್ಮಿಕ ಅನು ಭೂತಿಗಳು ಆಗಿದ್ದವು. ಆದರೆ ಅವರ ಜೀವನ ದಲ್ಲಿ ವ್ಯಾವಹಾರಿಕ ನಿಯಮದ ರೂಪದಲ್ಲಿ ಯೋಗವು ಪ್ರವೇಶಿಸಿದ್ದು ಅವರು ಬಡೋದೆ ಯಲ್ಲಿದ್ದಾಗಲೇ.

ಎಲ್ಲರಂತೆ ಅವರೂ ಪ್ರಾಣಾಯಾಮದಿಂದಲೇ ಪ್ರಾರಂಭಿಸಿದರು. ಅವರು ಇದರಲ್ಲಿ ಎಷ್ಟು ಮುನ್ನಡೆದರೆಂದರೆ ದಿನಕ್ಕೆ ಐದಾರು ತಾಸುಗಳ ವರೆಗೂ ಅವರು ಪ್ರಾಣಾಯಾಮದಲ್ಲಿ ಕಳೆಯ ತೊಡಗಿದರು. ಅವರ ಸಾಧನೆಯೆಲ್ಲವೂ ಭೌತಿಕ ಅರ್ಥಾತ್ ಕ್ಷಾತ್ರತೇಜದ ನೆರವಿಲ್ಲದೆಯೇ ಪ್ರಭಾವಶಾಲಿಯಾಗಬಲ್ಲ ಬ್ರಾಹ್ಮತೇಜಸ್ಸು ಅಥವಾ ಆತ್ಮಶಕ್ತಿಯನ್ನು ಸಂಪಾದಿಸುವುದ ಕ್ಕಾಗಿ ಇತ್ತೆಂದು ಅನಂತರದ ಅವರ ಅನೇಕ ವಚನಗಳಿಂದ ವೇದ್ಯವಾಗುತ್ತದೆ.

ಶ್ರೀ ಅರವಿಂದರ ಪ್ರಗತಿಯ ಮುಂದಿನ ಹಂತ ದಲ್ಲಿ ಅವರು ಸಮಸ್ತ ಚಿತ್ತವೃತ್ತಿಗಳನ್ನು ನಿರೋ ಧಿಸಿ ನಿಷ್ಪಂದ ಚೈತನ್ಯದ ಆನಂದವನ್ನು ಸವಿಯ ಲಾರಂಭಿಸಿದರು. ಆದರೆ ಇದನ್ನು ಪಡೆಯುವುದೇ ಅವರ ಚರಮ ಅಭೀಷ್ಟವಾಗಲಿ ಉದ್ದೇಶವಾಗಲಿ ಇದ್ದಿಲ್ಲ. ಆಗ ಅವರ ಹೃದಯದಲ್ಲಿ ಭಾರತ ವನ್ನು ಸ್ವತಂತ್ರಗೊಳಿಸುವ ಅದಮ್ಯ ಅಭಿಲಾಷೆ ಯಿತ್ತು. ಭಾರತದ ವಿಮೋಚನೆಯೇ ಆಧ್ಯಾ- ತ್ಮಿಕ ಪುನರುಜ್ಜೀವನದ ಮೊದಲನೇ ಹಂತ ವೆಂದವರು ಭಾವಿಸಿದ್ದರು. ಆದ್ದರಿಂದ ಅವರು "ಕರ್ಮಸು ಕೌಶಲಮ್" — ಅರ್ಥಾತ್ ಕರ್ಮಯೋಗವನ್ನು ಅಭ್ಯಸಿಸಿದರು. ಅವರು ಆ ವರೆಗೆ ದೊರಕಿಸಿಕೊಂಡಿದ್ದ ಸಮಾಹಿತ ಚಿತ್ತ ವೃತ್ತಿಯನ್ನು ಅಕ್ಷುಣ್ಣವಾಗಿಟ್ಟುಕೊಂಡು ಸಂಗ ಡಲೇ ಕರ್ಮವನ್ನು ಮಾಡುತ್ತಿರಲು ಸಮರ್ಥ ರಾದರು.

ಇದಕ್ಕೂ ಮುಂದಿನ ಹಂತವನ್ನು ಅವರು ಅಲಿಪುರ ಸೆರೆಮನೆಯಲ್ಲಿದ್ದಾಗ ತಲುಪಿದರು. ಅಲ್ಲಿ ಉಗ್ರವೂ ನಿರಂತರವೂ ಆದ ಸಾಧನೆಯಿಂದ ಅವರಿಗೆ ಶ್ರೀಕೃಷ್ಣನ ದರ್ಶನವಾಯಿತು. "ವಾಸು ದೇವಃ ಸರ್ವಂ" ಎಂಬುದರ ಸಾಕ್ಷಾತ್ ಅನು ಭವ ಅವರಿಗೆ ಆಯಿತು. ಎಲ್ಲ ಕಡೆ, ಎಲ್ಲದರಲ್ಲಿ, ಎಲ್ಲರಲ್ಲಿ ವಾಸುದೇವನೇ ತುಂಬಿ ತುಳುಕುತ್ತಿದ್ದಾ ನೆಂಬ ತತ್ವ ಅವರಿಗೆ ಸಾಕ್ಷಾತ್ಕಾರವಾಯಿತು. ವಾಸುದೇವರೂಪದಲ್ಲಿ ಕೂಟಸ್ಥ ಪರಬ್ರಹ್ಮವನ್ನು ಅವರು ಕಂಡರು.

ಸಾಮಾನ್ಯ ಸಾಧಕರ ಸಾಧನೆಯು ಸಿದ್ಧಿಯ ಈ ಅವಸ್ಥೆಯಲ್ಲೇ ಮುಕ್ತಾಯವಾಗುತ್ತದೆ. ಆದರೆ ಶ್ರೀ ಅರವಿಂದರ ಸಾಧನೆ ಅಸಾಧಾರಣವಾಗಿತ್ತು. ಅಷ್ಟರಲ್ಲಿ ಅವರ ಪಾಲಿಗೆ— ಈ ವಿಷಯವನ್ನು ಅರಿ ಯಲು ಹೆಣಗುವವರ ಪಾಲಿಗೆಲ್ಲ ಆದಂತೆ— ಸಮಸ್ತ ಜೀವನವೇ ಯೋಗವಾಗಿಬಿಟ್ಟಿತ್ತು.

ಸ್ವತಃ ನಿಸರ್ಗವೇ ವಿಕಾಸಕ್ಕಾಗಿ—ತನ್ನ ಸಾಮರ್ಥ್ಯದ ಪೂರ್ಣಾವಸ್ಥೆಯನ್ನು ಹೊಂದುವುದಕ್ಕಾಗಿ —ಯೋಗಸಾಧನೆಯಲ್ಲಿ ನಿರತವಾಗಿದೆ. ನಿಸರ್ಗದ ಈ ಸಾಧನೆಯಲ್ಲಿ ಅರಿತು ಭಾಗವಹಿಸಿ- ಅದನ್ನು ತೀವ್ರಗೊಳಿಸುವ ಸೌಭಾಗ್ಯ ಮನುಷ್ಯನಿಗೆ ದೊರಿತಿರುವುದು ದೊಡ್ಡ ಮಾತು.

ಈ ಮಟ್ಟವನ್ನು ತಲುಪಿದ ಬಳಿಕ, ಶ್ರೀ ಅರವಿಂದರು ಅರಸುತ್ತಿದ್ದುದು ವೈಯಕ್ತಿಕ ಮೋಕ್ಷವನ್ನಲ್ಲ; ಒಬ್ಬ ಮನುಷ್ಯನ ಸಮಸ್ಯೆಯ ಪ್ರತ್ಯೇಕ ಸಮಾಧಾನವಲ್ಲ. ಅವರಿಗೆ ಒಂದು ಸಾಮಾಜಿಕ ಸಮಸ್ಯೆಯನ್ನೇ ಬಿಡಿಸಬೇಕಾಗಿತ್ತು; ಇಡೀ ಮಾನವ ಜಾತಿಯ ಅನಿವಾರ್ಯವಾದ ಅಗತ್ಯವನ್ನು ಪೂರೈಸುವುದು ಅವರ ಧ್ಯೇಯವಾಗಿತ್ತು.

ಮಾನವಜಾತಿಯ ಬೇನೆಗಳ ಉಪಶಮನ ಮತ್ತು ಉಪಚಾರಕ್ಕಾಗಿ ಬೇರೆ ಎಷ್ಟೋ ವಿಧದ ಕ್ರಮಗಳು ಪ್ರವೃತ್ತವಾಗಿವೆ. ಬೇನೆಗಳ ಉಪಚಾರ ಮಾಡಿದರೆ ಸಾಲದು, ಅವುಗಳನ್ನು ನಿರೋಧಿಸುವುದು ಆವಶ್ಯವೆಂದು ಅರವಿಂದರು ಕಂಡುಕೊಂಡರು. ಮಾನವ ಪ್ರಕೃತಿಯು ಭೂತತತ್ವ, ಪ್ರಾಣ ಮತ್ತು ಮನಸ್ಸು, ಇವನ್ನೆಲ್ಲ ಹೆಚ್ಚೆಚ್ಚು ಎತ್ತರವಾದ ಮಟ್ಟಕ್ಕೆ ಒಯ್ದು ಅವುಗಳನ್ನು ದಿವ್ಯವಾಗಿ ಮಾಡಿದಾಗಲೇ ಇದು ಸಾಧ್ಯವೆಂದೂ ಅವರಿಗೆ ಖಂಡಿತವಾಗಿತ್ತು.

ಇದೇ ಸಕಲ ಮಾನವಜಾತಿಯ ಯೋಗ. ಇದರ ಉದ್ದೇಶ ದೇವತ್ವವನ್ನು ಸಂಪಾದಿಸುವುದು, ಮಾನವನಲ್ಲಿ ದೇವತ್ವದ ಅವತಾರವಾಗುವಂತೆ ಮಾಡುವುದು. ಶ್ರೀ ಅರವಿಂದರು ತಮ್ಮ ಆರ್ಷದೃಷ್ಟಿಯಿಂದ, ಈ ಕಾರ್ಯವು ಅತಿಮಾನಸದಿಂದಲೇ ಸಾಧಿಸತಕ್ಕದ್ದೆಂದು ಕಂಡುಕೊಂಡರು. ಅತಿಮಾನಸವೇ ಈಶ್ವರನನ್ನೂ ಸೃಷ್ಟಿಯನ್ನೂ ಜೋಡಿಸುವ ಗೊಣಸು.

ಈ ಪ್ರಕಾರ ಅರವಿಂದರ ಈ ಯೋಗವು ಸಮಗ್ರ ಮಾನವ ಜಾತಿಗಾಗಿ ಅಮೃತವನ್ನು ಇಳಿಸಿ ತರುವ ಮಾರ್ಗವಾಗಿದೆ.

ಹೀಗೆ ಶ್ರೀ ಅರವಿಂದರ ಯೋಗದ ಗುರಿಯು ವಿಶಾಲವಾಗುತ್ತ ಹೋಗಿ ಕೊನೆಗೆ ಅದು ಭಗವಂತನ ಇಚ್ಛೆಯೊಡನೆ ಬೆರೆತು ಏಕರೂಪವಾಗಿ ಬಿಟ್ಟಿತು.

ಅವರ ಯೋಗವಿಧಾನದಲ್ಲಿಯೂ ಇದೇ ಬಗೆಯ ವಿಕಾಸವಾದುದನ್ನು ಕಾಣಬಹುದು. ಸಾಮಾನ್ಯವಾದ ಪ್ರಾಣಾಯಾಮದಿಂದ ತೊಡಗಿದ ಸಾಧನೆಯು ಪೂರ್ಣಯೋಗದಲ್ಲಿ ಪರಿಣತವಾಯಿತು. ಪೂರ್ಣಯೋಗದಲ್ಲಿ ಸಾಧಕನ ಸಾಧನೆಯು ಮಾತೆಯಲ್ಲಿ ಸಂಪೂರ್ಣ ಸಮರ್ಪಣಭಾವದಿಂದಾರಂಭವಾಗಿ ಅದರಲ್ಲೇ ಪರ್ಯವಸಾನ ಹೊಂದುತ್ತದೆ. ಅದರಲ್ಲಿ ಮನುಷ್ಯನು ಮಾತೆಯ ಉದ್ದೇಶಸಿದ್ಧಿಯಲ್ಲಿ ನಿಮಿತ್ತಮಾತ್ರನಾಗಿರುತ್ತಾನೆ. ಈ ಸ್ಥಿತಿಯಲ್ಲಿ ಕರ್ಮಯೋಗ, ರಾಜಯೋಗ ಮೊದಲಾದ ಭೇದಗಳೆಲ್ಲ ಲಯವಾಗಿ ಹೋಗುತ್ತವೆ. ಅದು ಮನುಷ್ಯನ ಪೂರ್ಣ ಸಮರ್ಪಣವಾಗಿದೆ.



ಹುಟ್ಟುವಾಗ ಮನುಜ ಬಹಳ ಕೋಮಲ, ಅಬಲ,  
ಸಾವಿನಲ್ಲಿ ಕೊರಡಿನಂತೆ ಪರುಷ, ಕಠೋರ;  
ಗಿಡ ಮರಗಳು ಬದುಕಿನಲ್ಲಿ ಮೆತ್ತಗೆ, ಸರಸ,  
ಸತ್ತವೋ ಮತ್ತೆ ಒರಟು, ಕಠಿನ, ಶುಷ್ಕ.  
ಕಠಿನತನವು ಬಿರುಸುತನವು ಸಾವಿನ ಸಖರು,  
ಮಾರ್ದವವೂ ನಯವೂ ಅವು ಬದುಕಿನ ಸಖರು.

— ಚೀನಿ ಋಷಿ ಲಾವೊತ್ಸೆ



# ಕೇರಳದಲ್ಲಿ ಕಮ್ಯುನಿಸ್ಟರು ಸಾಧಿಸಿದ್ದೇನು?

**ಅವರು ಯಾವ ಅವ್ಯಾಪಾರದಲ್ಲೂ ಹಿಂದಿನ ಮಂತ್ರಿ ಮಂಡಳಗಳಿಗಿಂತ ಹಿಂದುಳಿದಿಲ್ಲ !**

೧೯೫೭ ಎಪ್ರಿಲ್ ತಿಂಗಳಲ್ಲಿ ಇಡೀ ಜಗತ್ತಿನ ದೃಷ್ಟಿ ಆ ವರೆಗೆ ಅಜ್ಞಾತಪ್ರಾಯವಾಗಿದ್ದ ಕೇರಳ ರಾಜ್ಯದತ್ತ ತಿರುಗಿತು. ಅಲ್ಲಿ ಅಭೂತಪೂರ್ವವಾದ ಒಂದು ಸಂಗತಿ ಘಟಿಸಿತ್ತು. ಕಮ್ಯುನಿಜಂನ ಇತಿಹಾಸದಲ್ಲಿ ಪ್ರಥಮ ಬಾರಿಗೆ ಕಮ್ಯುನಿಸ್ಟರು ಚುನಾವಣಿಯಲ್ಲಿ ಗೆದ್ದು ಬಹುಮತ ಗಳಿಸಿದ್ದರು.

ಈ ಜಯ ಕಮ್ಯುನಿಸ್ಟರಿಗೇ ವಿಸ್ಮಯವುಂಟು ಮಾಡಿತು. ಆದರೆ ಅವರು ಪಳಗಿದ ನಾಯಕರಾದ ಇ. ಎಂ. ಎಸ್. ನಂಬೂದ್ರಿಪಾದರ ನೇತೃತ್ವದಲ್ಲಿ ೧೧ ಜನರ ಮಂತ್ರಿಮಂಡಳ ರಚಿಸಿದಾಗ ಜಗತ್ತು ಚಿಂತಾಕುಲ ಕುತೂಹಲದಿಂದ ಅವರು ಏನು ಮಾಡಬಹುದು ಎಂದು ಪ್ರಶ್ನಿಸಿತು. ಇದು ನಡೆದು ಈಗ ಒಂದು ವರ್ಷವಾಗಿದೆ. ತಕ್ಕ ಮಟ್ಟಿಗೆ ಪ್ರಶ್ನೆಗೆ ಉತ್ತರವೂ ಬಂದಂತಾಗಿದೆ. ಅದೆಂದರೆ, ಕಮ್ಯುನಿಷ್ಟರು ಯಾವ ಜಾದುವನ್ನೂ ಮಾಡಿ ತೋರಿಸಲಾರರು ಎಂದು. ಅಧಿಕಾರಕ್ಕೆ ಬರುತ್ತಲೇ ಕೇರಳ ಕಮ್ಯುನಿಸ್ಟ ಧುರೀಣರು ತಮ್ಮ ಕ್ರಾಂತಿಕಾರಿ ಸೋಗನ್ನು ಬಿಸುಟು ವಸ್ತುಸ್ಥಿತಿಯಂತೆ ವರ್ತಿಸಬೇಕಾಯಿತು. ಅವರು ತಮ್ಮ ಚುನಾವಣಿ ಘೋಷಣೆಯಲ್ಲಿ ಜನತೆಗೆ ೯೪ ವಚನಗಳನ್ನಿತ್ತಿದ್ದರು. ಅಧಿಕಾರ ಸ್ವೀಕರಿಸಿದ ಮೇಲೆ ಆ ಧಾಟಿಯಲ್ಲಿ ಮಾತಾಡುವದನ್ನು ಅವರು ಬಿಟ್ಟರು. " ಸ್ಥಿರ, ಕಾರ್ಯಕ್ಷಮ ಆಡಳಿತವನ್ನು ಒದಗಿಸುವ ಮತ್ತು ಸದ್ಯದ ಪಂಚವಾರ್ಷಿಕ ಯೋಜನೆಯನ್ನು ಹೆಚ್ಚು ಶೀಘ್ರದಲ್ಲಿ ಮತ್ತು ಕಾರ್ಯಕ್ಷಮ ರೀತಿಯಲ್ಲಿ ಆಚರಣೆಗೆ ತರುವ" ಮಾತನ್ನು ಅವರು ಕೇರಳದ ಜನತೆಗೆ ಹೇಳತೊಡಗಿದರು.

ಅಂತೆಯೇ ಕೇರಳ ಕಮ್ಯುನಿಸ್ಟ್ ಪಕ್ಷದ ಪ್ರಧಾನ ಕಾರ್ಯದರ್ಶಿ, " ಇಲ್ಲಿ ನಾವೇನೂ ಕ್ರಾಂತಿಯ ಯೋಜನೆಯನ್ನು ಇಟ್ಟುಕೊಂಡಿಲ್ಲ" ಎಂದರು. ಅವರು ತಮ್ಮ ಪಕ್ಷದ ಮಂತ್ರಿ

Freedom First ನಿಂದ

ಮಂಡಳವನ್ನು ಕಮ್ಯುನಿಸ್ಟ ಮಂತ್ರಿಮಂಡಳ ವೆಂದು ಕೂಡ ಕರೆಯಲಿಲ್ಲ. ಪತ್ರಿಕಾ ಪರಿಷತ್ತೊಂದರಲ್ಲಿ, "ಇದು ಕಮ್ಯುನಿಸ್ಟರ ನೇತೃತ್ವ ದಲ್ಲಿರುವ ಸಾಮಾನ್ಯ ಜನರ ಮಂತ್ರಿಮಂಡಳ" ಎಂದು ನುಡಿದರು.

ಕಮ್ಯುನಿಸ್ಟ ಮಂತ್ರಿಮಂಡಳವು ತನ್ನ ಹಿಂದಿನ ಮಂತ್ರಿಮಂಡಳಗಳಿಗಿಂತ ಯಾವ ವಿಚಾರದಲ್ಲೂ ಅಪ್ರತಿಮವೆನ್ನಿಸಿಕೊಂಡಿಲ್ಲ. ಹಾಗೆ ನೋಡಿದರೆ ಅವುಗಳಿಗಿಂತ ಇದು ಕನಿಷ್ಠವೇ ಎನ್ನಬಹುದು. ಆಡಳಿತವನ್ನು ಬಲಗೊಳಿಸಲು ಅದು ಸಮರ್ಥ ವಾಗಿಲ್ಲ. ಕಮ್ಯುನಿಸ್ಟ ಪಕ್ಷದ ಕೇರಳ ರಾಜ್ಯ ಸಮಿತಿಯೇ ಅದಕ್ಕಾಗಿ ಮಂತ್ರಿಮಂಡಳವನ್ನು ಟೀಕಿಸಿಯೂ ಇದೆ.

"ಪಂಚವಾರ್ಷಿಕ ಯೋಜನೆಯಲ್ಲಿ ಕೇರಳದ ಪಾಲಿಗೆ ಗೊತ್ತುಪಡಿಸಿದ ೮೭ ಕೋಟಿ ರೂಪಾಯಿ ಸಾಲದು. ಅದನ್ನು ೨೦೦ ಕೋಟಿಗೇರಿಸಲು ನಾವು ಒತ್ತಾಯಪಡಿಸುವೆವು" ಎಂದು ಪ್ರಾರಂಭ ದಲ್ಲಿ ಕಮ್ಯುನಿಸ್ಟರು ಕೊಚ್ಚಿಕೊಂಡಿದ್ದರು. ಆದರೆ ಪಂಚವಾರ್ಷಿಕ ಯೋಜನೆಯ ಎರಡ ನೆಯ ವರ್ಷಕ್ಕಾಗಿ ಕೇರಳಕ್ಕೆ ತೆಗೆದಿಟ್ಟ ೧೭.೯೦ ಕೋಟಿ ರೂಪಾಯಿಗಳಲ್ಲಿ ಮೊದಲಿನ ಏಳು ತಿಂಗಳಲ್ಲಿ ೪.೨೧ ಕೋಟಿ ರೂಪಾಯಿಗಳಿಗಿಂತ ಹೆಚ್ಚನ್ನು ಬಳಸಿಕೊಳ್ಳುವದು ತಮಗೆ ಸಾಧ್ಯವಾ ಗಿಲ್ಲವೆಂದು ಮುಖ್ಯ ಮಂತ್ರಿ ನಂಬೂದ್ರಿಪಾದರು ವಿಧಾನ ಸಭೆಯಲ್ಲಿ ಒಪ್ಪಿಕೊಳ್ಳಬೇಕಾಯಿತು. ರಾಜ್ಯಪಾಲರ ಭಾಷಣದಲ್ಲಿ "ಕೇರಳದಲ್ಲಿ ಧ್ಯೇಯಕ್ಕೂ ಸಿದ್ಧಿಗೂ ಇರುವ ಅಂತರ ವಿಷಾದ ಕರವಾಗಿದೆ" ಎಂದು ಹೇಳಬೇಕಾಯಿತು.

ಇದೊಂದೇ ಮಂತ್ರಿ ಮಂಡಳದ ತಪ್ಪಲ್ಲ. ಬುದ್ಧಿಪೂರ್ವಕವಾಗಿ ಪೂರ್ವಯೋಜನೆಯಂತೆ ಅವರು ದುರಾಡಳಿತಕ್ಕೆ ಎಡೆ ಮಾಡಿಕೊಟ್ಟಿ ದ್ದಾರೆ.

ಕಮ್ಯುನಿಸ್ಟರು ಅಧಿಕಾರಕ್ಕೆ ಬಂದೊಡನೆ ಕೇರಳದ ಕಮ್ಯುನಿಸ್ಟ ಪತ್ರಿಕೆಗಳು ಪೋಲೀಸರ ಮೇಲೂ ಇನಸ್ಪೆಕ್ಟರ ಜನರಲ್ ಚಂದ್ರಶೇಖರ ನಾಯರರ ಮೇಲೂ ಅಪಪ್ರಚಾರದ ಸತ್ರವನ್ನೇ ಆರಂಭಿಸಿದವು. ಮಂತ್ರಿಗಳು ಕೂಡ ಪೋಲೀಸ ರನ್ನು ಸಾರ್ವಜನಿಕ ಸಭೆಗಳಲ್ಲಿ ಖಂಡಿಸಿ, "ಪೋಲೀಸ ಪಡೆ ಇದುವರೆಗಿನಂತೆ ಸ್ವಾರ್ಥಿಗಳ ಸೇವೆಮಾಡುವ ಪಡೆಯಾಗದೆ ಜನತೆಯ ಸೇವೆ ಮಾಡುವ ಜನತಾ ಪಡೆಯಾಗುವ" ಅಗತ್ಯ ವನ್ನು ಸಾರಿದರು. ಎಲ್ಲೆಡೆಗಳಿಂದ ಘಾತಿಸಲ್ಪಟ್ಟ ಪೋಲೀಸರು ಕಾಯದೆ ಸುವ್ಯವಸ್ಥೆಗಳ ರಕ್ಷಣೆ ಗಾಗಿ ಮಾಡಬೇಕಾದ ದೈನಂದಿನ ಸಾಮಾನ್ಯ ಕರ್ತವ್ಯಗಳನ್ನೂ ನೆರವೇರಿಸಲು ಅಸಮರ್ಥ ರಾಗುವಂಥ ಪರಿಸ್ಥಿತಿಯುಂಟಾಯಿತು. ಕಮ್ಯು ನಿಸ್ಟರು ಅವರ ಅಧಿಕಾರವನ್ನು ಕೈಗೆ ತೆಗೆದುಕೊಂಡರು. ಸಮಾಜ ವಿರೋಧಿ ಪುಂಡರಿಗೆ ತಾಂಡವವಾಡಲು ಅವಕಾಶ ಸಿಕ್ಕಿತು. ನಾಡಿನಲ್ಲಿ ಹಾಹಾಕಾರವೆದ್ದಿತು. ಕೊನೆಗೆ ಕೇರಳ ಕಮ್ಯುನಿಸ್ಟ ರಾಜ್ಯಸಮಿತಿಯ ಕಾರ್ಯದರ್ಶಿಯೇ ಪೋಲೀಸರ ದೌರ್ಬಲ್ಯವನ್ನು ಖಂಡಿಸುವ ಪ್ರಸಂಗ ಬಂತು. ಆದರೆ ಅವರು ಈ ಮಾತಿಗೆ ಬಣ್ಣ ಬಳಿದು ಪೋಲೀಸರು ಕಮ್ಯು ನಿಸ್ಟರನ್ನು ಅಧಿಕಾರಚ್ಯುತರನ್ನಾಗಿ ಮಾಡಲು ಬೇಕೆಂದೇ ಹೀಗೆ ಮಾಡುತ್ತಿದ್ದಾರೆಂದು ಆರೋಪಿ ಸಿದರು. ಈ ಪರಿಸ್ಥಿತಿಯನ್ನು ಸಹಿಸಲಾರದೆ ಕೇರ ಳದ ಪೋಲೀಸ ಇನಸ್ಪೆಕ್ಟರ ಜನರಲ್ಲರು ನಿವೃತ್ತಿ ಪೂರ್ವದ ರಜೆ ತೆಗೆದುಕೊಂಡು ಹೋದರು.

ಕೂಡಲೆ ಕಮ್ಯುನಿಸ್ಟ ಸರಕಾರ ಇಬ್ಬರು ಪೋಲೀಸ ಇನಸ್ಪೆಕ್ಟರ ಜನರಲ್ಲರನ್ನು ನೇಮಿ ಸಿತು. "ಆಡಳಿತದಲ್ಲಿ ದಕ್ಷತೆ ಹೆಚ್ಚುವಂತೆ ಮಾಡಲು" ಹೀಗೆ ಇಬ್ಬರನ್ನು ನೇಮಿಸಿದ್ದಾಗಿದೆ ಯೆಂದು ಅವರು ಹೇಳಿದರೂ ಕಮ್ಯುನಿಸ್ಟರ ಹಸ್ತ ಕ್ಷೇಪಕ್ಕೆಡೆ ಮಾಡಿಕೊಡುವುದೇ ಇದರ ಒಳ ಉದ್ದೇಶವೆಂದು "ಮಾತೃಭೂಮಿ" ಯಂಥ ಕಮ್ಯುನಿಸ್ಟ ಪರವಾಗಿದ್ದ ಪತ್ರಿಕೆಯೇ ಆಕ್ಷೇಪಿ ಸಿದೆ. ಒಂದೇ ಶಾಖೆಗೆ ಇಬ್ಬರು ವರಿಷ್ಠಾಧಿಕಾರಿ ಗಳಿರುವುದು ಕೇರಳವೊಂದರಲ್ಲೇ! ಪ್ರತಿ ಯೊಂದು ಶಾಖೆಯಲ್ಲೂ ಈ ಬಗೆಯಾಗಿ ಎರಡು ಅಥವಾ ಹೆಚ್ಚಿಗೆ ವರಿಷ್ಠರ ಸ್ಥಾನಕಲ್ಪಿಸಲಾ-

ಯಿತು. ಮೊದಲು ಶಿಕ್ಷಣ ಶಾಖೆಯಲ್ಲಿ ಒಬ್ಬ ಡಾಯರೆಕ್ಟರರಿದ್ದರೆ ಈಗ ಆರು ಜನರಿದ್ದಾರೆ.

ಆಡಳಿತದಲ್ಲಿ ಕಮ್ಯುನಿಸ್ಟರ ಹಸ್ತಕ್ಷೇಪ ದಿನ ದಿನಕ್ಕೆ ಹೆಚ್ಚುತ್ತಿದೆ. ಒಬ್ಬ ಮೆಜಿಸ್ಟ್ರೇಟನಿಗೆ ಅವರು ಬೆದರಿಕೆ ಹಾಕಿದರು; ಕಮ್ಯುನಿಸ್ಟ ಎಂ. ಎಲ್. ಎ. ಯೊಬ್ಬನು ಅನೇಕ ಕಮ್ಯು-ನಿಸ್ಟರೊಡನೆ ಹೋಗಿ ಡ್ಯೂಟಿಗೆ ಹೊರಟಿದ್ದ ಒಬ್ಬ ಪೋಲೀಸ ಸಬ್ ಇನ್‌ಸ್ಪೆಕ್ಟರ ಸಹಿತ ಪೋಲೀಸರನ್ನು ತಡೆದು ನಿಲ್ಲಿಸಿದನು. ಕಮ್ಯುನಿಸ್ಟರು ನ್ಯಾಯಸ್ಥಾನದ ಆಜ್ಞೆಗಳನ್ನು ಧಿಕ್ಕರಿಸಿದರು ಎಂಬ ವರದಿಗಳು ಬರುತ್ತಿವೆ. ಇಂಥವರ ಮೇಲೆ ಪೋಲೀಸರು ಖಟ್ಲೆ ಹಾಕಿದರೆ ಸರಕಾರ ಅದನ್ನು ಹಿಂತೆಗೆದುಕೊಳ್ಳುತ್ತಿದೆ!

ಆಡಳಿತದ ಅನೇಕ ಶಾಖೆಗಳಲ್ಲಿ ಕಮ್ಯುನಿಸ್ಟರು ಇನ್ನೊಂದು ಗತ್ತು ಕಲ್ಪಿಸಿದ್ದಾರೆ. ಎಲ್ಲವನ್ನು ಸಮಿತಿಗಳ ಮೂಲಕ ಮಾಡುವದೇ ಅದು. ಇದು ಲಂಚಗುಳಿತನ, ಸರ್ವಾಧಿಕಾರಿತ್ವ ಮೊದಲಾದವುಗಳನ್ನು ಅಳಿಸಿ ಸಾರ್ವಜನಿಕ ಸಹಕಾರವನ್ನು ಹೆಚ್ಚಿಸುವದಕ್ಕಾಗಿ ಎಂದು ಹೇಳಿದರೂ ಪರಿಣಾಮವು ಆಡಳಿತದ ಮೇಲೆ ಕಮ್ಯುನಿಸ್ಟರ ಹಿಡಿತವನ್ನು ಬಲಪಡಿಸುವಂತಾಗಿದೆ. ಇಂಥ ೧,೪೦೦ ಸಮಿತಿಗಳಲ್ಲಿ ಒಟ್ಟು ೧೫,೦೦೦ ಜನರಿದ್ದಾರೆ. ಇವರಲ್ಲಿ ೧೦,೦೦೦ ಜನ ಕಮ್ಯುನಿಸ್ಟರಾಗಲಿ ಅವರ ಸಹವಾಸಿಗಳಾಗಲಿ ಆಗಿದ್ದಾರೆ.

ಈ ಬಗೆಯ ಅಸಂಖ್ಯ ಸಮಿತಿಗಳು ಮತ್ತು ಶಾಖೆಯ ವರಿಷ್ಠರ ಸ್ಥಳಗಳನ್ನು ಹೆಚ್ಚಿಸಿರುವದರಿಂದ ರಾಜ್ಯದ ಆರ್ಥಿಕ ಪರಿಸ್ಥಿತಿಯ ಮೇಲೆ ಬಹು ಭಾರ ಬಿದ್ದಿದೆ. ಮಿತವ್ಯಯಕ್ಕಾಗಿ ಸರಕಾರ ಪ್ರಾರಂಭಿಸಿದ ಕ್ರಮಗಳು ಅರ್ಥಹೀನವಾದಂತಾಗಿವೆ. ರಾಜ್ಯದ ಉತ್ಪನ್ನದಲ್ಲಿ ನೂರಕ್ಕೆ ೫೨ ರಷ್ಟು ಸರಕಾರೀ ನೌಕರರ ಸಂಬಳ ಮತ್ತು ಭತ್ತೆಗಳಿಗಾಗಿ ವ್ಯಯವಾಗುತ್ತಿದೆ. ರಾಜ್ಯಪಾಲರ ಆಡಳಿತವಿದ್ದಾಗ ಆಡಳಿತ ವೆಚ್ಚ ರೂ. ೯೪.೩೨ ಲಕ್ಷಗಳಷ್ಟಿದ್ದುದು ೧೯೫೭-೫೮ ರಲ್ಲಿ ೧೨೫.೩೩ ಲಕ್ಷ ರೂಪಾಯಿಗಳಷ್ಟಾಗಿ ೧೯೫೮-೫೯ ರಲ್ಲಿ ೧೨೮.೦೯ ಲಕ್ಷ ರೂಪಾಯಿಗಳಿಗೆ ಮುಟ್ಟುವದು. ಇದರಿಂದ ಕಳೆದ ವರ್ಷ ರೂ. ೨೦ ಲಕ್ಷ ಉಳಿತಾಯ ತೋರಿಸಿದ್ದ ಮುಂಗಡ ಪತ್ರಿಕೆ ವಾಸ್ತವದಲ್ಲಿ ರೂ. ೨೧ ಲಕ್ಷಗಳ ಕೊರತೆಯಲ್ಲಿ ಪರಿಣಮಿಸಿದ್ದೇನೂ ಆಶ್ಚರ್ಯವೆನಿಸುವದಿಲ್ಲ.

ಕಮ್ಯುನಿಸ್ಟರ ಆಡಳಿತದಲ್ಲಿ ಕನಿಷ್ಠ ಪಕ್ಷಕ್ಕೆ ಲಂಚಗುಳಿತನ ಇರಲಿಕ್ಕಿಲ್ಲ, ಪ್ರಾಮಾಣಿಕ ಆಡಳಿತ ನಡೆದೀತು ಎಂದು ಜನ ಹಾರಯಿಸಿದ್ದರು. ಹಿಂದಿನ ಆಡಳಿತಗಳಲ್ಲಿ ಲಂಚಗುಳಿತನ, ಅಪ್ರಾಮಾಣಿಕತನ ಮನೆಮಾಡಿದ್ದವೆಂದೇ ಕಮ್ಯುನಿಸ್ಟರು ಅಧಿಕಾರಕ್ಕೆ ಬರಲು ಅನುಕೂಲವಾಯಿತು. ಆದರೆ ಒಂದೇ ಒಂದು ವರ್ಷ ಆಡಳಿತ ನಡೆಸುವಷ್ಟರಲ್ಲಿ ಕಮ್ಯುನಿಸ್ಟರು ಪಕ್ಷದ ಮತ್ತು ವೈಯಕ್ತಿಕ ಮಟ್ಟದಲ್ಲಿ ಲಂಚಗುಳಿತನ ಮತ್ತು ಅಪ್ರಾಮಾಣಿಕತೆಗಳಲ್ಲಿ ತಾವು ಯಾರಿಗೂ ಹಿಂದುಳಿದವರಲ್ಲ ಎಂದು ತೋರಿಸಿಕೊಟ್ಟಿದ್ದಾರೆ.

ತಾವೇ ತಯಾರಿಸುತ್ತಿರುವ ಭೂಕಾಯದೆಯ ಹಿಡಿತದಿಂದ ಪಾರಾಗಲೆಂದು ಆ ಕಾಯದೆಯ ಕರಡನ್ನು ತಯಾರಿಸುತ್ತಿರುವಾಗಲೇ ಕಾಯದೆ ಮಂತ್ರಿಗಳು ತಮ್ಮ ಆಸ್ತಿಯಲ್ಲಿ ಬಹುಭಾಗವನ್ನು ಮಾರಾಟಮಾಡಿಕೊಂಡರು. ಆಂಧ್ರದಿಂದ ಸುಮಾರು ರೂ. ೩೦ ಲಕ್ಷದ ಅಕ್ಕಿಯನ್ನು ಪೇಟೆಯ ಧಾರಣೆ ಮಣಕ್ಕೆ ರೂ. ೩೪ ಇದ್ದಾಗ ರೂ. ೩೭ ರಂತೆ ಕೊಳ್ಳಲಾಯಿತು. ಖರೀದಿಯ ಕಾಲದಲ್ಲಿ ಟೆಂಡರು ಕರೆಯಲಿಲ್ಲ. ಕಾಮ್ರೇಡ ಪಿ. ಸುಂದ-ರಯ್ಯನವರ ಬಂಧುಗಳಿಗೆ ಸಂಬಂಧವಿದ್ದ ಕಂಪನಿಯಿಂದ ಅಕ್ಕಿ ಕೊಳ್ಳಲಾಯಿತು. ಈ ಕಂಪನಿಗೆ ಈ ಅಕ್ಕಿ ವ್ಯವಹಾರದಲ್ಲಿ ಚೀಲಕ್ಕೆ ೩೧ ನಯೆಪೈಸೆ ಕಮೀಶನ್ ಕೊಡಲಾಯಿತು. ಅದೇ ಕಂಪನಿ ಹಿಂದುಗಡೆ ಟೆಂಡರು ಕರೆದಾಗ ೭ ನ. ಪೈ. ಕಮೀಶನ್ನಿಗೆ ಒಪ್ಪಿತು. ಈ ಬಗ್ಗೆ ಕಮ್ಯುನಿಸ್ಟ ಸರಕಾರ ಇತ್ತಮೂರು ಪ್ರಕಟನೆಗಳಲ್ಲಿ ಮೊದಲನೆಯದರಲ್ಲಿ ೫,೦೦೦ ಟನ್ ಅಕ್ಕಿ ಮಾತ್ರ ಕೊಂಡಿತು, ಎಂದರೆ ಎರಡನೆಯದರಲ್ಲಿ ೧೫,೦೦೦ ಟನ್ ಎಂದೂ ಮೂರನೆಯದರಲ್ಲಿ ೨೧,೦೦೦ ಟನ್ ಎಂದೂ ಒಪ್ಪಿದೆ.

ಕಮ್ಯುನಿಸ್ಟ ಲೋಕಸಭಾ ಸದಸ್ಯ ಈಶ್ವರ ಅಯ್ಯರರು ಹಿಂದೆ ಪ್ರಜಾಸಮಾಜವಾದಿ ಮಂತ್ರಿಮಂಡಳವಿದ್ದಾಗ ಸರಕಾರಕ್ಕೆ ರೂ. ೫೦,೦೦೦ಕ್ಕೆ ಮಾರಲು ಒಪ್ಪಿದ ಭೂಮಿಯನ್ನು ಕಮ್ಯುನಿಸ್ಟ ಸರಕಾರ ಈಗ ರೂ. ೩ ಲಕ್ಷಕ್ಕೆ ಕೊಂಡಿದೆ.

ಶಿಕ್ಷಣ ಮಂತ್ರಿಗಳ ಮಗನಿಗೆ ಟೆಂಡರ್ ಕರೆಯದೆ ರೂ. ೧ ಲಕ್ಷದ ಪುಸ್ತಕ ಪೂರೈಸುವ ಗುತ್ತಿಗೆ ಕೊಡಲ್ಪಟ್ಟಿದೆಯೆಂದೂ ದೂರುಂಟು.

ಕಮ್ಯುನಿಸ್ಟ ಪಕ್ಷವು ಸರಕಾರಿ ರಸ್ತೆಸಾರಿಗೆ ಸಂಸ್ಥೆಯ ಕೆಲಸಗಾರರ ಸಂಘದ ಸಹಕಾರದಿಂದ ಖೊಟ್ಟಿ ತಿಕೀಟುಗಳನ್ನು ಮಾರಿ ಹಣ ಗಳಿಸುತ್ತಿದೆಯೆಂದೂ ವದಂತಿ ಇದೆ. ಬಸ್ ಸಾರಿಗೆಯ ಉತ್ಪನ್ನ ಹಿಂದಿಗಿಂತ ೬೫% ಕುಗ್ಗಲು ಇದೇ ಕಾರಣವೆಂದು ಹೇಳಲಾಗಿದೆ. *

ಕಮ್ಯುನಿಸ್ಟ ಆಡಳಿತದ ಅವ್ಯಾಪಾರದ ಕೆಲ ಉದಾಹರಣೆಗಳಿವು. ಹೇಳುತ್ತ ಹೋದರೆ ಇಂಥ ಇನ್ನೂ ನೂರಾರು ದೃಷ್ಟಾಂತಗಳನ್ನು ಕೊಡಬಹುದು.

ಕಮ್ಯುನಿಸ್ಟ ಆಡಳಿತದಿಂದ ಆ ಪಕ್ಷದವರ ಹೋಳಿಗೆ ತುಪ್ಪದಲ್ಲಿ ಬಿದ್ದಿದೆ. ವಿಧಾನ ಸಭಾ ಸದಸ್ಯರನೇಕರು ಬಂಗಲೆ ಕಟ್ಟಿಸುತ್ತಿದ್ದಾರೆ. ಲೋಕಸಭೆಯ ಕಮ್ಯುನಿಸ್ಟ ಪಕ್ಷದ ಉಪಧುರೀಣರಾದ ಎ. ಕೆ. ಗೋಪಾಲನ್ನರು ಕನ್ನಾನೂರ ಜಿಲ್ಲೆಯ ಮಾಲಮ್ ಎಮ್ಸನ್‌ದಲ್ಲಿ ೩೦೦ ಎಕರೆ ಭೂಮಿಗೆ ಒಡೆಯರಾಗಿದ್ದಾರೆ.

ಕೇರಳದ ಯಾವ ಸರಕಾರವೂ ಕಡೆಗಣಿಸಲಾರದ ಎರಡು ಮುಖ್ಯ ಸಮಸ್ಯೆಗಳೆಂದರೆ ಆಹಾರ ಕೊರತೆ ಮತ್ತು ಸುಶಿಕ್ಷಿತರ ನಿರುದ್ಯೋಗ ಇವು. ಆದರೆ ಕಮ್ಯುನಿಸ್ಟ ಸರಕಾರ ಈ ಒಂದು ವರ್ಷದಲ್ಲಿ ಆ ಬಗ್ಗೆ ಏನನ್ನೂ ಮಾಡಿಲ್ಲ. ಆಹಾರದ ವಿಚಾರದಲ್ಲಿ ಕೇಂದ್ರ ಸರಕಾರ ಸಹಕರಿಸುತ್ತಿಲ್ಲವೆಂದು ಕಮ್ಯುನಿಸ್ಟ ಸರಕಾರ ಹೇಳುತ್ತಿದೆ. ಆದರೆ ಕಳೆದವರ್ಷ ಇಡೀ ಭಾರತದ ರಾಜ್ಯಗಳಿಗೆ ಕೊಡಮಾಡಿದ ೫,೪೫,೦೦೦ ಟನ್ ಆಹಾರಧಾನ್ಯದಲ್ಲಿ ಕೇರಳವೊಂದಕ್ಕೇ ೨,೨೮,೦೦೦ ಟನ್ನುಗಳನ್ನೂ ಸಹಾಯಧನವೆಂದು ರೂ. ೩ ಕೋಟಿಯನ್ನೂ ಕೇಂದ್ರ ಸರಕಾರ ಕೊಟ್ಟಿದೆಯೆಂಬುದನ್ನು ಮರೆಯಲಾಗದು.

ನಿರುದ್ಯೋಗ ಸಮಸ್ಯೆಯ ಹಣೇಬರಹವೂ ಇದೇ. ಕಳೆದ ವರ್ಷ, ರಾಜ್ಯದಲ್ಲಿ ಒಂದು ವರ್ಷದೊಳಗಾಗಿ ಎಂಟು ಹೊಸ ಉದ್ದಿಮೆಗಳನ್ನು ಸ್ಥಾಪಿಸುವದಾಗಿ ವಚನವಿತ್ತ ಸರಕಾರಕ್ಕೆ ಒಂದನ್ನೂ ಪ್ರಾರಂಭಿಸುವದಾಗಲಿಲ್ಲ. "ಅನೇಕ ವ್ಯಾವಹಾರಿಕ ತೊಡಕುಗಳಿವೆ" ಎಂದೇ ಇದಕ್ಕೆ ಕೇರಳ ಅರ್ಥಮಂತ್ರಿಗಳ ಉತ್ತರ. ನಿರುದ್ಯೋಗಿಗಳ ಸಂಖ್ಯೆ ೬೧ ಸಾವಿರದಿಂದ ೬೮ ಸಾವಿರಕ್ಕೇರಿದೆ.

ರಾಜ್ಯದಲ್ಲಿ ಅಸುರಕ್ಷಿತತೆಯಿದೆಯೆಂದು ಸರಕಾರ ಒಪ್ಪುವದಿಲ್ಲ. ವಿರೋಧಿ ಪಕ್ಷದವರು ಆಡಳಿತ ಹದಗೆಡಿಸಲು, ಉದ್ದಿಮೆಗಳಿಗಾಗಿ ಬಂಡವಲ ಮುಂದೆ ಬರದಂತೆ ಮಾಡಲು ಯತ್ನಿಸುತ್ತಾರೆಂದು ಹೇಳುತ್ತಿದೆ.

ಕಳೆದ ವರ್ಷ ಅನೇಕ ಕಡೆ, ಮತ್ತು ಈ ವರ್ಷ ಮಾರ್ಚದಲ್ಲಿ, ಪೋಲೀಸರ ಲಾಠಿಚಾರ್ಜುಗಳು ಸಂಭವಿಸಿವೆ. ಆದರೆ ಇವು ಲಾಠಿಚಾರ್ಜುಗಳು ಎಂದು ಒಪ್ಪಲು ಕಾಯದೆ ಮಂತ್ರಿಗಳು ಸಿದ್ಧರಿಲ್ಲ.

ಈ ಸಂಬಂಧದಲ್ಲಿ ಸರಕಾರದ ನೀತಿ ನಗು ಬರಿಸುವಂತಹದಿದೆ. ಕಿಲ್ಲಿಕೊಲ್ಲೂರಿನಲ್ಲಿ ಲಾಠಿಚಾರ್ಜು ನಡೆಯಲಿಲ್ಲ ಎಂದು ಪ್ರಕಟನೆ ಹೊರಡಿಸಿದ ಬಳಿಕ ಸರಕಾರ ಅಲ್ಲಿಯ ಲಾಠಿಚಾರ್ಜಿನ ಬಗ್ಗೆ ವಿಚಾರಣೆ ನಡೆಸಬೇಕೆಂದು ಅಪ್ಪಣೆ ವಿಧಿಸಿತು. ಲಾಠಿಯಿಂದ ಹೊಡೆದಾಕ್ಷಣ ಲಾಠಿಚಾರ್ಜಾಗಲಿಲ್ಲ ಎಂದು ನ್ಯಾಯಮಂತ್ರಿ

---

* ಈ ಹಣವನ್ನೆಲ್ಲ ವೈಯಕ್ತಿಕವಾಗಿ ಈ ಜನರು ಎತ್ತಿ ಹಾಕಿದ್ದಾರೆಂದು ಹೇಳಲಾಸಲ್ಲ. ಕಮ್ಯುನಿಸ್ಟ್ ಪಕ್ಷದ ನಿಧಿಯನ್ನು ಹೆಚ್ಚಿಸಿ ಹಿಂದುಗಡೆ ಈ ಹಣದಿಂದ ದೇಶದಲ್ಲಿ ಕೋಲಾಹಲ ಎಬ್ಬಿಸುವ ಹಂಚಿಕೆ ಇದಿದ್ದರೂ ಇರಬಹುದು.

ಗಳ ಹೇಳಿಕೆ !

ಕಳೆದ ಎರಡು ತಿಂಗಳಲ್ಲಿ ನಡೆದ ಕೆಲ ಸ್ಥಾನಿಕ ಚುನಾವಣೆಗಳ ಪರಿಣಾಮ ಗಮನಾರ್ಹವಾಗಿದೆ. ಅವುಗಳಲ್ಲೆಲ್ಲ ಕಮ್ಯುನಿಸ್ಟ ಹುರಿಯಾಳುಗಳು ಪ್ರಚಂಡ ಪರಾಭವ ಹೊಂದಿರುವರು.

ಕಮ್ಯುನಿಸ್ಟ ಮಂತ್ರಿಗಳು ಅಧಿಕಾರ ಸ್ವೀಕರಿಸಿದ ಬಳಿಕ ಈ ಮಂತ್ರಿಗಳು ಸಾದಾ ಜೀವನ ನಡೆಸುತ್ತಾರೆ, ಜನಸೇವೆ ಮಾಡುತ್ತಾರೆ ಎಂದು ಜಗತ್ತಿಗೆ ಸಾರಲಾಯಿತು. ಅವರು ನಿರಾಡಂಬರ ಜೀವನ ನಡೆಸಿ ಸೈಕಲ್ ಮೇಲೆ ಪ್ರವಾಸ ಮಾಡುತ್ತಾರೆ, ಕಾಂಗ್ರೆಸ ಮಂತ್ರಿಗಳಂತೆ ಅವಾಢವ್ಯ ಸಂಬಳ ಪಡೆಯದೆ ಕೇವಲ ರೂ. ೩೫೦ ಸಂಬಳ ತೆಗೆದುಕೊಳ್ಳುತ್ತಾರೆ ಎಂದು ಹೇಳಲಾಯಿತು.

೧೯೫೭ರ ಸಂಬಳ ಭತ್ತೆ ತಿದ್ದುಪಡಿ ಮಸೂದೆಯಂತೆ ಮಂತ್ರಿಗಳ ಸಂಬಳವನ್ನು ರೂ. ೭೦೦ ರಿಂದ ರೂ. ೫೦೦ಕ್ಕಿಳಿಸಲಾಯಿತು. ಪೆಟ್ರೋಲ್ ಭತ್ತೆಯನ್ನು ೨೫೦ ರೂ. ಗಳಿಂದ ೧೦೦ ರೂ. ಗಳಿಗಿಳಿಸಲಾಯಿತು. ಆದರೆ ಈಗ ಅವರಿಗೆ ರೂ. ೭೫ ತುಟ್ಟಿಭತ್ತೆ ಸಿಗುತ್ತದೆ. ಮೊದಲು ಮಂತ್ರಿಗಳಿಗೆ ಸಂಚಾರದಲ್ಲಿ ವಸತಿ ಭತ್ತೆ ಕೊಡುತ್ತಿದ್ದರು. ಅದರ ಬದಲು ಮೈಲೇಜ ಭತ್ತೆ ಕೊಡುವದು ಹಿತಕರ ಎಂದು ಕಮ್ಯುನಿಸ್ಟರು ಯೋಚಿಸಿದರು. ಈಗ ಮಂತ್ರಿಗಳಿಗೆ ವಸತಿ ಭತ್ತೆಯ ಬದಲು ಸರಕಾರಿ ಕಾರಿನಲ್ಲಿ ಅಡ್ಡಾಡುವಾಗ ಮೈಲಿಗೆ ಎಂಟಾಣೆ ಮತ್ತು ಖಾಸಗಿ ಕಾರಿನಲ್ಲಿ ಅಡ್ಡಾಡುವಾಗ ಒಂದು ರೂಪಾಯಿ ಭತ್ತೆ ಸಿಗುತ್ತದೆ. ಒಟ್ಟಿನಲ್ಲಿ ಲೆಕ್ಕ ಹಾಕಿದಾಗ ಹಿಂದಿನ ಮಂತ್ರಿಗಳಿಗೆ ಎಲ್ಲ ಸೇರಿ ತಿಂಗಳ ಕೊನೆಗೆ ಸಿಗುತ್ತಿದ್ದುದಕ್ಕಿಂತಲೂ ಈಗಿನವರಿಗೆ ಹೆಚ್ಚಿಗೆ ಸಿಗುತ್ತದೆ. ಕಮ್ಯುನಿಸ್ಟ ಮಂತ್ರಿಗೆ ಸರಾಸರಿ ತಿಂಗಳಿಗೆ ರೂ. ೧,೫೮೫ ಸಿಗುತ್ತದೆ.

ಕಾಂಗ್ರೆಸ್ ಮತ್ತು ಪ್ರಸವಾ ಮಂತ್ರಿಗಳ ಹಾಗೂ ಕಮ್ಯುನಿಸ್ಟ ಮಂತ್ರಿಗಳ ಸಂಬಳದ ತುಲನೆ ಮಾಡುವದು ಕುತೂಹಲದ್ದೆನಿಸುವಂತಿದೆ. ಕಾಂಗ್ರೆಸ್ ಮಂತ್ರಿಗೆ ರೂ.೭೦೦ ಸಂಬಳ, ರೂ.೭೫ ತುಟ್ಟಿ ಭತ್ತೆ, ರೂ.೨೫೦ ಸಂಚಾರ ಭತ್ತೆ, ರೂ.೧೨೦ ವಸತಿ ಭತ್ತೆ— ಹೀಗೆ ರೂ. ೧,೧೪೫ ಸಿಗುತ್ತಿದ್ದವು. ಪ್ರಸವಾ ಮಂತ್ರಿಗೆ ರೂ. ೫೦೦ ಸಂಬಳ, ರೂ. ೬೫ ತುಟ್ಟಿ ಭತ್ತೆ, ವಸತಿ ಭತೆ ರೂ. ೧೨೦, ಸಂಚಾರ ಭತ್ತೆ ರೂ. ೨೫೦ ಹೀಗ್ರೆ ರೂ ೯೩೫ ಸಿಗುತ್ತಿದ್ದವು. ಆದರೆ ಕಮ್ಯುನಿಸ್ಟ ಮಂತ್ರಿಗೆ ರೂ. ೧,೫೮೫ ಸಿಗುತ್ತದೆ ಎಂದರೆ ಏನು ಹೇಳಬೇಕು ?

೧೯೫೭-೫೮ ರಲ್ಲಿ ಮಂತ್ರಿಗಳ ವೆಚ್ಚ ೨.೫೦ ಲಕ್ಷ ರೂಪಾಯಿಗಳೆಂದು ಮುಂಗಡ ಪತ್ರಿಕೆಯಲ್ಲಿ ಹೇಳಿತ್ತು. ಆದರೆ ಪುನರ್ವಿಮರ್ಶಿತ ಅಂದಾಜಿನಂತೆ ಅದು ೪.೨೬ ಲಕ್ಷ ರೂಪಾಯಿಗಳಷ್ಟಾಯಿತು. ಮುಂಬರುವ ವರ್ಷದಲ್ಲಿ ಅದು ೪.೯೮ ಲಕ್ಷ ರೂಪಾಯಿಗಳಷ್ಟಾಗಲಿದೆ! ಹಣದ ಅಪವ್ಯಯ ಮಾಡಿತೆನ್ನುವ ಕಾಂಗ್ರೆಸ ಮಂತ್ರಿಮಂಡಳ ಕೂಡ ೧೯೫೩-೫೪ರಲ್ಲಿ ಕೇವಲ ೨.೪೭ ಲಕ್ಷ ರೂಪಾಯಿಗಳನ್ನು ಮಾತ್ರ ಖರ್ಚು ಮಾಡಿತ್ತು. ಈಗ ಕೇರಳದ ೧೧ ಜನ ಕಮುನಿಸ್ಟ ಮಂತ್ರಿಗಳಿಗೆ ೪.೯೮ ಲಕ್ಷ ರೂಪಾಯಿ ವೆಚ್ಚ ಬರುವದು. ಅಂದರೆ ಪ್ರತಿ ಮಂತ್ರಿಗೆ ವರ್ಷಕ್ಕೆ ೪೫,೨೭೨ ರೂಪಾಯಿಗಳ ವೆಚ್ಚ ಬರುವದೆಂದಾಯಿತು.

ಅದಲ್ಲದೆ ಕೇರಳ ರಾಜ್ಯ ಅಸ್ತಿತ್ವಕ್ಕೆ ಬಂದ ಬಳಿಕ ರಚಿತವಾದ ಮಂತ್ರಿಮಂಡಳಗಳಲ್ಲಿ ಕಮ್ಯುನಿಸ್ಟ ಮಂತ್ರಿಮಂಡಳವೇ ದೊಡ್ಡದು. ಹಿಂದಿನ ಮಂತ್ರಿಮಂಡಳದಲ್ಲಿ ೫ ಜನ ಮಂತ್ರಿಗಳು ಮಾತ್ರ ಇದ್ದರು. ಕಮ್ಯುನಿಸ್ಟ ಪಕ್ಷಕ್ಕೆ ಅದರ ಇಮ್ಮಡಿಗಿಂತ ಹೆಚ್ಚು ಅಂದರೆ ಹನ್ನೊಂದು ಮಂತ್ರಿಗಳ ಆವಶ್ಯಕತೆ ಉಂಟಾಗಿದೆ. ತನ್ನ ಬೇಡಿಕೆಯನ್ನು ಪ್ರಭಾವಿಯಾಗಿ ಮುಂದೊತ್ತಬಲ್ಲ ಪಕ್ಷದ ಪ್ರತಿಯೊಬ್ಬ ಧುರೀಣನನ್ನೂ ಸಮಾಧಾನಪಡಿಸುವದಕ್ಕಾಗಿ ಹೀಗಾಗಿದೆಯಲ್ಲದೆ ಮತ್ತೇನಿರಬಹುದು !

ಪದ್ಮಭೂಷಣ ಪದವಿ ಪಡೆದ
ಪಕ್ಷಿ ವಿಜ್ಞಾನಿಯ
ಆತ್ಮವೃತ್ತ



# ಪಕ್ಷಿಗಳು ಮತ್ತು ನಾನು

ಸಾಲಿಂ ಅಲಿ

ನನ್ನ ಜೀವನದ ಈ ೬೦ ವರ್ಷಗಳಲ್ಲಿ ಹೆಚ್ಚಿನ ಕಾಲ ಪಕ್ಷಿಗಳ ಸಹವಾಸದಲ್ಲೇ ಕಳೆದುಹೋಗಿದೆ. ಇದು ಒಂದು ಯೋಗಾಯೋಗ. ನಾನಿನ್ನೂ ತೀರ ಸಣ್ಣವನಾಗಿದ್ದಾಗ ನನ್ನ ತಂದೆ ತೀರಿಕೊಂಡರು. ನಾನು ನನ್ನ ತಾಯಿಯೊಂದಿಗೆ ನನ್ನ ಕಕ್ಕನ ಮನೆಯಲ್ಲಿ ಇರಬೇಕಾಗಿ ಬಂತು. ನನ್ನ ಕಕ್ಕನಿಗೆ ತುಂಬ ಜಮೀನಿದ್ದಿತು. ಅವರು ಒಳ್ಳೆಯ ಬೇಟೆಗಾರರೂ ಆಗಿದ್ದರು. ಆದರೆ ಹಕ್ಕಿಗಳ ಮಟ್ಟಿಗೆ ಹೇಳುವದಾದರೆ ಅವರ ಜ್ಞಾನವು ಕೇವಲ ತಿನ್ನಲು ಬರುವಂಥ ಹಕ್ಕಿಗಳಿಗಷ್ಟೇ ಪರಿಮಿತವಾಗಿತ್ತು. ನನ್ನ ಕಕ್ಕನ ಮೂಲಕವೇ ನನಗೆ ಹಕ್ಕಿಗಳಲ್ಲಿ ಪ್ರೇಮವುಂಟಾಯಿತು. ನನ್ನ ಹತ್ತಿರ ಒಂದು ಏರ್‌ಗನ್ ಇತ್ತು. ನಿತ್ಯವೂ ಅದರಿಂದ ಹಕ್ಕಿಗಳ ಬೇಟೆಯಾಡುತ್ತಿದ್ದೆ.

ನಾನು ಒಂಬತ್ತು ವರ್ಷದವನಿದ್ದಾಗ ಒಂದು ದಿನ ಒಂದು ಹೆಣ್ಣು ಗುಬ್ಬಿಯನ್ನು ಹೊಡೆದೆ. ಆ ಗುಬ್ಬಿಯ ಮೈಮೇಲೆ ಒಂದು ಹಳದಿ ಕಲೆ ಇತ್ತು. ಮುಸಲ್ಮಾನರಲ್ಲಿ ಕೆಲವೊಂದು ಹಕ್ಕಿಗಳನ್ನು ತಿನ್ನಬಾರದೆಂದು ನಿಯಮವಿದೆ. ಆ ಗುಬ್ಬಿಯ ಮೇಲಿನ ವಿಚಿತ್ರ ಕಲೆಯನ್ನು ಕಂಡು ಈ ಹಕಿ

ಯನ್ನು ತಿನ್ನಬಹುದೇ ಎಂದು ಕಕ್ಕನನ್ನು ಕೇಳಿದೆ

ನನ್ನ ಕಕ್ಕ ೧೮೮೩ರಲ್ಲಿ "ಬಾಂಬೆ ನೆಚರಲ್ ಹಿಸ್ಟ್ರಿ ಸೊಸೈಟಿ"ಯನ್ನು ಸ್ಥಾಪಿಸಿದ್ದರು. ಅವರು ಸೊಸೈಟಿಯ ವಸ್ತುಸಂಗ್ರಹಾಲಯದ ಕ್ಯೂರೇಟರರಾದ ಸರ್ ನಾರ್ಮನ್ ಕಿನ್ನಿಯವರಿಗೆ ಒಂದು ಪತ್ರ ಕೊಟ್ಟರು. ನಾನು ಹೊಡೆದ ಹಕ್ಕಿಯನ್ನು ತಿನ್ನಬಹುದೇ ಎಂದು ನಾನು ಕೇಳಿದ್ದೆ. ಕಕ್ಕನಿಂದ ಅದಕ್ಕೆ ಉತ್ತರ ಬರಲಿಲ್ಲ. ಬದಲಿಗೆ ನಾನು ಆ ಹಕ್ಕಿಯನ್ನು ಸರ್ ನಾರ್ಮನ್ನರ ಬಳಿಗೆ ಒಯ್ದಾಗ ಹತ್ತಿಯನ್ನು ತುಂಬಿ ಆ ಹಕ್ಕಿಯನ್ನು ಹೇಗೆ ಕಾಪಾಡಿ ಇಡಬಹುದು ಎಂದು ತಿಳಿಸಿದರು.

ಅಂದಿನಿಂದ ನಾನು ನಿತ್ಯವೂ ವಸ್ತು ಸಂಗ್ರಹಾಲಯಕ್ಕೆ ಹೋಗತೊಡಗಿದೆ. ನಾನಲ್ಲಿಗೆ ಹೋಗಿ ಹಕ್ಕಿಗಳ ಬಗ್ಗೆ ಬರೆದ ಪುಸ್ತಕಗಳನ್ನು ಓದುತ್ತಿದ್ದೆ. ಬರಬರುತ್ತ ನನಗೆ ಹಕ್ಕಿಗಳಲ್ಲಿ ಆಸ್ಥೆ ಹೆಚ್ಚಿ ನಾನು ಅವುಗಳನ್ನು ಕುರಿತಾದ ಪುಸ್ತಕಗಳನ್ನು ಕೊಂಡುಕೊಂಡೂ ಓದತೊಡಗಿದೆ. ಪಕ್ಷಿಕುತೂಹಲ ಮಿತಿ ಮೀರಿ ಬೆಳೆದು ನನಗೆ ಓದುಬರಹದಲ್ಲಿ ಆಸ್ಥೆ ಕಡಿಮೆಯಾಯಿತು. ನನ್ನ ಕಕ್ಕ ಇದರಿಂದ ತುಂಬ ವ್ಯಥೆಗೊಂಡರು. ನಾನು ಮಾತ್ರ ನನ್ನ ಹುಚ್ಚನ್ನು ಬಿಡಲಿಲ್ಲ.

ಹೇಗೋ ವಿಶ್ವವಿದ್ಯಾಲಯದ ಮೆಟ್ಟಲಿನವರೆಗೆ ಬಂದಿದ್ದೆ. ಆಗ ನಾನು ನನ್ನ ಬಂಧುವಿನೊಡನೆ ಬ್ರಹ್ಮದೇಶಕ್ಕೆ ಹೋಗುವ ಸಂದರ್ಭ ಬಂತು. ಅಡವಿಯಲ್ಲಿ ವಾಸಿಸುವ ಅವಕಾಶ ನನಗೆ ಸಿಕ್ಕಿದ್ದು ಇದೇ ಮೊದಲನೆಯ ಸಲವಾಗಿತ್ತು. ನನ್ನ ಕಾರ್ಯದಲ್ಲಿ ನನಗೆ ತುಂಬ ಅನುಕೂಲವಿತ್ತು. ನಾನಲ್ಲಿ ಕೆಲ ಹೊಸ ಬಗೆಯ ಪಕ್ಷಿಗಳನ್ನು ಸಂಗ್ರಹಿಸಿದೆ.

ಬ್ರಹ್ಮದೇಶದಲ್ಲಿ ಮೂರು ವರ್ಷವಿದ್ದ ಬಳಿಕ ನಾನು ತಿರುಗಿ ಮುಂಬಯಿಗೆ ಬಂದೆ. ಪ್ರಾಣಿವಿಜ್ಞಾನದ ಅಭ್ಯಾಸವನ್ನು ಕ್ರಮಬದ್ಧವಾಗಿ ಮಾಡತೊಡಗಿದೆ. ಅಭ್ಯಾಸಮುಗಿದ ಬಳಿಕ ೧೯೨೫ರಲ್ಲಿ ನೆಚರಲ್ ಹಿಸ್ಟ್ರಿ ಸೊಸೈಟಿಯ ಅಸಿಸ್ಟೆಂಟ ಕ್ಯುರೇಟರನೆಂದು ನನ್ನ ನೇಮಕವಾಯಿತು. ಈ ಅವಧಿಯಲ್ಲಿ ನನಗೆ ಲಂಡನ್ ಮತ್ತು ಬರ್ಲಿನ್‌ಗಳಿಗೆ ಹೋಗಿ ಅಧ್ಯಯನ ಮಾಡುವ ಅವಕಾಶ ಸಿಕ್ಕಿತು. ಆದರೆ ನಾನು ಈ ಕೆಲಸವನ್ನು ಬಹಳ ದಿನಗಳ ವರೆಗೆ ಮಾಡಲಾಗಲಿಲ್ಲ. ಸರಕಾರದ "ಕಡಿಮೆ ವೆಚ್ಚ ಮಾಡಿರಿ" ಯೋಜನೆಯನ್ವಯ ೧೯೩೦ ರಲ್ಲಿ ನನ್ನನ್ನು ಮನೆಗೆ ಕಳಿಸಿದರು.

ಅಂದಿನಿಂದ ನಾನು ಸ್ವತಂತ್ರವಾಗಿ ಸಂಶೋಧನ ಕಾರ್ಯವನ್ನು ನಡೆಸುತ್ತ ಬಂದಿದ್ದೇನೆ. ಸುದೈವದಿಂದ ನನ್ನ ಬಳಿ ಸಾಕಷ್ಟು ಹಣವಿತ್ತು; ಮತ್ತು ನನ್ನ ಹೆಂಡತಿ—ಅವಳೀಗ ಬದುಕಿಲ್ಲ—ನನಗೆ ಒಳ್ಳೆಯ ಸಹಾಯಕಳಾದಳು, ಎಂಬುದರಿಂದ ನನ್ನ ಕಾರ್ಯ ಸಾಧ್ಯವಾಯಿತು. ಅವಳ ಹತ್ತಿರ ಒಂದಿಷ್ಟು ಹಣವಿತ್ತು. ಅವಳು ತುಂಬ ಮಿತವ್ಯಯ ಸ್ವಭಾವದವಳು. ಬಹಳ ಯೋಚಿಸಿ ವಿಚಾರ ಮಾಡಿ ಹಣ ಖರ್ಚುಮಾಡುತ್ತಿದ್ದಳಾದರೂ ನನ್ನ ಕಾರ್ಯಕ್ಕಾಗಿ ಹಣ ಬೇಕಾದಾಗ ಕೊಡಲು ಎಂದೂ ಹಿಂದೆಮುಂದೆ ನೋಡುತ್ತಿರಲಿಲ್ಲ. ಆ ಕಾಲದಲ್ಲಿ ನನ್ನ ಕೆಲಸದಿಂದ ಯಾವ ಬಗೆಯ ಆದಾಯವೂ ಇರಲಿಲ್ಲ.

ಹಕ್ಕಿಗಳ ವಿಷಯದಲ್ಲಿ ನಾನು ಕೆಲವು ಪುಸ್ತಕಗಳನ್ನು ಬರೆದಿದ್ದೇನೆ. "ದ ಬುಕ್ ಆಫ್ ಇಂಡಿಯನ್ ಬರ್ಡ್ಸ್", "ಇಂಡಿಯನ್ ಹಿಲ್ ಬರ್ಡ್ಸ್", "ದ ಬರ್ಡ್ಸ್ ಆಫ್ ತ್ರಾವಂಕೋರ ಆ್ಯಂಡ್ ಕೋಚಿನ್", "ಬರ್ಡ್ಸ್ ಆಫ್ ಕಚ್ಛ" ಮತ್ತು "ದ ಬರ್ಡ್ಸ್ ಆಫ್ ಸಿಕ್ಕಿಮ್" ಎಂಬ ನನ್ನ ಪುಸ್ತಕಗಳು ಪ್ರಕಟವಾಗಿವೆ. ಇನ್ನೂ ಒಂದು ಪುಸ್ತಕವನ್ನು ಬರೆಯಬೇಕೆಂದು ನನ್ನ ವಿಚಾರವಿದೆ. ಅದರಲ್ಲಿ ಭಾರತದ ಹಕ್ಕಿಗಳ ೧೨೮೭ ಜಾತಿ ಮತ್ತು ೭-೮೦೦ ಉಪಜಾತಿಗಳ ವಿಚಾರ ಬರುವದು. ಈ ಪುಸ್ತಕವನ್ನು ನಾನು ಮತ್ತು "ಯೇಲ್ ಫೆಕಲ್ಟಿ"ಯ ಡಾಕ್ಟರ ಡಿಲ್ಲನ್ ರಿಪ್ಲೆಯವರು ಕೂಡಿ ತಯಾರಿಸುತ್ತಿದ್ದೇವೆ. ಅದು ಐದು ಸಂಪುಟಗಳಲ್ಲಿ ಪ್ರಕಟವಾಗುವದು.

ಹಕ್ಕಿಗಳ ಬಗ್ಗೆ ಇರುವ ಆಸ್ಥೆಯ ಮೂಲಕ ನನ್ನ ಜೀವನದ ಕಳೆದ ೩೫ ವರ್ಷಗಳಲ್ಲಿ ಹೆಚ್ಚಿನ ಕಾಲ ಸಂಚಾರದಲ್ಲಿಯೇ ಕಳೆದಿದೆ. ಆಸಾಮುದ

ವರೆಗೆ ಮಾತ್ರವಲ್ಲ, ಅದರ ಆಚೆಗೂ ಹೋಗಿ ಬಂದಿದ್ದೇನೆ. ದಕ್ಷಿಣ ಬ್ರಹ್ಮದೇಶದಲ್ಲಿ ಏಳು ವರ್ಷಗಳ ವರೆಗೆ ವಾಸಿಸಿದ್ದೇನೆ. ಅಫಗಾನಿಸ್ತಾನದ ತೀರ ಆಚೆಯ ವರೆಗೆ ಅಂದರೆ ರಶಿಯದ ಗಡಿಯಾದ ಓಕ್ಸಸ್ ನದಿಯ ವರೆಗೆ ಹೋಗಿದ್ದೇನೆ. ತಿಬೇಟದ ಪ್ರದೇಶದಲ್ಲಿರುವ ಕೈಲಾಸ ಮಾನಸ ಸರೋವರದ ವರೆಗೂ ಸಂಚರಿಸಿದ್ದೇನೆ.

ಮೊದಲಿನಿಂದಲೂ ತಿಬೇಟಯಾತ್ರೆ ಮಾಡಬೇಕೆಂದು ನನಗೆ ಬಲವಾದ ಆಶೆಯಿತ್ತು. ಏಕೆಂದರೆ ಅಕ್ಟೋಬರದಿಂದ ಎಪ್ರಿಲದ ವರೆಗೆ ಭಾರತಕ್ಕೆ ವಲಸೆ ಬರುವ ಅನೇಕ ಹಕ್ಕಿಗಳು ತಿಬೇಟದಿಂದಲೇ ಇಲ್ಲಿಗೆ ಬರುತ್ತವೆ. ಆದ್ದರಿಂದ ತಿಬೇಟದ ಹಕ್ಕಿಗಳ ಅಭ್ಯಾಸವನ್ನು ಮಾಡಲು ನಮ್ಮ ದೇಶದಲ್ಲಿ ಕೇವಲ ಬೇಸಿಗೆಯಲ್ಲಿ ಮಾತ್ರ ಸಾಧ್ಯವಾಗುತ್ತದೆ. ಅವು ತಮ್ಮ ದೇಶದಲ್ಲಿ ಹೇಗೆ ಇರುತ್ತವೆ ಎಂದು ಇಲ್ಲಿ ತಿಳಿಯಲು ಸಾಧ್ಯವಾಗುವದಿಲ್ಲ. ಕುಮಾಯೂಂ ಮಾರ್ಗವಾಗಿ ಹಿಮಾಲಯವನ್ನು ದಾಟಿ ನಾನು ತಿಬೇಟಕ್ಕೆ ಹೋದೆ. ಈ ಪ್ರವಾಸದ ವಿಚಾರ ತುಂಬ ಆಕರ್ಷಕವಾಗಿತ್ತು. ಆದರೆ ಪಕ್ಷಿಗಳ ಸಂಶೋಧನ ಕಾರ್ಯಕ್ಕಾಗಿ ಹೋಗುವ ಇತರರಂತೆ ಪ್ರವಾಸದ ಖರ್ಚನ್ನು ನಾನೇ ನೋಡಿಕೊಳ್ಳಬೇಕಾಯಿತು. ಈ ಯಾತ್ರೆಯಿಂದ ನನಗೆ ಪರಿಚಿತ ಪಕ್ಷಿಗಳ ಜೀವನ ವಿಧಾನದ ಅಪರಿಚಿತ ಸೂತ್ರಗಳಲ್ಲದೆ ಅನೇಕ ಹೊಸಹಕ್ಕಿಗಳ ಪರಿಚಯವೂ ಆಯಿತು.

ನನ್ನ ಅಧ್ಯಯನ ಕಾರ್ಯಕ್ಕಾಗಿ ಯುರೋಪ ಮತ್ತು ಅಮೇರಿಕೆಗಳಿಗೆ ಹೋಗಿ ಬರುವ ಅವಕಾಶವೂ ನನಗೆ ಪ್ರಾಪ್ತವಾಗಿದೆ.

ಹಕ್ಕಿಗಳ ನಿರೀಕ್ಷಣೆಗಾಗಿ ಹೀಗೆ ಸಂಚರಿಸುತ್ತಿದ್ದಾಗ ಮತ್ತು ಜನವಸತಿಯಿಂದ ದೂರ ಅಡವಿಗಳಲ್ಲಿ ದೀರ್ಘ ಕಾಲ ವಾಸಿಸುತ್ತಿದ್ದಾಗ ಅನೇಕ ರೋಮಾಂಚಕ ಪ್ರಸಂಗಗಳೂ ನನ್ನ ಅನುಭವಕ್ಕೆ ಬಂದವು. ತಿಬೇಟದಲ್ಲಿ ನಡೆದ ಎರಡು ಘಟನೆಗಳು ನನಗಿನ್ನೂ ಅತ್ಯಂತ ಸ್ಪಷ್ಟವಾಗಿ ನೆನಪಿನಲ್ಲಿವೆ.

ಮಾನಸ ಸರೋವರ ಸಮುದ್ರ ಪಾತಳಿಯಿಂದ ೧೫ ಸಾವಿರ ಅಡಿ ಎತ್ತರದ ಸ್ಥಳದಲ್ಲಿದೆ. ಅಲ್ಲಿ ಮನುಷ್ಯನ ದೃಷ್ಟಿ ಹಾಯುವವರೆಗೂ ಒಂದೇ ಬಗೆಯ ನೆಲ ದೃಗ್ಗೋಚರವಾಗುತ್ತದೆ. ಹಂಸಗಳ ಪ್ರಸವ ಕಾಲದಲ್ಲಿ ಅಲ್ಲಿರಬಯಸಿದ ನಾನು ತೀರ್ಥಯಾತ್ರಿಗಳು ಹೋಗುವದಕ್ಕಿಂತ ಒಂದು ತಿಂಗಳು ಮೊದಲೇ ಅಲ್ಲಿಗೆ ಹೋಗಿದ್ದೆ. ೧೯೪೫ರಲ್ಲಿ ನಾನಲ್ಲಿಗೆ ಹೋದಾಗ ತಿಬೇಟವು ಕಮ್ಯುನಿಸ್ಟ್ ಚೀನದ ಅಧೀನಕ್ಕೊಳಪಟ್ಟಿರಲಿಲ್ಲ. ಹಾದಿಯಲ್ಲಿ ದರೋಡೆಗಾರರ ಅಂಜಿಕೆ ಮಾತ್ರ ಬಹಳವಾಗಿತ್ತು.

ಈ ಪ್ರವಾಸದಲ್ಲಿ ಗಭ್ಯಾರ್ಂಜದ ಒಬ್ಬ ನನ್ನ ಜೊತೆಯಲ್ಲಿದ್ದ. ಆತ ನನಗೆ ಮಾರ್ಗದರ್ಶನ ಮಾಡುವದರ ಜೊತೆಗೆ ದುಭಾಷಿಯ ಕೆಲಸವನ್ನೂ ಮಾಡುತ್ತಿದ್ದ. ಆತ ಸದಾ ದರೋಡೆಗಾರರ ಭಯದಿಂದ ಪೀಡಿತನಾಗಿದ್ದ. ಬಂದೂಕಿಲ್ಲದೆ ಈ ಭಾಗದಲ್ಲಿ ಪ್ರವಾಸ ಮಾಡುವದು ಬಹು ಗಂಡಾಂತರದ್ದು ಎಂದಾತ ನನಗೆ ಪುನಃ ಪುನಃ ಹೇಳುತ್ತಿದ್ದ.

ಒಂದು ದಿನ ಅವನು ಹೇಳುತ್ತಿದ್ದ ಗಂಡಾಂತರ ನನ್ನ ಎದುರಿಗೆ ಬಂತು. ನಾನು ಹಂಸದ ಗೂಡನ್ನು ನೋಡಲೆಂದು ಹೊರಟಿದ್ದೆ. ಹಾದಿಯಲ್ಲಿ ಒಂದು ಗಿಡಗಂಟಿಯ ಗುಂಪು ಅಲ್ಲಾಡುತ್ತಿದ್ದುದನ್ನು ಕಂಡೆ. ಮೊದಲು ನಾನತ್ತ ವಿಶೇಷ ಲಕ್ಷ್ಯ ಕೊಡಲಿಲ್ಲ. ಅದರಿಂದ ನಾನು ಹತ್ತುಗಜ ದೂರಕ್ಕೆ ಬಂದಾಗ ಅದರಿಂದ ಒಬ್ಬ ಮನುಷ್ಯ ಹೊರಬಂದದ್ದನ್ನು ಕಂಡೆ. ಆತನ ಮುಖ ಬಲು ಕ್ರೂರವಾಗಿತ್ತು. ಏನನ್ನೋ ಬಡಬಡಿಸುತ್ತ ಆತ ಟೊಂಕಕ್ಕೆ ಸಿಕ್ಕಿಸಿಕೊಂಡಿದ್ದ ಕಠಾರಿಯನ್ನು ಹಿರಿದ.

ಆತನ ಅವತಾರದ ಅರ್ಥ ನನಗೆ ಮೊದಮೊದಲು ಹೊಳೆಯಲಿಲ್ಲ. ನಾನು ನನ್ನ ಸಹಕಾರಿಯತ್ತ ನೋಡಿದೆ. ಅವನ ಮುಖ ಹೆದರಿಕೆಯಿಂದ ಕಪ್ಪಿಟ್ಟಿತ್ತು. ಹೆದರಿ ಮುಖ ಇಷ್ಟೊಂದು ಕಪ್ಪಾಗುವದನ್ನು ನಾನೆಂದೂ ನೋಡಿರಲಿಲ್ಲ ಆದರೆ ನಾನು ಪ್ರಸಂಗಾವಧಾನದಿಂದ ಆತನಿಂದ ಕುಳಿತುಕೊಳ್ಳುವ ಛಡಿಯನ್ನು ಇಸಿದುಕೊಂಡೆ. ಅದರ ಆಸನವನ್ನು ಪಟ ಪಟ ಸದ್ದಾಗುವಂತೆ ಬಿಡಿಸಿ

ಕಿಸೆಯಿಂದ ಸುಳ್ಳೇ ಗುಂಡನ್ನು ತೆಗೆದು ತುಂಬಿದಂತೆ ಮಾಡಿ ಅದನ್ನು ಆಗಂತುಕನ ಎದೆಗೆ ಗುರಿಯಿಟ್ಟು ಹಿಡಿದು, "ಹೇಳು, ಏನು ಕೆಲಸವಿದೆ?" ಎಂದು ಗುಡುಗಿದೆ. ಆ ಅಡವಿ ದರೋಡೆಗಾರ ಇಂಥ ಹೊಳೆಯುವ ಛಡಿಯನ್ನು ಕಂಡಿರಲಿಕ್ಕಿಲ್ಲ. ಆತ ಹೆದರಿ ಓಡಿದ. ಆದರೂ ಈ ಪ್ರಸಂಗದ ನೆನಪಾದಾಗಲೆಲ್ಲ ಮೈ ಕಂಪಿಸುತ್ತದೆ.

ಮುಂದೆ ತುಸು ದಿನಗಳಲ್ಲಿ ಕಪ್ಪು ಚುಂಚಿನ ಸಾರಸ ಪಕ್ಷಿಯ ಗೂಡನ್ನರಸುತ್ತ ಹೊರಟಿದ್ದಾಗ ಮತ್ತೊಂದು ಗಂಡಾಂತರ ಎದುರಿಗೆ ಬಂತು.

ತಿಬೇಟದ ಭೂಮಿ ಹೆಚ್ಚಾಗಿ ಸಮಪಾತಳಿಯದಾಗಿರುವದರಿಂದ ಬರ್ಫ ಕರಗಿ ಹರಿಯುವಾಗ ಅದರ ನೀರು ಬಹಳ ದೂರದ ವರೆಗೆ ವ್ಯಾಪಿಸುತ್ತದೆ. ನೆಲವೆಲ್ಲ ಅರಲಾಗಿ ಬಿಡುತ್ತದೆ. ಅರಲಿನ ಮೇಲೆ-ನೀರಿನ ತೆಳ್ಳನ್ನ ಪ್ರವಾಹ ಹರಿಯುತ್ತಿರುತ್ತದೆ. ಅಲ್ಲಲ್ಲಿ ಎತ್ತರದ ಸ್ಥಳಗಳಲ್ಲೂ ಹುಲ್ಲು ಹುಟ್ಟಿರುತ್ತದೆ. ಈ ಹುಲ್ಲು ಹುಟ್ಟಿದ ಸ್ಥಳವೂ ಅರಲಿನಿಂದ ಕೂಡಿರುತ್ತದೆ. ನೀರಿನ ಪ್ರದೇಶವನ್ನು ದಾಟುವಾಗ ಜನರು ಹುಲ್ಲಿನ ಒಂದು ಜಾಗದಿಂದ ಇನ್ನೊಂದು ಜಾಗಕ್ಕೆ ಜಿಗಿಯುತ್ತ ಹೋಗುತ್ತಾರೆ. ಆಧಾರಕ್ಕಾಗಿ ಅವರು ಹಿಡಿದುಕೊಳ್ಳುವ ಹುಲ್ಲನ್ನು ಬಹಳ ಹೊತ್ತಿನ ವರೆಗೆ ಹಿಡಿದುಕೊಳ್ಳುವದು ಸಾಧ್ಯವಿರುವದಿಲ್ಲ. ಏಕೆಂದರೆ ಮನುಷ್ಯನ ಭಾರದಿಂದ ಅದು ಕಿತ್ತು ಬಂದು ಬಿಡುತ್ತದೆ. ಆದ್ದರಿಂದ ಸರಿಯಾಗಿ ಲೆಕ್ಕ ಹಾಕದೆ ಯಾರೂ ಜಿಗಿಯುವದಿಲ್ಲ.

ಒಮ್ಮೆ ನಾನು ಈ ರೀತಿ ಪಥಕ್ರಮಣ ಮಾಡುತ್ತಿದ್ದಾಗ ಒಂದು ಹುಲ್ಲಿನ ಗಡ್ಡೆಯನ್ನು ಮುಟ್ಟಿದೆ. ಅಲ್ಲಿ ನೀರು ಬಹಳ ಆಳವಾಗಿತ್ತು. ಅಲ್ಲಿಂದ ಮುಂದೆ ಜಿಗಿಯಲು ಹುಲ್ಲಿನ ಗಡ್ಡೆಯೂ ಇರಲಿಲ್ಲ, ಹಿಂದೆ ತಿರುಗುವ ಯೋಜನೆ ಮಾಡುವಷ್ಟರೊಳಗಾಗಿ ಬರ್ಫದಂತೆ ತಣ್ಣಗಿದ್ದ ನೀರಿನಲ್ಲಿ ನಾನು ಟೊಂಕದ ವರೆಗೆ ಇಳಿದಿದ್ದೆ. ನನ್ನ ಜೊತೆಗಾರ ದಂಡೆಯಲ್ಲಿ ನಿಂತು ಕೂಗಿ ಕೂಗಿ ನಾನು ಪಾರಾಗುವ ಬಗೆಯನ್ನು ಹೇಳುತ್ತಿದ್ದ. ಅಂತೂ ಹೇಗೋ ನಾನು ಪರಮಾತ್ಮನ ಕೃಪೆಯಿಂದ ಪಾರಾದೆ.

ಇಂಥ ಗಂಡಾಂತರ ಜೀವನ ನಡೆಸಿ ನಾನು ಏನನ್ನು ಸಾಧಿಸಿದೆ ಎಂದು ಕೆಲವರು ಕೇಳಬಹುದು. ನೆಚರಲ್ ಹಿಸ್ಟ್ರಿ ಸೊಸೈಟಿಯ ಕಾರ್ಯಗಳೇ ಈ ಪ್ರಶ್ನೆಗಳಿಗೆ ಉತ್ತರ. ನಮ್ಮ ಸೊಸೈಟಿಯ ಸಂಗ್ರಹದಲ್ಲಿ ಸುಮಾರು ೨೦,೦೦೦ ಹತ್ತಿ ತುಂಬಿದ ಹಕ್ಕಿಗಳಿವೆ. ಭಾರತದಲ್ಲಿ ಹುಡುಕಾಡಿದರೆ ನಮ್ಮಲ್ಲಿ ಕಾಣಸಿಗದ ೩-೪ ಜಾತಿಯ ಹಕ್ಕಿಗಳು ಸಿಕ್ಕರೆ ಹೆಚ್ಚು. ಭಾರತದಲ್ಲಿ ಇದೇ ಈ ಬಗೆಯ ದೊಡ್ಡ ಸಂಗ್ರಹಾಲಯ. ನಮ್ಮಲ್ಲಿ ಸುಮಾರು ೫೦೦ ಬಗೆಯ ಹಕ್ಕಿಗಳ ವಿಷಯವಿರುವ ೫,೦೦೦ ಪುಸ್ತಕಗಳಿವೆ. ವಿಜ್ಞಾನಿಗಳಿಗೆ ಗೊತ್ತಿರದ ೧೨ ಉಪಜಾತಿಗಳ ಶೋಧವನ್ನೂ ನಾನು ಮಾಡಿದ್ದೇನೆ. ಅವಕ್ಕೆ "ಬೆಸ್ಟರಾಪ್ಸ್ ಪಾಲ್ಲೆಬ್ರೋಸಾ ಸಾಲೀಮಅಲಿ", "ಪರೇಡಿಕ್ಯೂಲಾ ಆರಗುಂಡಾ ಸಾಲೀಮಅಲಿ" ಎಂದು ಮುಂತಾಗಿ ನನ್ನ ಹೆಸರಿನಿಂದ ಕರೆಯುತ್ತಾರೆ.

ಈಗಿತ್ತಲಾಗಿ ನಾನು ಗೀಜಗ ಹಕ್ಕಿಯ ಬಗ್ಗೆ ಹೆಚ್ಚು ಶೋಧಮಾಡಿದ್ದೇನೆ. ಇದು ಚಿರಪರಿಚಿತ ಹಕ್ಕಿಯಾಗಿದ್ದರೂ ಜನ ಇದರ ಗೂಡನ್ನು ನೋಡಿದ್ದರೂ ಅದರ ಬಗ್ಗೆ ವಿಶೇಷವೇನೂ ಅವರಿಗೆ ಗೊತ್ತಿಲ್ಲ. ಈ ಜಾತಿಯಲ್ಲಿ ಬಹುಪತ್ನಿತ್ವ ಇದೆ. ಗಂಡುಹಕ್ಕಿ ಮೊದಲು ಒಂದು ಗೂಡು ಕಟ್ಟುತ್ತದೆ. ಗೂಡುಕಟ್ಟಿದ ಬಳಿಕ ಹೆಣ್ಣು ಗಂಡಿನ ಜೊತೆಗಾರ್ತಿಯಾಗುತ್ತದೆ. ಆ ಹೆಣ್ಣನ್ನು ಈ ಗೂಡಿನಲ್ಲಿಟ್ಟು, ಬಳಿಕ ಗಂಡು ಮತ್ತೊಂದು ಗೂಡನ್ನು ಕಟ್ಟುತ್ತದೆ. ಇನ್ನೊಂದು ಹೆಣ್ಣು ಅದರ ಬಳಿ ಬರುತ್ತದೆ. ಅದನ್ನೂ ಎರಡನೆ ಗೂಡಿನಲ್ಲಿಟ್ಟು ಗಂಡು ಮತ್ತೂ ಒಂದು ಗೂಡನ್ನು ಕಟ್ಟುತ್ತದೆ. ಹೀಗೆ ಗಂಡು ೫-೬ ಗೂಡುಗಳನ್ನು ಕಟ್ಟಿ ಒಂದೊಂದರಲ್ಲಿ ಒಂದೊಂದು ಹೆಣ್ಣನ್ನು ಇಟ್ಟು ಸಂಸಾರ ಸಾಗಿಸುತ್ತದೆ.

ನನ್ನ ಈ ಶೋಧದಿಂದ ಪ್ರಭಾವಿತರಾದ ಕೆಂಬ್ರಿಜ್ ವಿಶ್ವವಿದ್ಯಾಲಯದವರು ಗೀಜಗ ಹಕ್ಕಿಯ ಬಗ್ಗೆ ಸಂಶೋಧನೆ ನಡೆಸಲು ಒಬ್ಬ ವಿದಾರ್ಥಿಯನ್ನು ನನ್ನ ಬಳಿಗೆ ಕಳಿಸಲು ನಿಶ್ಚಯಿಸಿದ್ದಾರೆ.

'ನವನೀತ' ದಿಂದ: ಚಿತ್ರ: ವಿ. ಎನ್. ಓಕ

# ಜೇಡರ ಹುಳ



'ಅದರ ಜಗತ್ತು ರಾಕ್ಷಸೀ ಜಗತ್ತು

ಜೇಡರಹುಳಕ್ಕೆ ಎಲ್ಲಿಯೂ ಒಳ್ಳೆಯ ಹೆಸರಿಲ್ಲ. ಅದು ನೋಡಲು ಅಸಹ್ಯ ಜಂತು. ಅದು ಬೇಟೆಯಾಡಲು ಅತ್ಯಂತ ಮೋಸದ ಸಾಧನಗಳನ್ನುಪಯೋಗಿಸುತ್ತದೆ. " ಬಾ ನೊಣವೆ ಬಾ ನೊಣವೆ ಬಾ ನನ್ನ ಮನೆಗೆ! ಬಾನೊಳಗೆ ಹಾರಿ ಬಲು ದಣಿವಾಯ್ತು ನಿನಗೆ " ಎಂದು ಅದು ಮೋಸವರಿಯದ ನೊಣಗಳನ್ನು ಕರೆದು ಕಬಳಿಸುತ್ತದೆಂದು ಚಿಕ್ಕವರಿದ್ದಾಗ ನಾವು ಕಲಿತಿದ್ದೇವೆ.

ಆದರೆ ಈ ಕ್ರೂರ, ಅಸಹ್ಯ ಜಂತುವಿನ ಜೀವನದಲ್ಲಿ, ಹತ್ತಿರದಿಂದ ನೋಡಿದಾಗ, ನಾವು ಅಪೂರ್ವವಾದ ಸಂಗತಿಗಳನ್ನು ಗುರುತಿಸಿ ಮುಗ್ಧರಾಗುತ್ತೇವೆ. ಅದು ಹೆಣೆಯುವ ಬಲೆ—ವಿಶೇಷವಾಗಿ ತೋಟದ ಜೇಡನ ಚಕ್ರಾಕಾರದ ಬಲೆ—ರೇಶ್ಮೆಗಿಂತ ನವಿರಾದ ನೂಲಿನಿಂದ ರಚಿತವಾಗುತ್ತದೆ. ಮುಂಜಾವಿನ ಪ್ರಕಾಶದಲ್ಲಿ ಸಪ್ತವರ್ಣದಿಂದ ಹೊಳೆಯುವ ಈ ಬಲೆಗಳನ್ನು ನೋಡಿ ಮರುಳಾಗದವರಿಲ್ಲ. ಚೆನ್ನಾಗಿ ಬೆಳೆದ ಜೇಡನ ಬಲೆಯ ನೂಲು ಎಷ್ಟು ಸೂಕ್ಷ್ಮವಾಗಿದೆಯೆಂದರೆ ಅಂಥವು ೧೦,೦೦೧ ಸೇರಿದರೆ ನಮ್ಮ ತಲೆಗೂದಲಿನ ದಪ್ಪವಾಗಬಹುದು. ಎಳೆಯ ಜೇಡಗಳಂತೂ ಇದಕ್ಕಿಂತಲೂ ಸೂಕ್ಷ್ಮ ಎಳೆಗಳಿಂದ ಬಲೆ ಹೆಣೆಯುತ್ತವೆ. ಅವು ಕಣ್ಣಿಗೆ ಕಾಣಿಸಲಾರದಷ್ಟು ನವಿರಾಗಿದ್ದು ಅಂಥ ೪೦ ಲಕ್ಷ ನೂಲುಗಳನ್ನು ಸೇರಿಸಿದರೆ ನಮ್ಮ ತಲೆಗೂದಲಿನ ಗಾತ್ರಕ್ಕೆ ಬರಬಲ್ಲದಷ್ಟೆ.

ಭೂಮಿಯ ಅತಿ ಚಳಿನಾಡುಗಳಿಂದ ಅತಿ ಬಿಸಿನಾಡುಗಳವರೆಗೆ ಸಾಮ್ರಾಜ್ಯವನ್ನು ಹಬ್ಬಿಸಿದ ಜೇಡರ ಹುಳಗಳಲ್ಲಿ ಬಲೆಯನ್ನೇ ಹೆಣೆಯದೇ ಕಾಲಮೇಲೆ ಬೇಟೆಯಾಡುವವುಗಳಿಂದಾರಂಭಿಸಿ ನೀರಿನಲ್ಲಿ ವಾಸಿಸುವವುಗಳ ವರೆಗೆ ಅಸಂಖ್ಯ ಜಾತಿಗಳಿವೆ. ಅಂಗೈ ಗಾತ್ರವುಳ್ಳ, ಚಿಕ್ಕ ಪುಟ್ಟ ಹಕ್ಕಿಗಳನ್ನು ಕೊಂದು ತಿನ್ನುವ, ದಕ್ಷಿಣ ಅಮೇರಿಕದ ಮಹಾ ಜೇಡಗಳಿವೆ; ಹಾಗೆಯೆ ಒಂದು ಮರವನ್ನೋ ಬಂಡೆಗಲ್ಲಿನ ಕೋಡನ್ನೋ ಪರಿಗಾಳಿಯಲ್ಲಿ ತೂರಿಕೊಂಡು ೨೦೦ ಮೈಲು ದೂರದ ವರೆಗೆ " ಆಕಾಶ ಯಾನ " ಮಾಡುವ " ಹಾರುವ ಜೇಡ "ಗಳೂ ಇವೆ. ಇವು ಆಕಾಶದಲ್ಲಿ ೧೦,೦೦೦ ಅಡಿಯವರೆಗೂ ಏರಿದ ದಾಖಲೆಗಳುಂಟು.

ಅನೇಕರು ಭಾವಿಸುವಂತೆ ಜೇಡ ಕೀಟವರ್ಗದ ಜೀವಿಯಲ್ಲ. ಕೀಟಗಳಿಗೆ ಆರು ಕಾಲುಗಳಿರುತ್ತವೆ; ಜೇಡನಿಗೆ ಎಂಟು. ಅದರ ಹೊಟ್ಟೆ ದೇಹದ ಹಿಂದಿನ ಭಾಗದಲ್ಲಿ ಜೋತಾಡುವ ಸ್ಥಿತಿಯಲ್ಲಿರುತ್ತದೆ. ಬಲೆಗಾಗಿ ನೂಲು ಹೊರಡಿಸುವ ಗ್ರಂಥಿಗಳು ಹೊಟ್ಟೆಯ ಹಿಂಭಾಗದಲ್ಲೇ ಇರುವವು.



ಜೇಡ: ಗಂಡು (ಎಡಕ್ಕೆ) ಹೆಣ್ಣಿಗಿಂತ ಎಷ್ಟು ಚಿಕ್ಕದು !

ಎದುರುಭಾಗದಲ್ಲಿ ಒಂದು ಜತೆ ವಿಷಾಕ್ತ ಕೊಂಡಿಗಳೂ (ಈ ವಿಷದಿಂದಲೇ ಅವು ಬೇಟೆಯನ್ನು ಕೊಲ್ಲುತ್ತವೆ) ಒಂದು ಜತೆ ಸ್ಪರ್ಶಜ್ಞಾನವೀಯುವ "ಕೈ" ಗಳೂ ಸೇರಿದರೆ ಜೇಡನ ಮುಖ್ಯ ಅವಯವಗಳನ್ನು ಹೆಸರಿಸಿದಂತಾಯಿತು. ಜೇಡನ ಕುಲವನ್ನು ಹೇಳಲೇಬೇಕಾದರೆ ಅದು ಚೇಳಿನ ಗೋತ್ರಕ್ಕೆ ಸೇರಿದ್ದೆಂದೇ ಹೇಳಬೇಕು.

ಜೇಡನ ಅವಯವಗಳಲ್ಲಿ ಆಶ್ಚರ್ಯಕರವಾದ ವೆಂದರೆ ಅದರ ಕಣ್ಣುಗಳು. ಅದಕ್ಕೆ ಎಂಟು ಕಣ್ಣುಗಳಿವೆ. ತಲೆಯ ಸುತ್ತಲೂ ಇರುವ ಈ ಕಣ್ಣುಗಳು ನಮ್ಮ ಕಣ್ಣುಗಳಂತೆ ಚಲಿಸುವುದಿಲ್ಲ. ಹೀಗೆ ಜೇಡನಿಗೆ ಏಕಕಾಲದಲ್ಲಿ ಸುತ್ತಲೂ ನೋಡುವ ಶಕ್ತಿ ನಿಸರ್ಗದತ್ತವಾಗಿದೆ. ಆದರೆ ಜೇಡನ "ಸಮಗ್ರ ದೃಷ್ಟಿ" ಯನ್ನು ಕಂಡು ಹೊಟ್ಟೆಕಿಚ್ಚುಪಡುವಂತಿಲ್ಲ. ಇಷ್ಟೆಲ್ಲ ಕಣ್ಣುಗಳಿದ್ದೂ ಅದರ ದೃಷ್ಟಿಶಕ್ತಿ ತೀರ ಮಂದವಾದುದು. ಬಹಳ ಸೂಕ್ಷ್ಮದೃಷ್ಟಿಯುಳ್ಳ ಜೇಡ ಕೂಡ ತನ್ನಿಂದ ಒಂದು ಅಡಿಗಿಂತ ಹೆಚ್ಚು ದೂರ ಸರಿಯಾಗಿ ಕಾಣಲರಿಯದು. ಜೇಡನ ಪ್ರಪಂಚ ಚಿರಂತನ ಮುಚ್ಚಂಜೆಯ ಪ್ರಪಂಚ ವಾಗಿದೆ.

ಮಾನವ ಲೋಕದಲ್ಲಿ ಕುರುಡರಿಗೆ ದೃಷ್ಟಿ ಮಂದದವರಿಗೆ ಕಿವಿ ಸೂಕ್ಷ್ಮವಾಗಿರುತ್ತದೆ. ಆದರೆ ಜೇಡನ ಪ್ರಪಂಚ ನಿಶ್ಶಬ್ದವಾದುದು. ಏಕೆಂದರೆ ಅದಕ್ಕೆ ಕಿವಿಯೇ ಇಲ್ಲ. ಅದೂ ಸಾಲದೆಂಬಂತೆ ಅನೇಕ ಕೀಟಗಳಲ್ಲಿ ತುಂಬ ಚುರುಕಾಗಿರುವ ವಾಸನೆಯ ಪ್ರಜ್ಞೆ ಜೇಡನ ಪಾಲಿಗೆ ಶೂನ್ಯವಾಗಿದೆ. ಹೀಗೆ ನಿಶ್ಶಬ್ದ, ನಿರ್ಗಂಧ, ನಿಷ್ಪ್ರಭ ಇಂದ್ರಿಯ ಲೋಕ ಅದರದು. ಜೇಡನಿಗೆ ಸೂಕ್ಷ್ಮವಾಗಿರುವುದು ಸ್ಪರ್ಶಜ್ಞಾನವೊಂದೇ. ರುಚಿ ಜ್ಞಾನವೂ ಅದಕ್ಕಿದೆ. ಆದರೆ ಅದು ಸ್ಪರ್ಶೇಂದ್ರಿಯದೊಂದಿಗೆ ಬೆರೆತುಹೋಗಿದೆ.

ಇಂಥ ಅಕ್ಷಮ ಇಂದ್ರಿಯಗಳುಳ್ಳ ಈ ಜೀವಿಯನ್ನು ಬೇಟೆಯಾಡಿ ಜೀವಿಸಲು ನಿಸರ್ಗವು ತೊಡಗಿಸಿದೆ. ಅದಕ್ಕಿಂತಲೂ ಆಶ್ಚರ್ಯವೆಂದರೆ ಬೇಟೆಯ ವೃತ್ತಿಯಲ್ಲಿ ಜೇಡ ಯಶಸ್ವಿಯಾಗಿ ಬದುಕುತ್ತಿದೆ.

ಜೇಡನ ಚರಿತ್ರೆಯ ಅತಿ ಭೀಕರವಾದ ಅಂಶ ವೆಂದರೆ ಅದರ ಲೈಂಗಿಕ ಜೀವನ. ಲೋಕದ ಪ್ರಾಣಿಗಳಲ್ಲಿ ಗಂಡು ಹೆಣ್ಣಿಗಿಂತ ಚಿಕ್ಕದೂ ದುರ್ಬಲವೂ ಆಗಿರುವುದು ಬಲು ವಿರಳ. ಅಂಥ ವಿರಳ ಜಾತಿಗಳಲ್ಲಿ ಜೇಡ ಒಂದು. ಗಂಡು ಜೇಡ ಸಾಮಾನ್ಯವಾಗಿ ಹೆಣ್ಣಿಗಿಂತ ಎಷ್ಟೋ ಚಿಕ್ಕದು. ಹೆಣ್ಣು ಜೇಡನ ಹಸಿವು ಭಯಂಕರವಾದುದು. ಅದಕ್ಕೆ ಎಷ್ಟು ತಿಂದರೂ ಸಾಕೆನಿಸುವುದಿಲ್ಲ.

ಹೀಗಾಗಿ ಹೆಣ್ಣು ಜೇಡ ಗಂಡುಜೇಡನನ್ನು ನಿರ್ದಯವಾಗಿ ತಿಂದು ತೇಗುತ್ತದೆ !

ಇದಕ್ಕಾಗಿ ಹೆಣ್ಣು ಜೇಡನನ್ನು ಖಂಡಿಸುವುದು ಅಷ್ಟು ನ್ಯಾಯವಾಗಲಾರದು. ಅದರ ಇಂದ್ರಿಯ ಪ್ರಪಂಚವು — ವಿಶೇಷವಾಗಿ ಕಣ್ಣುಗಳು— ಹೆಚ್ಚು ಸೂಕ್ಷ್ಮವಾಗಿದ್ದರೆ ಹೆಣ್ಣು ಗಂಡನ್ನು ಸಕಾಲದಲ್ಲಿ ಗುರುತಿಸಿ ತನ್ನ ಪ್ರಿಯಕರನೆಂದರಿತು ಬಿಟ್ಟುಬಿಡುತ್ತಿತ್ತೋ ಏನೋ ! ಅದರ ಜಠರಾಗ್ನಿ ಅಷ್ಟು ಉಗ್ರವಾಗಿರದಿದ್ದರೆ ಅದು ತಿನ್ನುವ ಮೊದಲು ಸ್ವಲ್ಪ ಯೋಚಿಸಿಕೊಳ್ಳಬಹುದಾಗಿತ್ತು. ಗಂಡು ಬಲಿಷ್ಠವಾಗಿದ್ದರೆ ಆತ್ಮರಕ್ಷಣೆ ಮಾಡಿಕೊಳ್ಳುತ್ತಿತ್ತು. ಇವು ಮೂರೂ ಸಂಗತಿಗಳು ಗಂಡು ಜೇಡನಿಗೆ ವಿರುದ್ಧವಾಗಿರುವಾಗ ಜೇಡಿತಿಯು ಪತಿಭಕ್ಷಕಿಯಾಗುವುದು ಅನಿವಾರ್ಯ.

ಆದರೆ ಎಂಥ ಗಂಡಾಂತರವಿದ್ದರೂ ಜೇಡನ ವಂಶ ವೃದ್ಧಿಯಾಗಲೇಬೇಕಲ್ಲವೆ? ಈ ಹೊಣೆಯನ್ನು ಗಂಡು ಜೇಡ ಅತ್ಯಂತ ಧೈರ್ಯದಿಂದಲೇ ಪೂರೈಸುತ್ತದೆಂದು ಹೇಳಬೇಕು.

"ಗಂಡು ಜೇಡನ ಪಾಲಿಗೆ, ಮಾಡು ಇಲ್ಲವೆ ಮಡಿ ಎಂಬುದೇ ಧ್ಯೇಯ ವಾಕ್ಯ. ಎಷ್ಟೋ ವೇಳೆ ಅದು ಮಾಡಿಯೂ ಮಡಿಯಬೇಕಾಗಿ ಬರುತ್ತದೆ."

ಹೆಣ್ಣು ಜೇಡ ಪ್ರಾಯಕ್ಕೆ ಬಂದಾಗ ಅದರ ಗರ್ಭದಲ್ಲಿ ಅಂಡಗಳು ಉತ್ಪತ್ತಿಯಾಗುತ್ತವೆ. ಆಗ ಗಂಡು ಸಂಯೋಗ ಮಾಡಿ ಗರ್ಭಾಧಾನ ಮಾಡಬೇಕು. ಇದು ಸಾಧ್ಯವಾಗಬೇಕಾದರೆ ಗಂಡು ಹೆಣ್ಣಿನ ಸಮೀಪಕ್ಕೆ ಬರಬೇಕು ತಾನೆ? ಹತ್ತಿರ ಬಂದರೆ ಹೆಣ್ಣು ದುರ್ಬಲ ಗಂಡನ್ನು ಹಿಡಿದು ಕಬಳಿಸಿ ಬಿಡಬಹುದು. ಕೆಲಸವಾದ ಮೇಲೆ ಗಂಡ "ಹೆಂಡತಿ"ಗೆ ಆಹುತಿಯಾದರೆ ಚಿಂತೆಯಿಲ್ಲ. ಪ್ರಜಾಭಿವೃದ್ಧಿಯ ಕರ್ತವ್ಯ ಪೂರೈಸಿ ಅದು ಆತ್ಮಾರ್ಪಣ ಮಾಡಿದಂತಾಗುತ್ತದೆ. ಅದಕ್ಕೆ ಮೊದಲೇ ಅದು ಬಲಿಯಾದರೇನು ಗತಿ? ಮೇಲಾಗಿ ಗಂಡಿಗೂ ಜೀವದಾಶೆಯುಂಟಲ್ಲ.

ಆದ್ದರಿಂದ ಜೇಡ ಜಾತಿಗಳ "ಪ್ರಣಯ ಜೀವನ" ವೋಜಿನ ರೂಪಗಳನ್ನು ತಾಳುತ್ತದೆ.

"ತೋಳ ಜೇಡ" ( wolf spider ) ಎಂಬ ಹೆಸರಿನ ಕೆಲ ಜೇಡ ಜಾತಿಗಳಿವೆ. ಅವುಗಳಲ್ಲಿ ಕೆಲ ಗಂಡುಗಳು ಹೊಂಚು ಹಾಕುತ್ತಿದ್ದು ಹೆಣ್ಣು ವೈಮರೆತಿದ್ದಾಗ ಓಡಿಬಂದು ಹೆಣ್ಣಿಗೆ ಏನು ಎಂತೆಂದು ತಿಳಿಯುವ ಮೊದಲೇ ಗರ್ಭಾಧಾನಮಾಡಿ "ಜೀವನ್ ಭದ್ರಾಣಿ ಪಶ್ಯತಿ" ಎಂದು ಪಲಾಯನ ಮಾಡುತ್ತವೆ. ಹಲವು ಸಲ ಗಂಡು ಈ ಪ್ರಯತ್ನದಲ್ಲಿ ಪ್ರಾರಂಭದಲ್ಲೇ ಆಗಲಿ ಕೊನೆಗಾಗಲಿ ಹೆಣ್ಣಿನ ಕೈಗೆ ಸಿಕ್ಕಿ ವೀರಸ್ವರ್ಗ ಹೊಂದುವುದುಂಟು.

ಇನ್ನು ಕೆಲ ಜಾತಿಯ ಗಂಡು ತೋಳ ಜೇಡಗಳು ಹೆಚ್ಚು ನಾಗರಿಕ ರೀತಿಯಲ್ಲಿ ಪ್ರಿಯಾರಾಧನೆ ಮಾಡುತ್ತವೆ. ಹೆಣ್ಣನ್ನು ಕಂಡೊಡನೆ ಗಂಡು ತುದಿಗಾಲ ಮೇಲೆ ನಿಂತು ತನ್ನ ಕಪ್ಪಾದ ಎರಡು 'ಕೈ"ಗಳಲ್ಲಿ ಒಂದನ್ನು ವಾಹನ ಪೋಲೀಸನಂತೆ ಎತ್ತಿ ತೋರಿಸುತ್ತದೆ. ಆ ಮೇಲೆ ಅದನ್ನು ಇಳಿಸಿ ಇನ್ನೊಂದು "ಕೈ"ಯನ್ನು ಎತ್ತುತ್ತದೆ ಹೀಗೆ ಮಾಡುತ್ತ ಅದು ಒಂದೊಂದೇ ಹೆಜ್ಜೆ ಮುಂದಿಟ್ಟು ಹೆಣ್ಣನ್ನು ಸಮೀಪಿಸುತ್ತದೆ. ಇನ್ನು ಕೆಲ ತೋಳ ಜೇಡಗಳಲ್ಲಿ ಗಂಡು ಹೆಂಡ ಕುಡಿದವರಂತೆ ಹೆಣ್ಣಿನ ಮುಂದೆ ತೂನೆದಾಡುತ್ತ "ನರ್ತಿಸು"ತ್ತದೆ. ಈ ಚೇಷ್ಟೆಗಳಿಂದ ಹೆಣ್ಣು ಕೆಲ ಕ್ಷಣ ಯಾಕೋ ಮಂತ್ರಮುಗ್ಧವಾದಂತೆ ಸ್ತಬ್ಧವಾಗಿಬಿಡುವುದು. ಆಗ ಗಂಡು ಓಡಿಬಂದು ನಿಸರ್ಗದ ವಿಧಿಯನ್ನು ಪೂರೈಸಿ ಸಾಧ್ಯವಾದರೆ ಪಾರಾಗಿ ಹೋಗುತ್ತದೆ.

"ಏಡಿ ಜೇಡ" ಎಂಬ ಇನ್ನೊಂದು ಜಾತಿಯಿದೆ. ಅದರ ಆಕೃತಿ ಏಡಿಯನ್ನು ಹೋಲುತ್ತದೆ. ಹೂಗಳ ಮರೆಯಲ್ಲಿ ಅವಿತುಕೊಂಡು ಅಲ್ಲಿ ಬಂದ ತುಂಬಿಗಳನ್ನೋ ಪತಂಗ ಮೊದಲಾದ ಕೀಟಗಳನ್ನೋ ಹಿಡಿದು ನುಂಗುವ ಈ ಜಂತು ನೋಟಕ್ಕೆ ಅತಿ ಅಸಹ್ಯವಾಗಿದೆ. ಅದರಲ್ಲಿ ಹೆಣ್ಣು ತನ್ನ ತತ್ತಿಗಳನ್ನು ಅತಿಶಯವಾದ ಪ್ರೀತಿಯಿಂದ ಜೋಪಾನ ಮಾಡುತ್ತದೆ. ಆದರೆ ತನ್ನ ಪ್ರಿಯಕರಿಯ ಗುಟ್ಟು ಗಂಡು "ಏಡಿಗೆ" ಗೊತ್ತು. ಅದು ತಕ್ಕ ಮುಂಜಾಗ್ರತೆಯ ಕ್ರಮಗಳನ್ನು ಕೈಕೊಂಡೇ ವಂಶವೃದ್ಧಿಯ ಹವ್ಯಾಸಕ್ಕಿಳಿಯುತ್ತದೆ. ಅದು ತನ್ನ ಸೂಕ್ಷ್ಮವಾದ ಎಳೆಗಳಿಂದ ಹೆಣ್ಣನ್ನು ಮೊದಲು ನೆಲಕ್ಕೆ ಬಿಗಿಯುತ್ತದೆ. ಈ ಬಿಗಿತದಿಂದ ಪಾರಾಗಿ ಹೊರಬರಬೇಕಾದರೆ ಹೆಣ್ಣಿಗೆ ಸ್ವಲ್ಪ ಸಮಯ ಹಿಡಿಯುವುದು.

ತೋಟಗಳಲ್ಲಿ ಸುಂದರವಾದ ಚಕ್ರಾಕಾರದ ಬಲೆಗಳನ್ನು ಹೆಣೆಯುವ ಜೇಡ ಜಾತಿಯನ್ನು ಎಲ್ಲರೂ ನೋಡಿರಬೇಕು. ಅದರ ಕೃತಿ ಸುಂದರವಾಗಿದ್ದರೂ ಆಯುಷ್ಯ ಕಡಿಮೆ—ಬಹಳವಾದರೆ ಒಂದು ಋತು. ತತ್ತಿಗಳು ಮರಿಯಾಗುವ ಮೊದಲೇ ತಾಯಿ ಪರಲೋಕಯಾತ್ರೆ ಮಾಡುತ್ತದೆ. ಇತರ ಜೇಡ ಜಾತಿಗಳು ಹೆಚ್ಚು ಆಯುಷ್ಯ ಪಡೆದುಬಂದಿವೆ. ಮನೆಯ ಸಂದಿಗೊಂದಿಗಳಲ್ಲಿ ಅಸಡ್ಡಾಳವಾದ ಬಲೆಗಳನ್ನು ಹೆಣೆಯುವ ಜೇಡಗಳೂ "ತೋಳ" ಜೇಡಗಳೂ ಐದು ವರ್ಷಗಳ ವರೆಗೆ ಬದುಕಬಲ್ಲವು. "ತರಂತುಲಾ" ಎಂಬ ಜಾತಿಯ ಜೇಡವೊಂದು ಅಮೇರಿಕ ಮೊದಲಾದೆಡೆಗಳಲ್ಲಿದೆ. ಅದರ ಕಣ್ಣು ಎಷ್ಟು ಮಂದವಾಗಿದೆಯೆಂದರೆ ಅದು ಅರ್ಧ ಅಂಗುಲ

ದೂರ ಕೂಡ ಕಾಣಲಾರದು. ಆದರೆ ಅದು ೨೫ ವರ್ಷ ಕಾಲ ಬದುಕುತ್ತದೆ. ನಿಸರ್ಗದ ವೈಚಿತ್ರ್ಯಕ್ಕೆ ಎಣೆಯುಂಟೆ?

ಮಾತ್ರ, ಈ ದೀರ್ಘಾಯುಷ್ಯ ಹೆಣ್ಣು ತರುಂ-ತುಲಾ ಜೇಡರಿಗಷ್ಟೇ ಇರುವ ಭಾಗ್ಯ. ಗಂಡು ತರಂತುಲಾದ ಪಾಡು ಕರುಣಾಜನಕವಾದುದು. ಅದಕ್ಕೆ ಏಳು ವರ್ಷ ವಯಸ್ಸಾಗಿ ಇಪ್ಪತ್ತೆರಡು ಸಲ ಪರೆ ಬಿಟ್ಟ ಮೇಲೆಯೆ ಲೈಂಗಿಕ ವಾಸನೆ ಪರಿಪೂರ್ಣಾವಸ್ಥೆಯನ್ನು ಮುಟ್ಟುತ್ತದೆ. ಅದೇ ಗಂಡಿನ ಅವಸಾನ ಕಾಲ ಕೂಡ. ಅವಸಾನ ಬರುವ ಮೊದಲು ಒಂದೇ ಋತುವಿನಲ್ಲಿ ಅದು ಸಂತಾನೋತ್ಪಾದನೆಯ ಕಾರ್ಯವನ್ನು ಪೂರೈಸಬೇಕು. ಆಯುಷ್ಯದ ಕೊನೆಯ ಋತುವಿನಲ್ಲಿ ಅದು ಆ ಕೆಲಸಕ್ಕೆ ಅಣಿಯಾಗಿ ಹೆಂಡತಿಯನ್ನು ಹುಡುಕುತ್ತ ಹೋಗುತ್ತದೆ. ಬಹಳವಾದರೆ ನಾಲ್ಕು ಹೆಣ್ಣುಗಳಲ್ಲಿ ಅದು ಗರ್ಭಾಧಾನ ಮಾಡಬಹುದು. ಅನಂತರ ಅದು ಬಸವಳಿದು, ಹಣ್ಣು ಮುದುಕರಂತೆ ನಡುಗುತ್ತ, ಮೆಲ್ಲಮೆಲ್ಲನೆ ಸಾಗುತ್ತದೆ. ಸ್ವಲ್ಪ ಹೊತ್ತಿನಲ್ಲೇ ಅದಕ್ಕೆ ಸಾವು ಬಂದುಬಿಡುತ್ತದೆ ಏಳು ವರ್ಷಗಳ ವರೆಗೆ ಬದುಕಿ ಒಂದೇ ಋತುವಿನಲ್ಲಿ ಸಂತಾನೋತ್ಪಾದನೆ ಮಾಡಿ ಆ ಮೇಲೆ ಸಾಯುವ ಗಂಡಿನ ಜೀವನ ಎಷ್ಟು ಶೋಚನೀಯವಾದುದು!

ಆದರೆ ಹೆಣ್ಣೋ? ಮತ್ತೆ ಹನ್ನೆರಡು ಹದಿನಾಲ್ಕು ವರ್ಷ ಕಾಲ ಅದು ಬದುಕುತ್ತದೆ. ಪ್ರತಿ ಋತುವಿನಲ್ಲಿಯೂ ಅದಕ್ಕೆ ಏಳು ವರ್ಷದ ತರುಣ ಗಂಡಿನ ಸಂಯೋಗವಾಗುತ್ತದೆ. ಸಂಯೋಗವಾದ ಮೇಲೆ ಗಂಡು ಕೈಗೆ ಸಿಕ್ಕಿದರೆ ಹೆಣ್ಣು ಅದನ್ನು ಸ್ವಾಹಾಕರಿಸುತ್ತದೆ. ಎಂಥ ನಿರ್ದಯ ಜಗತ್ತು!

ಹೆಚ್ಚುಕಡಿಮೆ ಎಲ್ಲ ಜೇಡ ಜಾತಿಗಳಲ್ಲಿಯೂ ಹೆಣ್ಣು ಬಲಿಷ್ಠ. ಗಂಡು ದುರ್ಬಲ ಮತ್ತು ಆ ಕಾರಣದಿಂದ ಹೆಣ್ಣಿಗೆ ಗಂಡು ಸಂತಾನದಾಯಕ ಮತ್ತು ಆಹಾರ. ಗಂಡಿನ ಜೀವಕ್ಕೇನೂ ಬೆಲೆ ಇಲ್ಲ. ಹೆಣ್ಣಿನ ಕೈಲಿ ಮರಣವನ್ನು ತಪ್ಪಿಸಿಕೊಳ್ಳಲು ಗಂಡು ಕೆಲವೊಮ್ಮೆ ಯಶಸ್ವಿಯಾಗಿ ಕೆಲವೊಮ್ಮೆ ನಿರರ್ಥಕವಾಗಿ, ಉಪಾಯಗಳನ್ನು ಮಾಡುತ್ತದೆ. ಕೆಲವು ಜಾತಿಗಳಲ್ಲಂತೂ ಗಂಡು ಒಂದು ಕೀಟವನ್ನು ಹಿಡಿದು ತನ್ನ ಜಾಳಿಗೆಯಲ್ಲಿ ಅದನ್ನು ಸುತ್ತಿ ಹೆಣ್ಣಿಗೆ ಒಲವಿನ ಕಾಣಿಕೆಯಾಗಿ ಒಪ್ಪಿಸಿ ಹೆಣ್ಣು ಹಸಿವನ್ನು ಹಿಂಗಿಸಿಕೊಳ್ಳುತ್ತಿರುವಾಗ ತನ್ನ ಸಂತಾನೋತ್ಪತ್ತಿಯ ಕರ್ತವ್ಯವನ್ನು ನಿರ್ವಹಿಸಿ ಓಡಿಹೋಗುತ್ತದೆ.

ಆದರೆ ಜೇಡರ ಹುಳುವಿನ ಪತಿಭಕ್ಷಕ ನಿರ್ದಯ ಪ್ರಪಂಚದಲ್ಲಿಯೂ ಒಂದು ಲೋಕಹಿತ ಕಾರ್ಯ ಸಾಧಿಸುತ್ತಿರುತ್ತದೆ. ಜೇಡನ ಹಿಂಗಿಸಲಾರದ ಹಸಿವಿನ ದೆಸೆಯಿಂದ ಅನೇಕ ಉಪದ್ರವಕಾರಕ ಕೀಟಗಳು ನಿರ್ನಾಮ ಹೊಂದುತ್ತವೆ. ಒಬ್ಬ ಬ್ರಿಟಿಶ ಲೇಖಕನ ಅಂದಾಜಿನಂತೆ ಜೇಡರ ಹುಳವಲ್ಲದಿದ್ದರೆ ಈ ವರೆಗೆ ಇಡೀ ಭೂಮಿಯ ಮೇಲೆ ೧೦ ಗಜ ದಪ್ಪವಾದ ಕೀಟಗಳ ಪದರು ಕೂಡಿ ಬೀಳಬಹುದಾಗಿತ್ತು. ಮಾನವನೇ ಮೊದಲಾದ ಪ್ರಾಣಿಗಳಿಗೆ ತಿನ್ನಲಿಕ್ಕೂ ಇರಲಿಕ್ಕೂ ಸ್ಥಳವೇ ಉಳಿಯುತ್ತಿರಲಿಲ್ಲ. ಏನಿಲ್ಲೆಂದರೂ ಈ ಉಪಕಾರಕ್ಕಾಗಿ ನಾವು ಜೇಡರ ಹುಳಕ್ಕೆ ಕೃತಜ್ಞರಾಗಿರೋಣ.



## ಪುರುಷ ಸಮಸ್ಯೆ

ಗಂಡಸರಿಗೆ ಹೆಂಗಸರಿಗಿಂತ ಹೆಚ್ಚು ಸಮಸ್ಯೆಗಳಿವೆ. ಮೊದಲನೆಯದಾಗಿ ಅವರು ಹೆಂಗಸರನ್ನು ತಾಳಿಕೊಂಡು ಬಾಳಬೇಕಾಗುತ್ತದೆ.

—ಫ್ರಾನ್ಸಿಸ್ ಸಾಗನ್



ವಕೀಲಿಯಲ್ಲಿ ಸುಳ್ಳು ಅಗತ್ಯವೆಂಬ
ಭ್ರಮೆಯೊಂದು ವಕೀಲ ವರ್ಗದಲ್ಲಿ
ಬೇರೂರಿದೆ

# ಸುಳ್ಳುಸಾಧನೆಯಿಂದ ನ್ಯಾಯ ಸಿಕ್ಕೀತೆ?

ದಿವಂಗತ ಜಿ. ವಿ. ಮಾವಳಣಕರ

ಸಿವಿಲ್ ಪ್ರಕರಣವೇ ಇರಲಿ, ಅಥವಾ ಕ್ರಿಮಿನಲ್ ಖಟ್ಲೆಯೇ ಇರಲಿ, ಸಾಕ್ಷಿ-ಪುರಾವೆಗಳಿಗೆ ಬಣ್ಣ ಬಳಿಯದಿದ್ದರೆ ಗೆಲ್ಲುವ ಸಂಭವ ಕಡಿಮೆಯಾಗುತ್ತದೆ ಎಂದು ಒಂದು ನಂಬಿಗೆ ಅದು ಹೇಗೋ ವಕೀಲರಲ್ಲಿ ಬೆಳೆದು ಬಂದಿದೆ. ಈ ನಂಬಿಕೆಗೆ ತಳಬುಡವಿಲ್ಲವೆಂದೇ ನನ್ನ ಅನುಭವ.

ಈ ಮಾತು ಹೇಳುವಾಗ, ಅನವಶ್ಯಕವಾಗಿ ಸುಳ್ಳುಗಳನ್ನು ಬೆರೆಸಿದ್ದರಿಂದಲೇ ಅವಗುಣವಾದ ಕ್ರಿಮಿನಲ್ ಖಟ್ಲೆಯೊಂದು ನನ್ನ ನೆನಪಿಗೆ ಬರುತ್ತದೆ.

ನಾನು ಕ್ರಿಮಿನಲ್ ಖಟ್ಲೆಗಳಲ್ಲಿ ವ್ಯವಹರಿಸುವುದನ್ನು ಬಿಟ್ಟಿದ್ದರೂ ಇದು ಸಾರ್ವಜನಿಕ ಮಹತ್ವವಿದ್ದ ಖಟ್ಲೆಯಾಗಿದ್ದುದರಿಂದ ಕೆಳ ಕೋರ್ಟಿನಲ್ಲಿ (ಫರ್ಸ್ಟ ಕ್ಲಾಸ ಮ್ಯಾಜಿಸ್ಟ್ರೇಟರ ಕೋರ್ಟು)

ವಾದಿಸಲು ನನ್ನನ್ನು ನಿಯಮಿಸಿಕೊಂಡಿದ್ದರು.

ನಡೆದದ್ದಿಷ್ಟು: ಒಂದು ಹಳ್ಳಿಯಲ್ಲಿ ಪೋಲೀಸ ಸಬ್ ಇನ್‌ಸ್ಪೆಕ್ಟರರು ಕೆಲವು ಗೌಳಿಗರ ಮೇಲೆ ಆಪಾದಿಸಲ್ಪಟ್ಟ ಕೆಲವೊಂದು ಚಿಕ್ಕ ಅಪರಾಧ ಗಳ ತನಿಖೆಗಾಗಿ ಚಾವಡಿಗೆ ಅವರನ್ನು ಕರೆಸಿದ್ದರು. ಸಬ್ ಇನಸ್ಪೆಕ್ಟರರು ಅವರನ್ನೆಲ್ಲ ಚೆನ್ನಾಗಿ

**ಲೋಕಸಭೆಯ ಅಧ್ಯಕ್ಷರಾಗಿ ಸಕಲ ಪಕ್ಷಗಳ ಸಮಾನ ಗೌರವಕ್ಕೆ ಪಾತ್ರರಾದ ದಿವಂಗತ ಮಾವಳಣಕರರು ತಮ್ಮ ವಕೀಲಿ ಜೀವನದಲ್ಲಿ ಸತ್ಯವ್ರತವನ್ನು ತೊಟ್ಟು ಆದರ್ಶಪ್ರಾಯರಾಗಿದ್ದರು. ಅವರು ತಮ್ಮ My Life at the Bar ಎಂಬ ಪುಸ್ತಕದಲ್ಲಿ ವಕೀಲ ವೃತ್ತಿಯಲ್ಲಿ ತಮಗೊದಗಿದ ಅನುಭವಗಳನ್ನು ವಿವರಿಸಿದ್ದಾರೆ. ಭಾರತದ ವಕೀಲರಲ್ಲಿ ಹೆಚ್ಚಾಗಿ ಸತ್ಯ ಮತ್ತು ನ್ಯಾಯದ ಬಗ್ಗೆ ಇರುವ ತಿರಸ್ಕಾರವನ್ನು ಕಂಡು ಬಹಳವಾಗಿ ನೊಂದ ಅವರು ಈ ಪುಸ್ತಕದಲ್ಲಿ ಖಟ್ಲೆ ಗೆಲ್ಲಲು ಸುಳ್ಳಿನ ಅಗತ್ಯವಿಲ್ಲವೆಂದು ಕಳಕಳಿಯಿಂದ ವಾದಿಸಿದ್ದಾರೆ. ಸುಳ್ಳಿನಿಂದಲೇ ಹಾಳಾದ ಒಳ್ಳೆ ಖಟ್ಲೆಯೊಂದರ ವೃತ್ತಾಂತವಿದು ಆ ಪುಸ್ತಕದಿಂದ ಎತ್ತಿದ್ದು.**

ಥಳಿಸಿದರು. ಬಳಿಕ ಆರೋಪಿ ಗೌಳಿಗರು ಇಂತಿಷ್ಟು ರಕಮು ತಂದು ಕೊಟ್ಟರೆ ಪೋಲೀಸರು ಆ ಪ್ರಕರಣವನ್ನು ಅಲ್ಲಿಗೇ ಬಿಡಬೇಕು ಎಂದು ಸಂಬಂಧಪಟ್ಟವರಲ್ಲಿ ಒಪ್ಪಂದವಾಯಿತು.

ಇದು ಸಣ್ಣ ಊರಿನಲ್ಲಿ ಘಟಿಸಿತಾದ್ದರಿಂದ ಸ್ವಾಭಾವಿಕವಾಗಿ ಪೋಲೀಸರ ಹಿಂಸಾಕೃತಿಯ ಸುದ್ದಿ ಹಳ್ಳಿಗರಲ್ಲಿ ಹಬ್ಬಿತು. ಆ ಗೌಳಿಗರ ಮನೆಯ ಹೆಂಗಸರು ಚಾವಡಿಗೆ ಓಡಿ ಬಂದರು. ಒಪ್ಪಂದದಂತೆ ಹಣವನ್ನು ತರಲು ಗೌಳಿಗರನ್ನು ಮನೆಗೆ ಕಳಿಸಿ ಅವರು ತಿರುಗಿ ಬರುವವರೆಗೆ ಜಾಮೀನೆಂದು ಆ ಹೆಂಗಸರನ್ನು ಚಾವಡಿಯಲ್ಲಿ ಕೂಡ್ರಿಸಿಕೊಳ್ಳಲಾಯಿತು.

ಪೂರ್ವಯೋಜನೆಯಂತೆ ಆ ಸಬ್ ಇನಸ್ಪೆಕ್ಟರನು ಆ ಹೆಂಗಸರನ್ನು ಚಾವಡಿಯಲ್ಲಿ ಕೂಡ್ರಿಸಿಕೊಂಡನೋ ಅಥವಾ ಗೌಳಿಗರು ಹೋದ ಬಳಿಕ ಅವನ ತಲೆಯಲ್ಲಿ ಆ ವಿಚಾರ ಹೊಕ್ಕಿತೋ ಹೇಳುವುದು ಕಷ್ಟ. ಆದರೆ ಅವನ ಕಾಮುಕ ಪಶುವೃತ್ತಿ ಆ ಸುಂದರ ತರುಣಿಯರನ್ನು ಕಂಡು ಕೆರಳಿತೆಂಬುದು ಮಾತ್ರ ನಿಜ. ಆ ಹೆಂಗಸರ ಪೈಕಿ ತೀರ ಚಿಕ್ಕವಳೂ ಚೆಲುವೆಯೂ ಆಗಿದ್ದ ಒಬ್ಬಳನ್ನು ಅವನು ಒಬ್ಬ ಪೋಲೀಸನ ಸಹಾಯದಿಂದ ಬಲಾತ್ಕಾರವಾಗಿ ಚಾವಡಿಯೊಳಗೆ ಎಳೆದೊಯ್ದು ಅವಳ ಮೇಲೆ ಅತ್ಯಾಚಾರ ಮಾಡಿದನು.

ಹಣ ತೆಗೆದುಕೊಂಡು ತಿರುಗಿ ಬಂದ ಗೌಳಿಗರಿಗೆ ನಡೆದ ಸಂಗತಿ ತಿಳಿದಾಗ ಅವರು ರೊಚ್ಚಿಗೆದ್ದದ್ದು ಸ್ವಾಭಾವಿಕ. ಅವರು ಆ ಸಬ್ ಇನಸ್ಪೆಕ್ಟರನನ್ನು ಬಡಿಗೆಗಳಿಂದ ಚೆನ್ನಾಗಿ ಥಳಿಸಿದರು. ಸಬ್ ಇನಸ್ಪೆಕ್ಟರನ ಮೈಯಿಂದ ರಕ್ತ ಹರಿಯತೊಡಗಿ ಅವನು ಎಚ್ಚರ ತಪ್ಪಿದನು. ಆತ ಸತ್ತನೆಂದೇ ಗೌಳಿಗರು ಭಾವಿಸಿದರು. ಪೋಲೀಸ ಅಧಿಕಾರಿಯನ್ನು ಕೊಂದಿದ್ದಕ್ಕಾಗಿ ತಮ್ಮನ್ನು ಸೆರೆಹಿಡಿದಾರೆಂದು ಹೆದರಿ ಅವರು ಅಲ್ಲಿಂದ ಅವಸರವಾಗಿ ಕಾಲ್ತೆಗೆದರು.

ಸಿಟ್ಟಿನ ಭರದಲ್ಲಿ ಹಾಗೂ ಅತ್ಯಂತ ತ್ವೇಷದ ಪರಿಸ್ಥಿತಿಯಲ್ಲಿ ತಾವೆಸಗಿದ ಕೃತಿಯ ಪರಿಣಾಮ ವೇನಾದೀತು ಎಂದು ಊಹಿಸಿ ಗೌಳಿಗರು ಕಂಗಾಲಾಗಿದ್ದರು. ಅವರು ತಮ್ಮ ಸಂರಕ್ಷಣೆಯ ವಿಚಾರ ಮಾಡತೊಡಗಿದರು. ಅವರಿಗೆ ಯೋಗ್ಯ ಸಹಾಯ ಮಾಡಬಲ್ಲವನಾಗಿದ್ದ ಸ್ಥಳಿಕ ಸಾರ್ವಜನಿಕ ಕಾರ್ಯಕರ್ತನು ನೀತಿ ಮತ್ತು ಸತ್ಯಕ್ಕೆ ಅಷ್ಟೊಂದು ಬೆಲೆ ಕೊಡುವವನಾಗಿರಲಿಲ್ಲ. "ಸೈತಾನ" ಸರಕಾರವನ್ನು ಬಯಲಿಗೆಳೆಯಲು ಮತ್ತು ರಾಷ್ಟ್ರದ ಸೇವೆ ಮಾಡಲು ಇದು ಒಂದು ಸಂಧಿಯಾಗಿತ್ತು

ಲ್ಲವೆ! ಆಡಳಿತ ವರ್ಗದವರಲ್ಲೊಬ್ಬನ ಕಲುಷಿತ ವರ್ತನೆಯು ಈ ದುರ್ದೈವೀ ಘಟನೆಯಿಂದ ಲಾಭ ಹೊಂದಲು ಆ ಸಾರ್ವಜನಿಕ ಕಾರ್ಯಕರ್ತನು ನಿರ್ಧರಿಸಿದನು.

ಆತ ತಾಲೂಕಿನ ವಕೀಲರೊಬ್ಬರ ಬಳಿಗೆ ಈ ಗೌಳಿಗರನ್ನು ಕರೆದೊಯ್ದನು. ಆ ವಕೀಲ, ಆ ಕಾರ್ಯಕರ್ತ ಹಾಗೂ ಗೌಳಿಗರು ಕೂಡಲೆ ಡೆಪ್ಯುಟಿ ಕಲೆಕ್ಟರರು ಕ್ಯಾಂಪು ಮಾಡಿದ್ದ ಇನ್ನೊಂದು ಹಳ್ಳಿಗೆ ಹೋಗಿ ಸಬ್‌ಇನಸ್ಪೆಕ್ಟರನ ಮೇಲೆ ಬಲಾತ್ಕಾರ ಮಾಡಿದ ಆರೋಪವಿಟ್ಟು ಫಿರ್ಯಾದಿ ಮಾಡಿದರು. ಇಲ್ಲಿಯ ವರೆಗೆ ಮಾಡಿದ್ದು ಕ್ರಮಬದ್ಧವಾಗಿತ್ತು. ಲಂಚಗುಳಿಯೂ ನೀಚನೂ ಆದ ಪೋಲೀಸ ಅಧಿಕಾರಿಯೊಬ್ಬನ ದುರ್ವರ್ತನೆಯು ಮೇಲಧಿಕಾರಿಗಳ ಗಮನಕ್ಕೆ ಬಂದು ಅವನಿಗೆ ಶಿಕ್ಷೆಯಾಗುವದು ಅಗತ್ಯವಾಗಿತ್ತು. ಜನರ ದಾರಿದ್ರ್ಯ ಮತ್ತು ಅಜ್ಞಾನಗಳ ಲಾಭ ಪಡೆದು ಅವರ ಮಾನಹರಣ ಮಾಡುವುದಕ್ಕಾಗಿ ಅಲ್ಲ, ಜನರ ಮಾನ-ಧನ ರಕ್ಷಣೆಗಾಗಿ ಅಧಿಕಾರಿಗಳಿದ್ದಾರೆ ಎಂದು ಜನರಿಗೆ ನಂಬಿಕೆ ಮಾಡಿಕೊಡುವುದವಶ್ಯವಿತ್ತು.

ಆದರೆ ಆ ಸಾಮಾಜಿಕ ಕಾರ್ಯಕರ್ತ ಮತ್ತು ವಕೀಲರು ಇನ್ನೂ ಒಂದು ಹೆಜ್ಜೆ ಮುಂದೆ ಹೋದರು. ಸಬ್ ಇನಸ್ಪೆಕ್ಟರನನ್ನು ಮಾತ್ರವಲ್ಲ, ಅವನ ಕೆಳಗಿನ ಸಿಪಾಯಿಯನ್ನೂ ಆರೋಪಿಯನ್ನಾಗಿ ಮಾಡಿ ತಮ್ಮ ಖಟ್ಲೆಗೆ ಇಮ್ಮಡಿ ಬಲ ಬರುವಂತೆ ಅವರು ಹಂಚಿಕೆ ಹೂಡಿದರು. ಅದಕ್ಕಾಗಿ ಸತ್ಯ ಸಂಗತಿಯನ್ನು ಹೇಳುವ ಬದಲು (ಸಬ್-ಇನಸ್ಪೆಕ್ಟರನು ಮಾತ್ರ ಸಿಪಾಯಿಯ ಸಹಾಯದಿಂದ ಒಬ್ಬ ಹೆಂಗಸನ್ನು ಚಾವಡಿಯೊಳಗೆ ಎಳೆದೊಯ್ದಿದ್ದ) ಅವರು ಅತಿಶಯೋಕ್ತಿಯ ಚಿತ್ರವನ್ನು ಚಿತ್ರಿಸಿದರು. ಇಬ್ಬರು ಪೋಲಿಸರು ಒಬ್ಬೊಬ್ಬರಿಗೆ ಒಬ್ಬೊಬ್ಬಳಂತೆ ಇಬ್ಬರು ಹೆಂಗಸರನ್ನು ಹಿಡಿದುಕೊಂಡು ಬೇರೆ ಬೇರೆ ಕೋಣೆಗಳಿಗೆ ಹೋಗಿ ಬಲಾತ್ಕಾರ ಮಾಡಿದರು ಎಂದು ಅವರು ಫಿರ್ಯಾದಿಯಲ್ಲಿ ಕಾಣಿಸಿದರು. ಜನರನ್ನು ಹೊಡೆದ ಹಾಗೂ ಲಂಚ ಸ್ವೀಕರಿಸಲು ಪ್ರಯತ್ನಿಸಿದ ಆರೋಪವನ್ನು ಸಬ್ ಇನಸ್ಪೆಕ್ಟರನ ಮೇಲೆ ಹೊರಿಸಿದರು. ಅಹಮದಾಬಾದದ ವಕೀಲರೊಬ್ಬರ ಸಹಾಯವನ್ನು ಕೋರಿದರು. ಆದರೆ ಫಿರ್ಯಾದಿ ಮೊದಲೇ ಕೊಡಲ್ಪಟ್ಟಿತ್ತಾದ್ದರಿಂದ ಈ ಅತಿಶಯೋಕ್ತಿಯನ್ನು ತಿದ್ದಲು ಅವರಿಂದಾಗಲಿಲ್ಲ.

ತಮ್ಮ ಪರವಾಗಿ ವಕಾಲತ್ತು ವಹಿಸಬೇಕೆಂದು ಗೌಳಿಗರೂ ಅವರ ಸಲಹೆಗಾರರೂ ನನ್ನ ಬಳಿಗೆ ಬಂದರು. ಅವರು ನನಗೆ ಖಟ್ಲೆಯ ಸಂಪೂರ್ಣ ಸತ್ಯವನ್ನು ಹೇಳಲಿಲ್ಲ. ತಮ್ಮ ಫಿರ್ಯಾದಿ ಸಂಪೂರ್ಣ ಸತ್ಯವೆಂದೇ ಅವರು ಸಾಧಿಸಿದರು. ನಾನೂ ಅವರ ಮಾತನ್ನು ನಂಬಿದೆ. ಜನರ ರಕ್ಷಕರೆನ್ನುವ ಅಧಿಕಾರಿಗಳು ಈ ರೀತಿ ದುರ್ವರ್ತನೆ ಮಾಡುವುದನ್ನು ಕೇಳಿ ನನಗೆ ಆಘಾತವಾಯಿತು ಆದ್ದರಿಂದ ಏನೂ ಫೀ ತೆಗೆದುಕೊಳ್ಳದೆ ನಾನು ಗೌಳಿಗರ ಪರವಾಗಿ ವಕಾಲತ್ತು ವಹಿಸಿದೆ. ಸಾರ್ವಜನಿಕರ ಮಾನ ರಕ್ಷಣೆಯ ಪ್ರಶ್ನೆ ಈ ಖಟ್ಲೆಯಲ್ಲಿತ್ತಾದ್ದರಿಂದ ವಕಾಲತ್ತು ವಹಿಸುವುದು ನನ್ನ ಕರ್ತವ್ಯವೆಂದು ನನ್ನ ಭಾವನೆಯಾಗಿತ್ತು.

ಮ್ಯಾಜಿಸ್ಟ್ರೇಟರು ಗೌಳಿಗರ ಹೇಳಿಕೆಯನ್ನು ನಂಬದೆ ಸಬ್ ಇನಸ್ಪೆಕ್ಟರನನ್ನು ಬಲತ್ಕಾರ ಮತ್ತು ಲಂಚ ಸ್ವೀಕಾರದ ಆರೋಪದಿಂದ ಮುಕ್ತಮಾಡಿದರು. ಆದರೆ ಹಿಂಸೆಯ ಆರೋಪವನ್ನು ಹೊರಿಸಿ ಅವನಿಗೆ ೧೦೦ ರೂ. ಗಳ ದಂಡ ವಿಧಿಸಿದರು.

ಪೋಲೀಸ ಅಧಿಕಾರಿಯನ್ನು ಹೊಡೆದು ಸರಕಾರೀ ಕೆಲಸಕ್ಕೆ ವ್ಯತ್ಯಯ ತಂದರೆಂದು ಗೌಳಿಗರ ಮೇಲೆ ಪೋಲೀಸರು ಹಾಕಿದ ಖಟ್ಲೆಯ ತೀರ್ಪು ಹೇಳಿ ಮ್ಯಾಜಿಸ್ಟ್ರೇಟರು ಗೌಳಿಗರಿಗೆ ಒಂಬತ್ತು ತಿಂಗಳ ಕಠಿಣ ಶಿಕ್ಷೆಯನ್ನು ವಿಧಿಸಿದರು.

ಗೌಳಿಗರ ಮೇಲೆ ವಿಧಿಸಿದ ಶಿಕ್ಷೆಯ ವಿರುದ್ಧ ನಾನು ಅಹಮದಾಬಾದ ಸೆಶನ್ಸ್ ಕೋರ್ಟಿನಲ್ಲಿ ಅಪೀಲು ದಾಖಲು ಮಾಡಿದೆ. ಬಲಾತ್ಕಾರದ ಆರೋಪದಿಂದ ಸಬ್‌ಇನಸ್ಪೆಕ್ಟರನನ್ನು ಮುಕ್ತ ಮಾಡಿದ ತೀರ್ಪಿನ ವಿರುದ್ಧವೂ ರಿವಿಜನ್ ಅರ್ಜಿ ಮಾಡಿದೆ. ಎರಡೂ ಖಟ್ಲೆಗಳಿಗೆ ಒಂದೇ ಸಂಗತಿ

ಆಧಾರವಾಗಿದ್ದರಿಂದ ಒಂದರಲ್ಲಿಯ ಛಿರ್ಯಾದಿಪರ ವಾದವು ಇನ್ನೊಂದರಲ್ಲಿಯ ಸಂರಕ್ಷಣಪರ ವಾದ ವಾಗುತ್ತಿತ್ತು. ರಿವಿಜನ್ ಅರ್ಜಿಯ ವಿಚಾರಣೆ ಮೊದಲು ಮತ್ತು ಅಪೀಲಿನ ವಿಚಾರಣೆ ಹಿಂದು ಗಡೆ ಆಗುವುದೆಂದು ತಿಳಿಸಿದರು.

ನನ್ನ ಪಕ್ಷವು ಸತ್ಯವಾದದ್ದೆಂದು ನನಗೆ ದೃಢ ನಂಬಿಗೆಯಿತ್ತಾದ್ದರಿಂದಲೂ ಪೋಲೀಸ ಸಬ್ ಇನಸ್ಪೆಕ್ಟರನ ವರ್ತನೆಯ ವಿಚಾರದಲ್ಲಿ ಮ್ಯಾಜಿ-ಸ್ಟ್ರೇಟರು ತೋರಿದ ದುರ್ಬಲ ಮನೋವೃತ್ತಿಗಾಗಿ ( ನಾನು ಹಾಗೆಯೆ ತಿಳಿದಿದ್ದೆ ) ನಾನು ರೋಷಗೊಂಡಿದ್ದರಿಂದಲೂ ರಿವಿಜನ್ ಅರ್ಜಿ ವಿಚಾರಣೆ ಕಾಲದಲ್ಲಿ ನನ್ನ ಶಕ್ತಿಯನ್ನೆಲ್ಲ ಪಣಕ್ಕೆ ಹಚ್ಚಿ ವಾದಿಸಿದೆ. ಈ ಖಟ್ಲೆ ಉದ್ವೇಗಕಾರಿಯಾಗಿತ್ತು. ಕೋರ್ಟಿನಲ್ಲಿ ವಕೀಲರೂ ಸಾರ್ವಜನಿಕರೂ ಕಿಕ್ಕಿರಿದಿದ್ದರು. ನಾನು ಸುಮಾರು ಎರಡೂವರೆ ತಾಸುಗಳ ವರೆಗ ವಾದಿಸಿದೆ.

ನ್ಯಾಯಾಧೀಶರು ಇಂಡಿಯನ್ ಸಿವಿಲ್ ಸರ್ವಿಸಿಗೆ ಸೇರಿದ ಒಬ್ಬ ಆಂಗ್ಲರಾಗಿದ್ದರು. ನಾನು ವಾದಿಸುತ್ತಿದ್ದಾಗ ಸೂಜಿ ಬಿದ್ದರೆ ಕೇಳು ವಷ್ಟು ಶಾಂತತೆ ಕೋರ್ಟಿನಲ್ಲಿ ಪಸರಿಸಿತ್ತು. ಮನಸ್ಸಿನಲ್ಲಿರುವುದನ್ನು ಮುಖ ಸೂಚಿಸುವುದು ನಿಜವಾದರೆ ನಂಬಿಗೆಯಿಂದಲೇ ನಾನು ಹೇಳುತ್ತಿದ್ದ ಮಾತುಗಳು ನೆರೆದಿದ್ದವರೆಲ್ಲರಲ್ಲಿಯೂ ನಂಬಿಗೆಯನ್ನು ಹುಟ್ಟಿಸುತ್ತಿತ್ತು. ನನ್ನ ವಾದಕ್ಕೆ ಉತ್ತರವಾಗಿ ಸರಕಾರೀ ವಕೀಲರು ಏನು ಉತ್ತರ ಹೇಳುತ್ತಾರೆಂದು ಕೇಳಲು ಎಲ್ಲರೂ ಆತುರರಾಗಿದ್ದರು.

ನೆರೆದಿದ್ದವರೆಲ್ಲ ಹೀಗೆ ಕುತೂಹಲಭರಿತರಾಗಿದ್ದಾಗ ನ್ಯಾಯಾಧೀಶರು ನನಗೊಂದು ಪ್ರಶ್ನೆ ಹಾಕಿದರು.

**ನ್ಯಾಯಾಧೀಶ—** ಮಿ. ಮಾವಳಣಕರ, ಒಬ್ಬ ಗಂಡಸು ಯಾರೊಬ್ಬರ ಸಹಾಯವೂ ಇಲ್ಲದೆ ಒಬ್ಬ ಹೆಂಗಸಿನ ಮೇಲೆ ನಿಜವಾಗಿ ಅತ್ಯಾಚಾರ ಮಾಡಿದ ಎಂದು ನೀವು ಮನಃಪೂರ್ವಕ ಹೇಳುತ್ತಿರುವಿರಾ ?

**ನಾನು** — ಹೌದು.

**ನ್ಯಾಯಾಧೀಶ—** ನಾನದನ್ನು ಎಂದೂ ನಂಬಲಾರೆ.

ಇನ್ನೊಬ್ಬರ ಸಹಾಯವಿಲ್ಲದೆ ಅಥವಾ ಸ್ವಲ್ಪ ಮಟ್ಟಿಗಾದರೂ ಸ್ತ್ರೀಯ ಸಮ್ಮತಿ ಇರದೆ ಹೋದರೆ ಒಂಟಿಯಾಗಿ ಗಂಡಸು ಹೆಂಗಸಿನ ಮೇಲೆ ಅತ್ಯಾಚಾರ ಮಾಡಲಾರ ಎಂದು ಕಾಯದೆ ಸಂಬಂಧ ವೈದ್ಯಕೀಯ ಪುಸ್ತಕಗಳಲ್ಲಿ ನಾನು ಓದಿದ್ದೆ. ಹೆಂಗಸು ಎಷ್ಟೇ ದುರ್ಬಲಳಿರಲಿ ಮತ್ತು ಗಂಡಸು ಎಷ್ಟೇ ಬಲಿಷ್ಠನಿರಲಿ ಅವನು ಇಂಡಿಯನ್ ಪಿನಲ್ ಕೋಡಿನನ್ವಯ ಬಲತ್ಕಾರದ ಸಂಭೋಗವೆನ್ನಿಸಿಕೊಳ್ಳುವ ಲೈಂಗಿಕ ಕ್ರಿಯೆಯನ್ನು ಒಂಟಿಯಾಗಿ ಎಸಗಲಾರ. ಯಾರ ಸಹಾಯವೂ ಇಲ್ಲದೆ ಅತ್ಯಾಚಾರ ಮಾಡಿದ ಎಂದರೆ ಸಂಬಂಧಿಸಿದ ಸ್ತ್ರೀಯ ಸಮ್ಮತಿಯಿತ್ತು ಎಂದೇ ಆಗುವುದರಿಂದ ಅದು ಬಲಾತ್ಕಾರದ ಸಂಭೋಗವೆನಿಸುವದಿಲ್ಲ ಎಂದು ಆ ಪುಸ್ತಕಗಳಲ್ಲಿ ಹೇಳಿದೆ. ನನಗೆ ಇದು ಗೊತ್ತಿತ್ತಾದ್ದರಿಂದ ನಾನು ನ್ಯಾಯಾಧೀಶರೆದುರು ಈ ಬಗೆಯಾಗಿ ವಾದಿಸಿದೆ:

" ಕಾಯದೆ ಸಂಬಂಧದ ವೈದ್ಯಕೀಯ ಪುಸ್ತಕಗಳಲ್ಲಿ ಯಾರ ಸಹಾಯವೂ ಇಲ್ಲದೆ ಬಲಾತ್ಕಾರದ ಸಂಭೋಗ ಮಾಡುವುದು ಸಾಧ್ಯವಿಲ್ಲವೆಂದು ಹೇಳಿರುವುದು ನಿಜ. ಇದು ಪಾಶ್ಚಾತ್ಯ ದೇಶಗಳಲ್ಲಿ ನಿಜವಾಗಿರಬಹುದು. ಆದರೆ ಭಾರತದ ಪರಿಸ್ಥಿತಿ ಬೇರೆಯಾಗಿದೆ. ನಮ್ಮ ಜನರು ಅಜ್ಞಾನಿಗಳು. ಹಳ್ಳಿಗರು, ವಿಶೇಷತಃ ಸ್ತ್ರೀಯರು, ಎಷ್ಟೊಂದು ದಬ್ಬಾಳಿಕೆಗೆ ಒಳಗಾಗಿರುವರೆಂದರೆ ಪ್ರತಿಭಟನೆಯನ್ನು ಅವರಿಂದ ನಿರೀಕ್ಷಿಸುವುದು –ಅದರಲ್ಲೂ ದಬ್ಬಾಳಿಕೆ ನಡೆಸುವವನು ಸರಕಾರಿ ಅಧಿಕಾರಿಯಾಗಿದ್ದಾಗ–ನ್ಯಾಯವಲ್ಲ. "

ನ್ಯಾಯಾಧೀಶರು ನನ್ನ ತರ್ಕವನ್ನೊಪ್ಪಲಿಲ್ಲ. ಅವರು " ನನಗೆ ಹಾಗನಿಸುವುದಿಲ್ಲ" ಎಂದು ಮೆಲ್ಲನೆ ಉಸುರಿದರು. ಬಳಿಕ ತಟ್ಟನೆ "ಅರ್ಜಿ ತಿರಸ್ಕೃತವಾಗಿದೆ" ಎಂದು ಆಜ್ಞೆ ಹೊರಟಿತು. ಸರಕಾರೀ ವಕೀಲರು ಉತ್ತರ ಕೊಡಬೇಕೆಂದು ಕೂಡ ಅವರು ಕೇಳಲಿಲ್ಲ. ನನಗೆ ಮಾತ್ರವಲ್ಲ, ನೆರೆದಿದ್ದ ಎಲ್ಲರಿಗೂ ಇದರಿಂದ ಆಘಾತವಾಯಿತು.

ಆದರೂ ಸರಕಾರದ ಅಧಿಕಾರಿಗಳನ್ನು ಎತ್ತಿ ಹಿಡಿಯುವ ಒಂದೇ ಒಂದು ಉದ್ದೇಶದಿಂದ ಈ ಆಂಗ್ಲ ನ್ಯಾಯಾಧೀಶರು ಬುದ್ಧಿಪೂರ್ವಕವಾಗಿ ಪಕ್ಷಪಾತ ಮಾಡಬಹುದು ಎಂದು ನಂಬಲು ನಾನಾಗಲಿ, ಇನ್ನಾರಾಗಲಿ ಸಿದ್ಧರಿರಲಿಲ್ಲ.

ನ್ಯಾಯಾಧೀಶ ಆಂಗ್ಲನಾದದ್ದರಿಂದ ನ್ಯಾಯ ಸಿಗಲಿಲ್ಲ ಎಂದು ನನ್ನ ಅಭಿಪ್ರಾಯವಾಗಿತ್ತು. ಹಿಂದೂ ಸಮಾಜದ ಪರಿಸ್ಥಿತಿ ಅವರಿಗೆ ತಿಳಿದಿರುವುದು ಶಕ್ಯವಿರಲಿಲ್ಲವಾದ್ದರಿಂದ ಈ ಖಟ್ಲೆಯ ನಿಜಾಂಶವನ್ನು ಗ್ರಹಿಸಲು ಅವರು ಅಸಮರ್ಥರಾದರು. ಪುಸ್ತಕಗಳಲ್ಲಿ ಹೇಳಿದ್ದನ್ನಷ್ಟೇ ಅವರು ನಂಬಿದರು ಎಂದು ನಾನು ಎಣಿಸಿದೆ. ಆದರೂ ಮಾನವ ಪ್ರಯತ್ನಕ್ಕೆ ಸಾಧ್ಯವಾದದ್ದನ್ನೆಲ್ಲ ನಾನು ಮಾಡಿದ್ದೆ ಎಂದು ಸಮಾಧಾನ ಮಾಡಿಕೊಂಡೆ .

ಕೋರ್ಟಿನಿಂದ ತಿರುಗಿ ಬರುತ್ತಿದ್ದಾಗ ಕೆಳ ಕೋರ್ಟಿನಲ್ಲಿ ಖಟ್ಲೆ ನಡೆಸಿದ್ದ ಅಹಮದಾಬಾದದ ವಕೀಲರು ನನ್ನೊಡನೆ, " ಖಟ್ಲೆಯಲ್ಲಿ ಸ್ವಲ್ಪ ಸುಳ್ಳನ್ನು ಬೆರೆಸಿದ್ದರಿಂದ ಇಡೀ ಖಟ್ಲೆಯೇ ಹಾಳಾಯಿತು" ಎಂದರು. ನಾನು ಅವಾಕ್ಕಾದೆ ನನ್ನ ಮುಂದೆ ಹೇಳಿದ್ದರಲ್ಲಿ ಒಂದಿಷ್ಟಾದರೂ ಸುಳ್ಳು ಇದೆ ಎಂದು ನಾನು ಊಹಿಸಿರಲಿಲ್ಲ. '' ಇದೇನು ಹೇಳುತ್ತಿದ್ದೀರಿ? '' ಎಂದು ಕೇಳಿದೆ.

'' ನಿಜವಾಗಿ ಎಂದರೆ ಒಬ್ಬಳ ಮೇಲೆ ಮಾತ್ರ ಬಲಾತ್ಕಾರವಾದದ್ದು. ಪೋಲೀಸನೊಬ್ಬನ ಸಹಾಯದಿಂದ ಸಬ್ ಇನಸ್ಪೆಕ್ಟರ ಅವಳನ್ನು ಒಳಗೆ ಎಳೆದೊಯ್ದಿದ್ದ," ಎಂದು ವಕೀಲರು ಉತ್ತರವಿತ್ತರು.

ನನಗೆ ಸಿಟ್ಟು ಬಂತು. '' ಹಾಗಾದರೆ ನೀವು ಸುಳ್ಳು ಕಥೆ ಕಟ್ಟಿದ್ದಾದರೂ ಏಕೆ? ಈಗ ನಾನು ನ್ಯಾಯಾಧೀಶರ ಕ್ಷಮೆ ಕೇಳಿಕೊಳ್ಳಲೇಬೇಕು. ನೀವು ಹೇಳುವುದು ನಿಜವಾಗಿದ್ದರೆ ಅವರು ಹೇಳಿದ್ದು ಅಕ್ಷರಶಃ ನ್ಯಾಯವಾಗಿದೆ.''

" ಕ್ಷಮಿಸಬೇಕು ಆದರೆ ಫಿರ್ಯಾದಿ ಈಗಿನ ಸ್ವರೂಪದಲ್ಲಿ ಮೊದಲೇ ಕೊಡಲ್ಪಟ್ಟಿತ್ತು. ಖಟ್ಲೆ ನನ್ನ ವಶಕ್ಕೆ ಬರುವ ಮೊದಲೇ ಹಾಗೆ ದೂರು ದಾಖಲಾಗಿತ್ತು. "

" ಸರಿ. ಆದರೆ ಈಗ ನನಗೆ ನಿಜ ಸಂಗತಿ ಗೊತ್ತಾದ್ದರಿಂದ ಗೌಳಿಗರ ಅಪೀಲಿನಲ್ಲಿ ನಾನು ಮನಮುಟ್ಟಿ ವಾದಿಸಲಾರೆ. ಬೇರೆ ಯಾರಾದರೂ ವಕೀಲರನ್ನು ನೇಮಿಸಿಕೊಳ್ಳಿರಿ, " ಎಂದೆ ನಾನು.

ಆ ಸಾಮಾಜಿಕ ಕಾರ್ಯಕರ್ತ ಮತ್ತು ಆತನಿಗೆ ಸಲಹೆಯಿತ್ತ ವಕೀಲ ಸತ್ಯ ಸಂಗತಿಗೆ ಬಣ್ಣ ಬಳಿದದ್ದು ಯಾಕೆ ಎಂಬುದು ಇಂದಿಗೂ ನನಗೆ ಅರ್ಥವಾಗುತ್ತಿಲ್ಲ. ಅದರಿಂದ ನ್ಯಾಯದಾನಕ್ಕೆ ಆತಂಕವಾದದ್ದಿಷ್ಟೇ ಅಲ್ಲ, ಅಧಿಕಾರಿಗಳ ವಿರುದ್ಧ ಸುಳ್ಳು ಆರೋಪ ಹೊರಿಸಲು ಸಾರ್ವಜನಿಕರು ಮುಂದಾಗುತ್ತಾರೆ, ಸಾರ್ವಜನಿಕರು ಇಂಥದಕ್ಕೆ ಪ್ರಚೋದನೆ ಕೊಡುತ್ತಾರೆಂದು ಭಯ ಹುಟ್ಟುವಂತಾಯಿತು.



## ಇತಿಹಾಸದಲ್ಲಿ ಆಗದ್ದು

ಒಬ್ಬ ಗೆಳೆಯ ನಮ್ಮನ್ನು ಕೇಳಿದ: " ಪ್ರೇಮ ಮತ್ತು ಮನವೊಲಿಸುವುದರಿಂದ ಶೋತ್ತು-ಸ್ವಾರ್ಥಗಳನ್ನು ನಿವಾರಿಸುವುದು ಇತಿಹಾಸದಲ್ಲಿ ಎಂದೂ ಸಾಧ್ಯವಾಗದಿರುವಾಗ ಈಗ ಹೇಗಾದೀತು ? " ಎಂದು. ನಾನೆಂದೆ: " ಇತಿಹಾಸದಲ್ಲಿ ಸ್ಪುಟ್ನಿಕ್ ಹಾರಿಸಲು ಎಂದೂ ಆಗಿರಲಿಲ್ಲ, ಈಗಾಗಿದೆಯೆಂದು ಕಣ್ಣಾರೆ ನೋಡುತ್ತೀರಿ. ಇತಿಹಾಸದಲ್ಲಿ ಈವರೆಗೆ ಆಗದಿರುವುದನ್ನು ಮಾಡಲೆಂದೇ ನಾವೆಲ್ಲರೂ ಹುಟ್ಟಿದ್ದೇವೆ. "

— ವಿನೋಬಾ

# ಮೈಸೂರಿನ ರತ್ನಸಿಂಹಾಸನ

ಸಿ. ಎಸ್. ಪಟ್ಟಾಭಿರಾಮಯ್ಯ


ಈ ಸಿಂಹಾಸನ ದ್ವಾಪರ ಯುಗದ್ದೇ?

ಮೈಸೂರಿನ ರತ್ನಸಿಂಹಾಸನವು ಕಲಾದೃಷ್ಟಿಯಲ್ಲಿ ಒಂದು ಅಪೂರ್ವ ಕೃತಿಯಾಗಿದೆ. ಈ ಸಿಂಹಾಸನದ ಇತಿಹಾಸವು ವಾದಗ್ರಸ್ತವಾದುದು. ಮೊಗಲ ಚಕ್ರವರ್ತಿ ೧೬೯೯ರಲ್ಲಿ ಮೈಸೂರು ರಾಜರಿಗೆ ಕೊಟ್ಟ ಹಸ್ತಿದಂತದ ಸಿಂಹಾಸನವೇ ಈಗಿರುವ ಸಿಂಹಾಸನವೆಂದು ಒಂದು ವಾದವಿದೆ. ದಂತ ಸಿಂಹಾಸನವು ಮೈಸೂರಿನಲ್ಲಿಯೇ ಇದ್ದಿತೆಂದೂ ಅದನ್ನು ಉಪಯೋಗಿಸಲು ಔರಂಗಜೇಬನು ಅವಕಾಶ ಕೊಟ್ಟನೆಂದೂ ಎರಡನೆಯ ವಾದ. ಇದು ಪಾಂಡವರ ಸಿಂಹಾಸನವೆಂದೂ ಅದು ವಂಶಪಾರಂಪರ್ಯವಾಗಿ ಬಂದು ಕೊನೆಗೆ ಅವರ ವಂಶಜನಾದ ಪೆನುಗೊಂಡೆಯ ಕಾಮು-ಪಾಲನಿಗೆ ಬಂತೆಂದೂ ಅದನ್ನವನು ಭೂಮಿಯಲ್ಲಿ ಬಚ್ಚಿಟ್ಟನೆಂದೂ ಮುಂದೆ ಹರಿಹರನ ಪಟ್ಟಾಭಿಷೇಕ ಕಾಲದಲ್ಲಿ ವಿದ್ಯಾರಣ್ಯರು ಈ ಭೂಗತ ಸಿಂಹಾಸನದ ವಿಚಾರವನ್ನು ದಿವ್ಯ ದೃಷ್ಟಿಯಿಂದ ತಿಳಿದುಕೊಂಡು ಅದನ್ನು ಅಗೆಸಿ ತೆಗೆಸಿದರೆಂದೂ ಬಳಿಕ ಅದು ನಿಪುತ್ರಿಕರಾದ ಶ್ರೀರಂಗಪಟ್ಟಣದ ಶ್ರೀರಂಗ ರಾಜರಿಂದ ರಾಜ ಒಡೆಯರಿಗೆ ೧೬೦೯ ರಲ್ಲಿ ಅರ್ಪಿಸಲ್ಪಟ್ಟಿತೆಂದೂ ಮೂರನೆಯವಾದವಿದೆ

ಈ ವಾದಗಳ ವಿಷಯ ಏನೇ ಇರಲಿ, ಈಗಿರುವ ರತ್ನ ಸಿಂಹಾಸನವು ಶ್ರೀರಂಗರಾಜರಿಂದ ಮೈಸೂರು ಅರಸರಿಗೆ ಬಂತೆಂಬುದು ನಿರ್ವಿವಾದವೆಂದು ಹೇಳಬಹುದು.

ಮೊದಲಿಗೆ ಈ ಸಿಂಹಾಸನವನ್ನು ಶಾಸ್ತ್ರವತ್ತಾಗಿ

ಅತ್ತಿಯ ಮರದಲ್ಲಿ ಮಾಡಿ ಮೇಲೆ ದಂತದ ಹೊದಿಕೆಯನ್ನು ಹೊದಿಸಿದ್ದರು. ಮುಮ್ಮಡಿ ಕೃಷ್ಣರಾಜ ಒಡೆಯರು ೧೮೧೨ ರಲ್ಲಿ ಸಿಂಹಾಸನಕ್ಕೆ ಚಿನ್ನದ ತಗಡಿನ ಹೊದಿಕೆ ಹಾಕಿಸಿ ಅದನ್ನು ಅನೇಕ ವಿಧದಲ್ಲಿ ಶೃಂಗರಿಸಿದರು.

ರಾಜದರ್ಬಾರು ನಡೆಯುವ ಸಭಾ ಮಂಟಪದ 'ಸಜ್ಜೆ'ಯ ಮಧ್ಯದಲ್ಲಿ ರತ್ನಖಚಿತವಾದ ಈ ಸಿಂಹಾಸನ ಕಂಗೊಳಿಸುತ್ತಿದೆ. ನವರತ್ನ ಖಚಿತ ಗೋಪುರಗಳಿಂದಲೂ ಸೂರ್ಯ ಪ್ರಭೆಯಂತೆ ಬೆಳಗುವ ಸುವರ್ಣ ಗವಾಕ್ಷಗಳಿಂದಲೂ ಜಾಲಾಂಧರ, ಕಂಬ, ಗೆಜ್ಜೆಗಳಿಂದಲೂ ಅಗರು, ಕುಂಕುಮ ಕಸ್ತೂರಿ, ಕರ್ಪೂರ, ಶ್ರೀಗಂಧ ಮೊದಲಾದ ಪರಿಮಳ ದ್ರವ್ಯಗಳಿಂದಲೂ ನಾನಾ ವಿಧವಾದ ಪುಷ್ಪಗಳಿಂದಲೂ ಮನೋಹರವಾಗಿ ಶೃಂಗರಿಸಲ್ಪಟ್ಟ ಈ ಸಿಂಹಾಸನವು ವಿದ್ಯುದ್ದೀಪಗಳ ಪ್ರಕಾಶದಲ್ಲಿ ಕಣ್ಣಿಗೆ ಸಂತಸವನ್ನುಂಟುಮಾಡುವುದು.

ಸಿಂಹಾಸನವು ಸುಮಾರು ೪ ಅಡಿ ಎತ್ತರ, ೪ ಅಡಿ ಅಗಲ ಮತ್ತು ೩ ಅಡಿ ಉದ್ದವಾಗಿದೆ. ಅದರ ಹಿಂಭಾಗದಲ್ಲಿ ಒರಗು ಮಣೆಯಿದೆ. ಅದರ ಹಿಂದೆ ಮೇಲಕ್ಕೆದ್ದಿರುವ ಚಿನ್ನದ ಕೋಲೊಂದು ನೆಲದಿಂದ ೧೦ ಅಡಿ ಎತ್ತರದ ಮೇಲೆ ಚಿನ್ನದ ಛತ್ರಿಯನ್ನು ಹಿಡಿದಿರುತ್ತದೆ. ಮುಂಭಾಗದಲ್ಲಿ ಎರಡು ಪಾದಗಳು ಎರಡು ವ್ಯಾಳಿಗಳ ಮೇಲೆ ನಿಲ್ಲಿಸಲ್ಪಟ್ಟಿವೆ. ಹಿಂದಿರುವ "ಶಿರಾಣಿ" ರತ್ನ ಖಚಿತವಾದ ಗಂಡಭೇರುಂಡ ಪಕ್ಷಿಯ ಚಿತ್ರದಿಂದಲೂ ಪಕ್ಕಗಳಲ್ಲಿ ರತ್ನಖಚಿತವಾದ ಮೂರು ಕಲಶಗಳಿಂದಲೂ ಕೆಳಗಡೆ ಮುಂಭಾಗದ ಪಕ್ಕಗಳಲ್ಲಿ ಮತ್ತೆರಡು ಸಣ್ಣ ಕಲಶಗಳಿಂದಲೂ ಸಿಂಹಾಸನ ಶೋಭಿಸುತ್ತಿದೆ.

ಆರಂಗುಲ ವ್ಯಾಸದ, ಎರಡೂವರೆ ಅಡಿ ಉದ್ದದ, ಮುತ್ತುರತ್ನಗಳ ಬಳ್ಳಿಗಳಿಂದ ಅಲಂಕೃತವಾದ ಎರಡು ದಿಂಬುಗಳು ಸಿಂಹಾಸನದ ಎಡಬಲಗಳಲ್ಲಿವೆ. ಸಿಂಹಾಸನದ ಪ್ರಭಾವಳಿಯ ಮುಂದೆ, ಮಹಾರಾಜರ ಹಿಂದೆ ಮೈಸೂರಿನ ಧ್ವಜ ಚಿಹ್ನದ ನವರತ್ನ ಖಚಿತ ಒರಗುದಿಂಬಿದೆ. ಮುಂಭಾಗದ ವ್ಯಾಳಿಗಳ ಸೊಂಡಿಲುಗಳು ಸುಮಾರು ಮೂರಡಿ ಉದ್ದವಾದ ಅಮೋಘವಾದ ಮುತ್ತಿನ ಕುಚ್ಚುಗಳನ್ನು ಹಿಡಿದಿವೆ.

ಸಿಂಹಾಸನವನ್ನೇರಲು ದಕ್ಷಿಣ ಭಾಗದಲ್ಲಿ ಐದು ಬೆಳ್ಳಿಯ ಮೆಟ್ಟಲುಗಳೂ ಅವುಗಳ ಪಕ್ಕದಲ್ಲಿ ಚಾಮರ, ಬೀಸಣಿಗೆ ಮುಂತಾದ ಉಪಚಾರದ ವಸ್ತುಗಳನ್ನು ಹಿಡಿದಿರುವ ಐದು ಜೊತೆ ಬೆಳ್ಳಿಯ ಸ್ತ್ರೀವಿಗ್ರಹಗಳೂ ಇವೆ. ಚಿನ್ನದ ಬಾಳೆಯ ಕಂಬಗಳು, ಮಾವಿನ ತೋರಣಗಳು ಮತ್ತು ಕೂರ್ಮಾಸನಗಳಿಂದಲೂ ಉಭಯ ಪಾರ್ಶ್ವಗಳಲ್ಲಿ ಎರಡು ವ್ಯಾಳಿಗಳಿಂದಲೂ ಪೂರ್ವಕ್ಕೆ ಆನೆಗಳು, ದಕ್ಷಿಣಕ್ಕೆ ಕುದುರೆಗಳು, ಪಶ್ಚಿಮಕ್ಕೆ ಪದಾತಿ ಸೈನ್ಯ, ಉತ್ತರಕ್ಕೆ ರಥಗಳು, ದಕ್ಷಿಣದಲ್ಲಿ ಬ್ರಹ್ಮ, ಉತ್ತರದಲ್ಲಿ ಶಿವ, ಮಧ್ಯದಲ್ಲಿ ವಿಷ್ಣು ವಿಗ್ರಹಗಳಿಂದಲೂ ನಾಲ್ಕು ಸಿಂಹಗಳು, ಎರಡು ಶರಭಗಳಿಂದಲೂ ಶುಭಸ್ವಸ್ತಿಕ ಚಿಹ್ನೆಯಿಂದಲೂ ಸಿಂಹಾಸನ ಅಲಂಕೃತವಾಗಿದೆ.

ಮೇಲ್ಗಡೆ ಶೋಭಿಸುವ ಚಿನ್ನದ ಛತ್ರಿಯ ಮೇಲೆ ರತ್ನ ಖಚಿತವಾದೊಂದು ಪಕ್ಷಿಯು ಹೆಮ್ಮೆಯಿಂದ ಎದೆಯನ್ನು ಮುಂದೆ ಚಾಚಿ ಕತ್ತನ್ನು ಹಿಂದಕ್ಕೆ ಸರಿಸಿ ಬಾಲವನ್ನು ನವಿಲಿನಂತೆ ಮೇಲಕ್ಕೆತ್ತಿ ನಿಂತುಕೊಂಡಿದೆ. ಇದರ ಬೆನ್ನಿನ ಮೇಲೆ ಉಭಯ ಪಾರ್ಶ್ವಗಳಲ್ಲಿ ಎಂಟಾಣೆ ನಾಣ್ಯದಗಲದ ಎರಡು ಉತ್ಕೃಷ್ಟ ಪಚ್ಚೆಗಳೂ ನೆತ್ತಿಯ ಮೇಲೆ ಮತ್ತು ಕೊಕ್ಕಿನಲ್ಲಿ ನೇರಳೆ ಹಣ್ಣಿನ ಬೀಜದ ಗಾತ್ರದ ಎರಡು ಪಚ್ಚೆ ಮಣಿಗಳೂ ಇವೆ

ಛತ್ರಿಯ ಸುತ್ತಲೂ ಮೂರಂಗುಲ ಅಗಲದ ಮುತ್ತಿನ ಜಾಲರಿಯಿದೆ. ಜಾಲರಿಯ ಕೊನೆಗೊಂದರಂತೆ ೨೫೭ ರತ್ನಪದಕಗಳಿವೆ. ಒಳಭಾಗ ಮತ್ತು ಹಿಡಿಯಲ್ಲಿ ಒಳ್ಳೆ ಮುತ್ತು ಪಚ್ಚೆಗಳಿಂದ ಜೋಡಿಸಲ್ಪಟ್ಟ ಒಂಬತ್ತು ಅಂಗಲದ ಸರಗಳ ಗೊಂಚಲೊಂದಿದೆ. ಛತ್ರಿಯ ಮೇಲೆ ಮಹಾರಾಜರಿಗೆ ಆಶೀರ್ವಚನ ಸೂಚಕವಾದ ಅನುಷ್ಟುಪ್ ಛಂದಸ್ಸಿನ ೨೪ ಶ್ಲೋಕಗಳು ಕೆತ್ತಲ್ಪಟ್ಟಿವೆ.

ವಿದೇಶೀ ಪ್ರವಾಸಿಕರು ಈ ರತ್ನಸಿಂಹಾಸನದ ಸೌಂದರ್ಯವನ್ನು ಹೊಗಳಿದ್ದಾರೆ. ಮೈಸೂರು ಒಡೆಯರಿಗೂ ಕನ್ನಡಿಗರಿಗೂ ಈ ಅಮೌಲ್ಯ ರತ್ನಸಿಂಹಾಸನವು ಒಂದು ಹೆಮ್ಮೆಯವಸ್ತು.

# ಇದುವೆ ಜೀವ, ಇದು ಜೀವನ

ನಮ್ಮ ಚಾಳಿನ ಅಂಬುಜಾಕ್ಷಮ್ಮನ (ಸಂಕ್ಷಿಪ್ತ: ಅಂಬಮ್ಮ) ಗಂಡನಿಗೆ ಮದ್ರಾಸಿಗೆ ವರ್ಗವಾದುದರಿಂದ ಅವರು ಬಿಡಾರ ಕಿತ್ತುಕೊಂಡು ಹೋಗುವವರಿದ್ದರು. ಈ ನಡುವೆ ಒಂದು ಚೋದ್ಯವಾಗಿತ್ತು. ಎಂದೂ ಯಾರಿಗೂ ಕಾಫಿ ಗುಟುಕು ತೋರಿಸದಿದ್ದ ಮೀನಕ್ಕನ (ಪೂರ್ತಿ ಹೆಸರು: ಮೀನಾಕ್ಷಕ್ಕ) ಮನೆಯಲ್ಲೇ ಪ್ರಯಾಣಕ್ಕೆ ಮೂರು ದಿನ ಇರುವಾಗಿಂದ ಅಂಬಮ್ಮನಿಗೂ ಅವರ ಮಗಳು ಬೇಬಿಗೂ (ಹೆಸರು ಮಾತ್ರ ಬೇಬಿ—ವಯಸ್ಸು ಅಧಿಕೃತ ೧೮; ವಾಸ್ತವಿಕ ೨೪—ಮದುವೆ ಆಗಿದ್ದಿಲ್ಲ) ನಿತ್ಯಮಧ್ಯಾಹ್ನದ ಕಾಫಿ-ಉಪ್ಪಿಟ್ಟು ಪೂಜೆಯಾಗುತ್ತಿತ್ತು. ನಾವು ಆಶ್ಚರ್ಯಚಕಿತರಾಗಿದ್ದೆವು.

ಪ್ರಯಾಣದ ಮುಂಚಿನ ದಿನ ನಮಗೆ ಈ ಔದಾರ್ಯದ ಗುಟ್ಟು ತಿಳಿಯಿತು- ಮೀನಕ್ಕನ ೧೦ ವರ್ಷದ ಮಗಳು ಹರಕುಬಾಯಿ ಸುಮತಿಯಿಂದ. ಅಂಬಮ್ಮನ ಸಾಮಾನು ಪ್ಯಾಕಿಂಗಿನ ಕೆಲಸ ಸಾಗಿದ್ದಾಗ ನಾಲ್ಕು ದಿನ ಹಿಂದೆ ಬೇಬಿ ತನ್ನ ಪೆಟ್ಟಿಗೆಯಿಂದ ಒಂದು ಉತ್ತಮ ಜರತಾರಿ ರೇಶ್ಮೆ ಖಣ (ಹತ್ತು ಹನ್ನೆರಡು ರೂಪಾಯಿ ಬೆಲೆ ಇರುವಂಥಾದ್ದು) ತೆಗೆದು ಸುಮತಿಗೆ ತೋರಿಸಿ, "ಹೇಗಿದೆ ಇದು, ನಿಮ್ಮಮ್ಮನ ಮೈಗೆ ಒಪ್ಪೀತಾ?'' ಎಂದು ಕೇಳಿದ್ದಳಂತೆ. ಹುಡುಗೀಬಾಯಲ್ಲಿ ಜೊಲ್ಲು ಸುರಿಯಿತು. ಸರಿ, ಓಡಿಹೋಗಿ ತಾಯೀ ಕಿವಿಯಲ್ಲಿ, "ಅಂಬಮ್ಮ ನಿನಗೆ ಆ ಆಕಾಶ ನೀಲಿ ರೇಶ್ಮೆ ಖಣ ಬಾಗಿನ ಕೊಡೋಹಾಗೆ ಕಾಣುತ್ತೆ'' ಎಂದು ಉಸುರಿದ್ದಳು. ಹಾಗೇ ಆ ಖಣ ಪೆಟ್ಟಿಗೆ ಸೇರದೆ ಪ್ರಯಾಣದ ದಿನದ ವರೆಗೂ ಹೊರಗೆ ಗೂಟದ ಮೇಲೆ ತೂಗಾಡುತ್ತಿದ್ದದ್ದು ನೋಡಿ, ಮೀನಕ್ಕ ಆ ಖಣ ತನ್ನದೇ ಅಂತ ಭಾವಿಸಿಕೊಂಡಿದ್ದರು.

ಅಂಬಮ್ಮನ ಪ್ರಯಾಣದ ಮುಂಚಿನ ದಿನ ಮೀನಕ್ಕ ಗಂಡನೊಡನೆ ಆಪ್ತಾಲೋಚನೆ ಮಾಡಿ ಅಷ್ಟು ಬೆಲೆಬಾಳುವ ಖಣ ಅವರು ತಮಗೆ ಕೊಡುವಾಗ ಅವರಿಗೆ ಸಾಧಾರಣದ ಒಂದು ಖಣ ಆದರೂ ತಾವು ಕೊಡದಿದ್ದರೆ ಚೆನ್ನಾಗಿರುವುದಿಲ್ಲ ಅಂತ, ಆಗ ಮೂರು ರೂಪಾಯಿಗೆ ಸಿಗುತ್ತಿದ್ದ ಒಂದು ಮೈಸೂರು ಸಿಲ್ಕಿನ ಖಣ ತರಿಸಿದರು. ಪ್ರಯಾಣದ ದಿನ ಮಧ್ಯಾಹ್ನದ ಊಟ ಅಂಬಮ್ಮನವರ ಪರಿವಾರಕ್ಕೆ ಮೀನಕ್ಕನವರಲ್ಲೇ ಆಯಿತು. ಅವರು ಬಾಗಿನ ಕೊಡೋದಕ್ಕೆ ಮೊದಲೇ ತಮ್ಮದು ಆಗಿ ಹೋದರೆ ಶ್ರೇಷ್ಠ ಎಂದುಕೊಂಡು ಮೀನಕ್ಕ ಅಂಬಮ್ಮಗೆ ಕುಂಕುಮ ಹಚ್ಚಿ ಖಣ ಕೊಟ್ಟುಬಿಟ್ಟರು.

ಅವೊತ್ತು ಎರಡು ಗಂಟೆಗೆ ಅಂಬಮ್ಮನ್ನ ಬೀಳ್ಕೊಡಲು ಜಟ್ಕಾದ ವರೆಗೆ ಹೋಗಿ ತಿರುಗಿ ಬರುತ್ತಿದ್ದ ಮೀನಕ್ಕನ ಮುಖ ಭತ್ತ ಹಾಕಿದರೆ ಅರಳಾಗುವ ಹಾಗೆ ಇದ್ದದ್ದು ನೋಡಿ ಏನೋ ಆಗಿದೆ ಅಂತ ನಮಗೆ ಸಂಶಯ ಬಂದಿತ್ತು. ಮರುದಿನ ಸುಮ್ಮಿ ನನ್ನ ಮಗಳ ಹತ್ತಿರ ಅಂಬಮ್ಮನ್ನೂ ಬೇಬೀನೂ ವಾಚಾಮಗೋಚರವಾಗಿ ಬಯ್ಯುತ್ತಿದ್ದದ್ದು ಕೇಳಿ "ಯಾಕಮ್ಮ ಬೈತಿ?'' ಎಂದು ವಿಚಾರಿಸಿದಾಗ ಗುಟ್ಟು ರಟ್ಟಾಯಿತು. ಅಂಬಮ್ಮ ಮೀನಕ್ಕನಿಗೆ ಖಣ ಕೊಡಲೇ ಇಲ್ಲಂತೆ. "ಹಾಗೇ ರಾsಗಾ ಎಳದುs ಹೋ-ಗಿ ಬರ್ತೇವೇs, ನಮಗಾಗಿ ಬಹsಳ ಶ್ರಮ ಪಟ್ಟರಿ ಪಾಪ! ಅಂತ ಬರಿ ಉಪಚಾರ ಹೇಳಿ ಹೋಗಿಬಿಟ್ಟಳು ನೀಚ ರಂ—!''ಅಂತ

ಸುಮ್ಮಿ ತನ್ನದೇ ಆದ ಅಭಿನಯ-ಅಣಕಗಳೊಡನೆ ವಿಸ್ತರಿಸಿದಳು.

ಅಪ್ಪೊತ್ತಿನಿಂದ “ಅಂಬಕ್ಕನ ಬಾಗಿನ” ಅನ್ನೋದು ನಮ್ಮ ಚಾಳಿನಲ್ಲಿ ಒಂದು ಗಾದೆಯೇ ಆಗಿಬಿಟ್ಟಿದೆ. —ರಮಾಬಾಯಿ, ಧಾರವಾಡ

ಮಧ್ಯರಾತ್ರಿಗೆ ಗಾಡಿಯಿಂದಿಳಿದು ಹೊರ ಬಂದೆ. ಒಂದು ಟ್ಯಾಕ್ಸಿ ನಿಂತಿತ್ತು. ಅದರಲ್ಲಿ ಹೊಕ್ಕು ನನ್ನ ಮಗಳ ಮನೆಯ ಅಡ್ರೆಸ್ ಹೇಳಿದೆ. ಟಾಕ್ಸಿ ಮುಂದೆ ಸಾಗಿದಾಗ ನನ್ನ ಪಾಕೀಟು ಕಾಣೆಯಾಗಿದ್ದುದು ತಿಳಿಯಿತು. ಅದರಲ್ಲಿ ಹಣವೇನೂ ಹೆಚ್ಚು ಇದ್ದಿಲ್ಲ. ಆದರೆ ಈಗ ಟ್ಯಾಕ್ಸಿಯವನಿಗೆ ಕೊಡಲು ಹಣವಿಲ್ಲವಲ್ಲ ಎಂದು ಚಿಂತಿತಳಾಗಿ ನನಗಾದ ಫಜೀತಿಯನ್ನು ತಿಳಿಸಿ, ತಲುಪಿದ ಮೇಲೆ ಅವನ ಚಾರ್ಜು ಮನೆಯವರಿಂದ ತೆಗೆಸಿ ಕೊಡಬೇಕಾಗುವುದೆಂದು ಹೇಳಿದೆ. ಆವನು ಆಕ್ಷೇಪವೆತ್ತಲಿಲ್ಲ. ಬದಲಿಗೆ ಏನೇನೋ ಹರಟತೊಡಗಿದ.

“ಇಲ್ಲಿ ನೋಡಿ, ಮೊನ್ನೆ ರಾತ್ರಿ ಆ ಗೇಟಿನ ಹತ್ತಿರ ಒಬ್ಬಳು ಕರೇ ಸೀರೆಯ ಹೆಣ್ಣುಮಗಳು ನನ್ನ ಟ್ಯಾಕ್ಸಿ ಹತ್ತಿ ಒಂದು ವಿಳಾಸಕ್ಕೆ ಒಯ್ದು ಮುಟ್ಟಿಸಲು ಹೇಳಿದಳು. ನಾನು ಅಲ್ಲಿ ತಲುಪಿ ಅವಳಿಗೆ ಇಳಿಯಲು ಬಾಗಿಲು ತೆರೆದರೆ ಇಳಿಯಲೇ ಇಲ್ಲ. ಟ್ಯಾಕ್ಸಿಯೊಳಗೆ ನೋಡುತ್ತೇನೆ, ಯಾರೂ ಇಲ್ಲ. ನಾನು ಚಕಿತನಾಗಿ ಆ ಮನೆಯ ಬಾಗಿಲು ತಟ್ಟಿ ಕರೆದೆ. ಒಬ್ಬ ಮುದುಕ ಬಾಗಿಲು ತೆರೆದ. ನಾನು ನಡೆದದ್ದನ್ನು ಹೇಳಿದೆ. ಆತ, ‘ಇರಬಹುದು. ಅವಳು ನನ್ನ ಮಗಳು ಲೀಲಾ ಇರಬೇಕು. ಎರಡು ವರ್ಷ ಹಿಂದೆ ತೀರಿಕೊಂಡಳು. ಒಮ್ಮೊಮ್ಮೆ ಅವಳಿಗೆ ತವರುಮನೆಗೆ ಬರಬೇಕೆಂದು ಅನಿಸುತ್ತಿರುತ್ತದೆ. ಇರಲಿ, ತೆಗೆದುಕೋ’ ಎಂದು ನಿಟ್ಟುಸಿರು ಬಿಟ್ಟು ನನ್ನ ಚಾರ್ಜು ಕೊಟ್ಟು ಕಳಿಸಿದ”— ಎಂದು ಟಾಕ್ಸೀವಾಲ ಕಥೆ ಹೇಳಿದ.

ಕಥೆ ಕೇಳಿ ನನಗೆ ಹೇಗೋ ಹೇಗೋ ಆಯಿತು. ನನ್ನ ಮಗಳ ಮನೆ ಬಂದೊಡನೆ ನಾನು ಇಳಿದು, ಈಗ ಹಣ ತಂದುಕೊಡುತ್ತೇನೆ ಎಂದು ಹೇಳಿ ಮಗಳನ್ನು ಕೂಗಿ ಒಳಗೆ ಹೋದೆ. ಐದು ನಿಮಿಷದಲ್ಲಿ ಹಣ ಸಹಿತ ಹೊರಗೆ ಬಂದು ನೋಡುತ್ತೇನೆ, ಟಾಕ್ಸಿಯೂ ಇಲ್ಲ, ಟಾಕ್ಸೀವಾಲನೂ ಇಲ್ಲ. ನನ್ನ ಎದೆ ಜುಮ್ಮೆಂದಿತು.

ಇದೇ ವಿಷಯ ಮಾತಾಡುತ್ತ ನಿದ್ದೆ ಮಾಡದೆ ಕುಳಿತಿದ್ದೆವು. ಅರ್ಧ ತಾಸಾದ ಮೇಲೆ ಬಾಗಿಲು ಬಡಿದದ್ದು ಕೇಳಿ ಹೊರಬಂದೆವು. ಟಾಕ್ಸೀವಾಲ ಹಲ್ಲು ಕಿರಿದು ನಿಂತಿದ್ದ. “ಗಾಬರಿಯಾದಿರಾ ಅಮ್ಮ? ನಿಮ್ಮನ್ನು ಕಾಯುತ್ತ ನಿಂತಿದ್ದಾಗ ಒಬ್ಬ ಪೋಲೀಸ ಬಂದು ಅಪಘಾತವಾದ ಒಬ್ಬನನ್ನು ಆಸ್ಪತ್ರೆಗೆ ಒಯ್ಯಬೇಕು ಬಾ ಎಂದ. ನಾನು ಹೋಗಬೇಕಾಯಿತು” ಎಂದು ಆತ ವಿವರಿಸಿದ.

ಆ ಮೇಲೆ ನಮಗೆ ನಿದ್ರೆ ಬಂತು.

— ಶ್ರೀಮತಿ ಲತಾ, ಮುಂಬಯಿ

ಕೊನೆಯ ಪ್ರಬಲ ಮೊಗಲ ಚಕ್ರವರ್ತಿಯ ದಾರುಣ ಮೃತ್ಯುವಿನ ಕಥೆ



# ಔರಂಗಜೇಬನ ಕೊನೆಯ ಗಳಿಗೆಗಳು

ಬೀಸುತ್ತಿದ್ದ ಚಳಿಗಾಳಿಯ ಹೊಡೆತಕ್ಕೆ ಸಿಕ್ಕು ಮೊಗಲಸಾಮ್ರಾಜ್ಯದ ರಾಜಧಾನಿ ನಡುಗುತ್ತಿತ್ತು. ಹೊಗೆಯಿಂದ ಕಪ್ಪಾಗಿದ್ದ ಕಾಜಿನೊಳಗಿಂದ ರಸ್ತೆಯ ದೀಪಗಳು ಹಿಂದುಸ್ತಾನದ ಮೇಲೆ ಅರ್ಧ ಚಂದ್ರಾಕೃತಿಧ್ವಜದ ಪ್ರಭುತ್ವ ಕೊನೆಗೊಳ್ಳುವ ಕಾಲ ಬಂದದ್ದಕ್ಕಾಗಿ ಸಂತೋಷದಿಂದಲೇ ಎನ್ನುವಂತೆ ಮಿಸುಗುತ್ತಿದ್ದವು.

ಮುಂಬರುವ ಅನಾಹುತದ ಕಲ್ಪನೆಯಿಲ್ಲದೆ ಕಾವಲುಗಾರರು ಉಣ್ಣೆಯ ಅರಿವೆಗಳನ್ನು ತೊಟ್ಟು ಬೀದಿಗಳಲ್ಲಿ ಗಸ್ತಿ ತಿರುಗುತ್ತಿದ್ದರು.

ಈ ರಕ್ಷಕರ ಪದಾಘಾತದ ಸಪ್ಪಳವೊಂದನ್ನು ಬಿಟ್ಟರೆ ಶಬ್ದಶೂನ್ಯವಾಗಿದ್ದ ಆ ರಾತ್ರಿಯು ಮುರಿದು ಬೀಳಲಿದ್ದ ಮುಸ್ಲಿಂ ಸಾಮ್ರಾಜ್ಯದ ವಿಕಾರವಾದ ಚಿತ್ರವನ್ನು ತೋರಿಸುತ್ತಿತ್ತು.

ದಕ್ಷಿಣದ ದಂಡಯಾತ್ರೆಯಿಂದ ಮರಳಿ ದಿಲ್ಲಿಯ ಕಡೆಗೆ ಹೊರಟಿದ್ದ ಬಾದಶಾಹ ಔರಂಗಜೇಬನು ೧೭೦೬, ಜನವರಿ ೨೦ ರಂದು ಅಹಮದನಗರದಲ್ಲಿ ಮೃತ್ಯುಶಯ್ಯೆಯಲ್ಲಿ ಮಲಗಿದ್ದನು. ಈ ಸ್ಥಳ ತನ್ನ ಪ್ರವಾಸದ ಕೊನೆಯ ಸ್ಥಳ ( ಖತಂ-ಉಸ್-ಸಫರ )ವಾಗಬೇಕು ಎಂದು

ಸಂಡೇ ಸ್ಟಾಂಡರ್ಡಿನಿಂದ

ಬಾದಶಾಹ ಹೇಳಿದ್ದ.

ಅನೇಕ ವರ್ಷಗಳ ಕಷ್ಟಕಾರ್ಪಣ್ಯ, ಅವಿರತ ಪರಿಶ್ರಮಗಳಿಂದ ಜರ್ಜರಿತನಾಗಿದ್ದ ಈ ಬಾದ ಶಾಹನು ಆಯಾಸದಿಂದ ಕಣ್ಮುಚ್ಚಿ ಬಿದ್ದು ಕೊಂಡಿದ್ದನು. ಮೊಗಲ ದರಬಾರದ ಯಾವ ಬಗೆಯ ವೈಭವಾಡಂಬರವೂ ಇಲ್ಲದ ಅವನ ಕೋಣೆಯ ಹೊರಗಡೆ ನಿಂತಿದ್ದ ಕಾವಲುಗಾರನ ಛಾಯೆ ಆತನಿಗೆ ಮಲಗಿದಲ್ಲಿಂದ ಕಾಣಿಸುತ್ತಿತ್ತು.

ಬಾದಶಾಹ ಉಸಿರ್ಗರೆದ. ಅವನ ಮನಸ್ಸಿನಲ್ಲಿ ನೂರಾರು ನೆನಪುಗಳು ಮರುಕಳಿಸಿದವು... ಚರಿತ್ರಾರ್ಹವಾದ, ಕೋಲಾಹಲಮಯವಾದ ತನ್ನ ಐವತ್ತು ವರ್ಷಗಳ ಆಳಿಕೆಯಲ್ಲಿ ಜರುಗಿದ ಪ್ರಕ್ಷುಬ್ಧ ಘಟನೆಗಳ ನೆನಪುಗಳು ಅವನ ಮನಸ್ಸನ್ನು ಮುತ್ತಿದವು.

೧೬೩೩, ಮೇ ೨೮ ರಂದು ಯಮುನಾ ನದಿಯ ದಂಡೆಯಲ್ಲಿ ಎರಡು ಆನೆಗಳು ಕಾದತೊಡಗಿದ್ದವು. ಆಗ ತನ್ನ ಮೈಮೇಲೆ ಅಕಸ್ಮಾತ್ತಾಗಿ ಏರಿಬಂದ ಒಂದು ಆನೆಯನ್ನು ಖಡ್ಗಧಾರಿಯಾಗಿ ಎದುರಿಸುವ ಧೈರ್ಯ-ಸಾಹಸಗಳನ್ನು ತೋರಿಸಿ ಹದಿನಾಲ್ಕು ವರ್ಷ ವಯಸ್ಸಿನ ರಾಜಕುಮಾರ ಔರಂಗಜೇಬ ಪ್ರಥಮತಃ ಪ್ರಖ್ಯಾತಿಗೆ ಬಂದಿದ್ದ.

ಮಗನ ದುಸ್ಸಾಹಸಕ್ಕಾಗಿ ಪ್ರೇಮಪೂರ್ವಕವಾಗಿ ಆತನನ್ನು ತಂದೆ ಶಾಹಜಹಾನ ಛೀ ಹಾಕಿದಾಗ ಔರಂಗಜೇಬ, “ಆನೆಯೊಡನೆ ಕಾದುವಾಗ ನಾನು ಸತ್ತಿದ್ದರೆ ಅದರಲ್ಲಿ ಲಜ್ಜಾಸ್ಪದವಾದುದೇನೂ ಇರಲಿಲ್ಲ. ಮೃತ್ಯು ತನ್ನ ಪಾಶವನ್ನು ಚಕ್ರವರ್ತಿಗಳ ಮೇಲೂ ಬೀಸುತ್ತದೆ, ಅದೇನೂ ಅಗೌರವದ ಮಾತಲ್ಲ” ಎಂದುತ್ತರವಿತ್ತಿದ್ದ.

ಮುಂದೆ ಇಪ್ಪತ್ತೈದು ವರ್ಷಗಳ ನಂತರ ೧೬೫೮, ಜೂನ್ ೮ ರಂದು ನೀರಿನ ಅಭಾವದಿಂದ ಬಳಲಿ ಸಾಯುವ ಗಂಡಾಂತರ ಪ್ರಾಪ್ತವಾದಾಗ ಶಾಹಜಹಾನ ತನ್ನ ಅದೇ ಮಗನ ಎದುರು ಮೊಣಕಾಲೂರಿ ಆಗ್ರಾ ಕೋಟೆಯನ್ನು ಅವನಿಗೊಪ್ಪಿಸಬೇಕಾಯಿತು.

ತಂದೆಯನ್ನು ಹಣ್ಣು ಮಾಡಲು ತನಗೆ ಮೂರೇ ದಿನ ಹಿಡಿದಿತ್ತೆಂದು ಔರಂಗಜೇಬ ನೆನೆದುಕೊಂಡ. ಜೂನ್ [illegible] ರಂದು ಬಂಡುಗಾರ ಔರಂಗಜೇಬನ ಸೈನಿಕರು ಖಿಜರಿ ನೀರಿನ ದ್ವಾರವನ್ನು ಆಕ್ರಮಿಸಿದರು. ಆಗ್ರಾಕೋಟೆ ನೀರಿನ ಪೂರೈಕೆಗೆ ಎರವಾಯಿತು. ಶಾಹಜಹಾನ ಮಗನಿಗೆ ಮೊರೆಯಿಟ್ಟ: “ನನ್ನನ್ನು ನೀರಿಲ್ಲದೆ ಸಾಯುವಂತೆ ಮಾಡಬೇಡ!” ಅದಕ್ಕೆ ಔರಂಗಜೇಬ ಹೇಳಿದ: “ನೀನೇ ಇದನ್ನೆಲ್ಲ ಮೈ ಮೇಲೆ ತಂದುಕೊಂಡವ.”

ವಿಜಯಿಯಾದ ಔರಂಗಜೇಬ ಕೂಡಲೆ ತನ್ನ ತಂದೆಯನ್ನು ಅರಮನೆಯಲ್ಲಿ ಬಂದಿಯನ್ನಾಗಿ ಮಾಡಿ ಅವನಿಂದ ಎಲ್ಲ ಅಧಿಕಾರವನ್ನೂ ಕಸಿದುಕೊಂಡನು. ತಂಗಿ ಜಹನಾರಾ ಅಣ್ಣ ಮತ್ತು ತಂದೆಯ ನಡುವೆ ಒಪ್ಪಂದ ಮಾಡಿಸಲು ಮಾಡಿದ ಪ್ರಯತ್ನ ನಿಷ್ಫಲವಾಯಿತು. ತಂದೆ-ಮಕ್ಕಳಲ್ಲಿ ನಡೆದ ಕಟು ಪತ್ರವ್ಯವಹಾರ ಇತಿಹಾಸಪ್ರಸಿದ್ಧವಾಗಿದೆ.

“ನೀನು ನಿನ್ನ ತಂದೆಯನ್ನು ನಡೆಸಿಕೊಂಡಂತೆ ನಿನ್ನ ಮಕ್ಕಳು ನಿನ್ನನ್ನು ನಡೆಸಿಕೊಂಡಾರು” ಎಂದು ಶಾಹಜಹಾನ ತನ್ನ ಕ್ರೂರ ಮಗನಿಗೆ ಎಚ್ಚರಿಕೆಯಿತ್ತ.

ಶಾಹಜಹಾನನ ಶಾಪ ಸತ್ಯವಾಯಿತು. ನಿರ್ದಯ ವಿಧಿ ಔರಂಗಜೇಬನಿಗೆ ಶತ್ರುಗಳನ್ನು ಅವನ ಕುಟುಂಬದಲ್ಲೇ ಸೃಷ್ಟಿಸಿತು. ಔರಂಗಜೇಬನ ನಾಲ್ಕನೆಯ ಮಗ ಮುಹಮ್ಮದ ಅಕ್ಬರ ತಂದೆಗೆ ಎದುರಾಗಿ ನಿಂತನು.

೧೬೮೧ ರಲ್ಲಿ ಮುಹಮ್ಮದ ಅಕ್ಬರ ದಂಗೆಯೆದ್ದನು. ಅವನು ತಂದೆಗೆ ಬರೆದ ಕಠಿಣವಾದ, ಭರ್ತ್ಸನೆಯ ಪತ್ರವು ಔರಂಗಜೇಬ ತನ್ನ ತಂದೆ ಶಾಹಜಹಾನನಿಗೆ ಹಿಂದೆ ಬರೆದ ಪತ್ರದಂತೆಯೇ ಇತ್ತು. ಈ ಪತ್ರದಲ್ಲಿ ಅಕ್ಬರನು ಔರಂಗಜೇಬನ ಮೇಲೆ ದುರಾಡಳಿತದ ಆರೋಪ ಹೊರಿಸಿ, ತಂದೆಯನ್ನು ಸಿಂಹಾಸನಭ್ರಷ್ಟನನ್ನಾಗಿ ಮಾಡಿದ

ಮತ್ತು ಇಬ್ಬರು ಅಣ್ಣಂದಿರನ್ನು ಕೊಲ್ಲಿಸಿದ ಪಾಪದ ಪ್ರಕ್ಷಾಲನೆಗಾಗಿ ಸಿಂಹಾಸನ ತ್ಯಾಗ ಮಾಡಿ ಧಾರ್ಮಿಕ ಚಿಂತನೆಯಲ್ಲಿ ಮಗ್ನನಾಗ ಬೇಕೆಂದು ತಂದೆಗೆ ಸೂಚಿಸಿದ್ದನು.

ಔರಂಗಜೇಬನ ಜೀವನವು ಇತಿಹಾಸದಲ್ಲಿ ಒಂದು ನಿರಂತರ ಶೋಕದ ಕಥೆಯಾಗಿ ಉಳಿಯುವುದು. ಸಿಂಹಾಸನವನ್ನೇರಿದ ಮೊದಲಿನ ಇಪ್ಪತ್ತಮೂರು ವರ್ಷಗಳಲ್ಲಿ ಅಶೋಕ, ಹರ್ಷವರ್ಧನ ಮತ್ತು ಸಮುದ್ರಗುಪ್ತರ ಸಾಮ್ರಾಜ್ಯಗಳಿಗಿಂತಲೂ ವಿಸ್ತಾರವಾಗಿದ್ದ ಸಾಮ್ರಾಜ್ಯವನ್ನು ಸಂಘಟಿಸುವುದರಲ್ಲಿ: ಆತ ಮಗ್ನನಾಗಬೇಕಾಯಿತು. ಅಲ್ಲಿಂದ ಮುಂದೆ ಪತನಕ್ಕಾರಂಭ.

"ಇಷ್ಟಾದರೂ ಬುದ್ಧಿಮತ್ತೆ, ಶೀಲ ಮತ್ತು ಸಾಹಸಗಳ ದೃಷ್ಟಿಯಿಂದ ಈ ಅರಸು ಏಶಿಯದ ಮಹಾ ಚಕ್ರವರ್ತಿಗಳಲ್ಲಿ ಒಬ್ಬನಾಗಿದ್ದ. ಇತಿಹಾಸದಲ್ಲಿಯ ಈ ದುರಂತ ಒಂದು ಪರಿಪೂರ್ಣ ನಾಟಕದೋಪಾದಿಯಲ್ಲಿ ಘಟಿಸಿತು" ಎಂದು ಒಬ್ಬ ಇತಿಹಾಸಕಾರ ಹೇಳಿದ್ದಾನೆ.

ವೃದ್ಧಾಪ್ಯದಲ್ಲಿ ಈ ಮೊಗಲ ಬಾದಶಹನು ತಾನು ಏಕಾಂಗಿಯಾಗುತ್ತಿದ್ದೇನೆಂಬ ಭಾವನೆಯಿಂದ ಪೀಡಿತನಾಗಿದ್ದನು. ಅವನ ಹಿರಿಯ ಸರದಾರರನ್ನು ಮೃತ್ಯು ಒಬ್ಬೊಬ್ಬರನ್ನಾಗಿ ಎಳೆದು ಕೊಂಡೊಯ್ಯತೊಡಗಿತ್ತು.

ಅವನ ಕುಟುಂಬದಲ್ಲಿ ಸಾವು ಮೇಲಿಂದ ಮೇಲೆ ದಾಳಿಮಾಡಿ ಅವನ ದುಃಖವನ್ನು ಹೆಚ್ಚಿಸಿತು. ಔರಂಗಜೇಬನ ಕವಯಿತ್ರಿ ಪುತ್ರಿ ಜೇಬುನ್ನಿಸಾ ದಿಲ್ಲಿಯ ಸೆರೆಮನೆಯಲ್ಲಿ (೧೭೦೨) ಸತ್ತ ಮೂರು ವರ್ಷಗಳ ನಂತರ ಅವನ ಪ್ರೀತಿಪಾತ್ರಳಾಗಿದ್ದ ಸೊಸೆ ಜೆಹಾನಜೇಬ ಬಾನು ಗುಜರಾತದಲ್ಲಿ ತೀರಿಕೊಂಡಳು. ಇದಕ್ಕೂ ಒಂದು ವರ್ಷ ಮೊದಲು ಅವನ ಬಂಡುಗಾರ ಮಗ ಅಕ್ಬರ ಪರದೇಶದಲ್ಲಿ ಸತ್ತ ವಾರ್ತೆ ಬಂದಿತ್ತು.

೧೭೦೬ ರಲ್ಲಿ ಔರಂಗಜೇಬನ ಬಂಧು-ಭಗಿನಿಯರಲ್ಲಿ ಜೀವಂತವಿದ್ದ ಒಬ್ಬಳೇ ಒಬ್ಬಳಾದ ಗೋಹರ-ಆರಾ ಬೇಗಂ ಸತ್ತಳು. ಅವಳ ನಿಧನದ ವಾರ್ತೆ ಕೇಳಿದಾಗ ಔರಂಗಜೇಬನ ಬಾಯಿಯಿಂದ "ಶಾಹಜಹಾನನ ಮಕ್ಕಳಲ್ಲಿ ನಾವಿಬ್ಬರೇ ಬದುಕಿದ್ದೆವು" ಎಂಬ ಉದ್ಗಾರ ಹೊರಬಿತ್ತು.

ಅದೇ ವರ್ಷ ಮೇ ತಿಂಗಳಲ್ಲಿ ಅವನ ಮಗಳು ಮಿಹಿರ ಉನ್ನಿಸಾ ಮತ್ತು ಅವಳ ಗಂಡ ಇಝುರಬಕ್ಷ (ಮುರಾದನ ಮಗ) ತೀರಿಕೊಂಡರು. ಜೂನ್ ತಿಂಗಳಲ್ಲಿ ಅಕ್ಬರನ ಮಗ ಬುಲಂದ ಅಖ್ತಾರನೂ ಮರಣಹೊಂದಿದನು.

ಈ ಅವಧಿಯಲ್ಲಿ ಮರಾಠರ ಉಪಟಳ ಆರಂಭವಾಯಿತು. ಮಾರವಾಡ ರಾಜ್ಯವನ್ನು ನಿರ್ಮೂಲ ಮಾಡಲು ಔರಂಗಜೇಬನು ದೀರ್ಘಕಾಲ ನಡೆಸಿದ ಯುದ್ಧಗಳ ಮೂಲಕ ಮೊಗಲ ಸಾಮ್ರಾಜ್ಯಕ್ಕೆ ತನ್ನ ಹಾನಿಯನ್ನು ತುಂಬಿಕೊಳ್ಳುವ ಅವಕಾಶ ತಪ್ಪಿಹೋಗಿತ್ತು.

ಜಿಜಿಯಾ ಕರದಿಂದ ಹೆಚ್ಚು ಉತ್ಪನ್ನ ಬರುತ್ತಿದ್ದರೂ ಮೊಗಲ ಖಜಾನೆ ಬರಿದಾಗಿ ಹೋಗಿತ್ತು.

ಸಂಬಳ ಸರಿಯಾಗಿ ಸಿಗದೆ ಸಂತ್ರಸ್ತವಾಗಿದ್ದ ಮೊಗಲ ಸೇನೆಯ ಶಿಸ್ತು ಸಡಿಲಿತ್ತು. ದಕ್ಷಿಣದಲ್ಲಿದ್ದಾಗ ಬೇಸತ್ತು ಸೈನಿಕನೊಬ್ಬ ತನ್ನನ್ನು ದಿಲ್ಲಿಗೆ ಕಳಿಸಿದರೆ ಬಾದಶಾಹರಿಗೆ ಒಂದು ಲಕ್ಷ ರೂಪಾಯಿ ಕೊಡುವುದಾಗಿ ಹೇಳಿದನೆಂಬ ಮಾತಿನಿಂದ ಸೈನ್ಯದಲ್ಲಿ ಎಷ್ಟು ಧೈರ್ಯಹ್ರಾಸವಾಗಿತ್ತೆಂದು ತಿಳಿಯುವುದು.

ದೇಶದಲ್ಲಿ ಈ ರೀತಿ ರಾಜಕೀಯ ಅವ್ಯವಸ್ಥೆ ಮತ್ತು ಆಡಳಿತ ಶೈಥಿಲ್ಯವುಂಟಾಗಲು ಮೊಗಲ ಸಾಮ್ರಾಜ್ಯಕ್ಕೆ ಹೊಸ ಗಂಡಾಂತರವಾಗಿ ರಜಪೂತರು ಮತ್ತೆ ತಲೆಯೆತ್ತಿದರು.

ಧೈರ್ಯಶಾಲಿಯಾದ ಔರಂಗಜೇಬನು ತನ್ನ ಬೇನೆಯ ವಿರುದ್ಧ ಸೆಣಸಿ ಎಂದಿನಂತೆ ಕಾರ್ಯವನ್ನು ನಿರ್ವಹಿಸುತ್ತಿದ್ದ. ಆದರೆ ಅವನ ಆರೋಗ್ಯ ತೀರ ಕೆಟ್ಟಿತು. ಬದುಕು–ಸಾವುಗಳ ನಡುವೆ ಆತ ಹೊಯ್ದಾಡತೊಡಗಿದ. ಹನ್ನೆರಡು ದಿನಗಳ

ವರೆಗೆ ಆತ ಮೂರ್ಛಾವಸ್ಥೆಯಲ್ಲಿದ್ದ. ಆತನು ಸತ್ತನೆಂದೂ ಅವನ ಮಕ್ಕಳಲ್ಲಿ ಸಿಂಹಾಸನಕ್ಕಾಗಿ ಕಾದಾಟ ನಡೆದಿದೆಯೆಂದೂ ಸುದ್ದಿಗಳು ನಿರಾತಂಕವಾಗಿ ಹಬ್ಬುತ್ತಿದ್ದವು.

೧೭೦೫, ಅಕ್ಟೋಬರ ೨೩ ರಂದು ಔರಂಗಜೇಬ ಪಲ್ಲಕ್ಕಿಯಲ್ಲಿ ಕುಳಿತು ದಿಲ್ಲಿಯತ್ತ ಮರಳಿದ ಮಂದಗತಿಯಲ್ಲಿ ಪ್ರವಾಸ ಮಾಡುತ್ತ ಮೂರು ತಿಂಗಳ ನಂತರ ಸೈನ್ಯದೊಡನೆ ಅಹಮದನಗರವನ್ನು ತಲುಪಿದ.

ಇದೇ ಸಮಯದಲ್ಲಿ ಔರಂಗಜೇಬನಿಗೆ ತನ್ನ ಮಗ ಮಹಮ್ಮದ ಅಜಂ ಬಂಡೆದ್ದ ಹಾಗೂ ಆತ ಕಾಮಬಕ್ಷನ ವಿರುದ್ಧ ಶಸ್ತ್ರವೆತ್ತಲಿರುವನೆಂಬ ಸುದ್ದಿ ದೊರೆಯಿತು. ಇವರಿಬ್ಬರ ನಡುವೆ ಬಹಿರಂಗವಾಗಿ ಯುದ್ಧವಾಗದಿರಲಿ ಎಂದು ಔರಂಗಜೇಬನು ಕಾಮಬಕ್ಷನನ್ನು ವಿಜಾಪುರದ ಸುಬೇದಾರನೆಂದು ನೇಮಿಸಿ ದೊಡ್ಡ ಸೈನ್ಯದೊಂದಿಗೆ ಅವನನ್ನು ಅಲ್ಲಿಗೆ ಫೆಬ್ರುವರಿ ೪ ರಂದು ಕಳಿಸಿದನು. ನಾಲ್ಕು ದಿನಗಳ ನಂತರ ಮಾಳವಾಕ್ಕೆ ನೀನು ಗವರ್ನರನಾಗಿ ಹೋಗತಕ್ಕದ್ದು ಎಂದು ಮಹಮ್ಮದ ಅಝಂನಿಗೆ ಆಜ್ಞಾಪಿಸಿದನು. ಆದರೆ ಆ ಧೂರ್ತ ರಾಜಕುಮಾರನು ತಂದೆಯ ಮರಣ ಸನ್ನಿಹಿತವಾಗಿರುವುದನ್ನು ಕಂಡುಕೊಂಡು ದಿನ ಬಿಟ್ಟು ದಿನ ಮುಕ್ಕಾಂ ಮಾಡುತ್ತ ಮಂದಗತಿಯಲ್ಲಿ ಪ್ರಯಾಣ ಬೆಳೆಸಿದನು.

ಫೆಬ್ರುವರಿ ೧೭ ರಂದು ಔರಂಗಜೇಬನಿಗೆ ಭಯಂಕರ ಜ್ವರ ಬಂತು. ಆದರೂ ಆತ ದರಬಾರಕ್ಕೆ ಬಂದುದಲ್ಲದೆ ನಿತ್ಯದಂತೆ ನಮಾಜಿನಲ್ಲಿ ಭಾಗವಹಿಸಿದನು.

ಕೂಡಲೇ ಗುಣಮುಖವಾಗಬೇಕಾದರೆ ಒಂದು ಆನೆ ಹಾಗೂ ಬೆಲೆಯುಳ್ಳ ವಜ್ರವನ್ನು ದಾನ ಕೊಡಬೇಕೆಂಬ ಜ್ಯೋತಿಷಿಗಳ ಅಭಿಪ್ರಾಯವನ್ನು ಹಮೀದ ಉದ್ದೀನಖಾನನು ಬಾದಶಾಹನಿಗೆ ತಿಳಿಸಿದನು.

ಆದರೆ ಇದೊಂದು ಭ್ರಮೆಯೆಂದು ಔರಂಗಜೇಬ ಆ ಸೂಚನೆಯನ್ನು ತಿರಸ್ಕರಿಸಿದ. ಆನೆಯನ್ನು ದಾನಮಾಡುವುದು ಹಿಂದುಗಳ ಪದ್ಧತಿ, ತಾನೆಂದೂ ಆ ರೀತಿ ನಡೆಯುವುದಿಲ್ಲವೆಂದಾತ ಹೇಳಿದ. ಬದಲಿಗೆ ಬಡವರಲ್ಲಿ ಹಂಚಲಿಕ್ಕಾಗಿ ನಾಲ್ಕು ಸಾವಿರ ರೂಪಾಯಿಗಳನ್ನು ಮುಖ್ಯ ಕಾಜಿಯ ಕಡೆಗೆ ಕಳಿಸಿದ.

ಹಮೀದ ಉದ್ದೀನಖಾನನಿಗೆ ಬರೆದ ಪತ್ರದಲ್ಲಿ ಔರಂಗಜೇಬನು, "ಮಣ್ಣಿನ ಈ ಕಾಯವನ್ನು ಸ್ಮಶಾನಕ್ಕೊಯ್ದು ವ್ಯರ್ಥವಾಗಿ ಶವಪೆಟ್ಟಿಗೆಯಲ್ಲಿಡದೆ ಭೂಮಿಯಲ್ಲಿ ಹೂಳಬೇಕು" ಎಂದು ಬರೆದಿದ. ರಾಜ್ಯವನ್ನು ತನ್ನ ಮಕ್ಕಳಲ್ಲಿ ಹಂಚಬೇಕು ಎಂದು ಬರೆದ ಮೃತ್ಯುಪತ್ರವೊಂದನ್ನು ಕೂಡ ಆತ ಹಮೀದ ಉದ್ದೀನನ ಕೈಗೊಪ್ಪಿಸಿದ್ದನೆಂದು ಹೇಳುತ್ತಾರೆ. ಈ ಮೃತ್ಯುಪತ್ರ ಅನಂತರ ಅವನ ಮರಣಶಯ್ಯೆಯ ತಲೆದಿಂಬಿನ ಅಡಿಗೆ ಸಿಕ್ಕಿತು ಎಂದೂ ಹೇಳುತ್ತಾರೆ.

ಔರಂಗಜೇಬನು ಬರೆದಿಟ್ಟಿದ್ದೆಂದು ಹೇಳಲಾದ ಇನ್ನೊಂದು ಮೃತ್ಯುಪತ್ರವೀಗ ಇಂಡಿಯ ಆಫೀಸ್ ಲಾಯಬ್ರರಿಯಲ್ಲಿದೆ.

ಆತನ ಮರಣಶಯ್ಯೆಯಲ್ಲಿ ದೊರೆತ ಈ ಮೃತ್ಯುಪತ್ರದಲ್ಲಿ ಹನ್ನೆರಡು ಆದೇಶಗಳಿವೆ. ಏಕೆಂದರೆ ಎಲ್ಲ ಅಂಕೆಗಳಲ್ಲಿ ಹನ್ನೆರಡರ ಅಂಕೆ ಅತಿ ಭಾಗ್ಯದಾಯಕ ಎಂದು ಆತ ನಂಬಿದ್ದ!

ಈ ಆದೇಶಗಳಲ್ಲಿ ಮೊದಲಿನ ಐದು ಈ ರೀತಿ ಇವೆ: ೧) ಈ ಪಾಪಿಯ ಪರವಾಗಿ ಹಸನನ ಗೋರಿಗೆ ವಸ್ತ್ರವನ್ನು ಹೊದಿಸಿರಿ. ಏಕೆಂದರೆ ಪಾಪಕೂಪದಲ್ಲಿ ಮುಳುಗಿದವರಿಗೆ ಆ ಕರುಣಾನಿಧಿಯಲ್ಲದೆ ಮತ್ತಾರೂ ಗತಿಯಿಲ್ಲ. ಈ ಕಾರ್ಯಕ್ಕಾಗಿ ಬೇಕಾಗುವ ಸಾಧನ ನನ್ನ ಮಗ ಅಜಂನಲ್ಲಿದೆ. ಅದನ್ನು ತೆಗೆದುಕೊಳ್ಳಿ. ೨) ನಾನು ಹೊಲಿದ ಟೊಪ್ಪಿಗೆಗಳಿಂದ ಬಂದ ೪ ರೂಪಾಯಿ ೨ ಆಣೆಗಳು ಮಹಾಲದಾರ ಅಯಾಬೇಗನ ಬಳಿ ಇವೆ. ಆ ಹಣದಿಂದ ಈ ಅಸಹಾಯಜೀವಿಯ ಶವಕ್ಕೆ ಹೊದಿಸಲು ಬಟ್ಟೆಯನ್ನು ಕೊಳ್ಳಿರಿ.

ಕುರಾಣದ ಪ್ರತಿ ಮಾಡಿದ್ದಕ್ಕಾಗಿ ದೊರೆತ ೩೦೫ ರೂಪಾಯಿಗಳು ನನ್ನ ಹಣದ ಚೀಲದಲ್ಲಿವೆ. ಅವನ್ನು ನನ್ನ ಮರಣದ ದಿನ ಫಕೀರರಿಗೆ ಹಂಚಿರಿ. ಕುರಾಣದ ಪ್ರತಿ ಮಾಡಿದ್ದಕ್ಕಾಗಿ ದೊರೆತ ಹಣ ಪವಿತ್ರವೆಂದು ಶಿಯಾ ಜನರು ಭಾವಿಸುವುದರಿಂದ ಆ ಹಣವನ್ನು ನನ್ನ ಶವದ ಬಟ್ಟೆ ಹಾಗೂ ಇನ್ನಿತರ ವಸ್ತುಗಳಿಗಾಗಿ ಖರ್ಚು ಮಾಡಬೇಡಿರಿ. ೩) ನನ್ನ ಮಕ್ಕಳಲ್ಲಿ ತೀರ ಹತ್ತಿರದ ಉತ್ತರಾಧಿಕಾರಿಯಾರ ಅಲಿಜಾನನಿಂದ ಉಳಿದ ಅಗತ್ಯದ ವಸ್ತುಗಳನ್ನು ತೆಗೆದುಕೊಳ್ಳಿರಿ. ಏಕೆಂದರೆ ಅವನ ಮೇಲೆ ನನ್ನ ಅಂತ್ಯಕ್ರಿಯೆಯ ಕಾಲದಲ್ಲಿ ನಡೆಯುವ (ಕಾಯದೆಬದ್ಧ ಅಥವಾ ಅಲ್ಲದ) ಪದ್ಧತಿಗಳ ಹೊಣೆ ಇದೆ. ಈ ಅಸಹಾಯ ಮನುಷ್ಯ ಅವಕ್ಕೆ ಹೊಣೆಯಲ್ಲ. ಏಕೆಂದರೆ ಸತ್ತವರು ಬದುಕಿರುವವರ ಅನುಗ್ರಹವನ್ನು ಅವಲಂಬಿಸಿರುತ್ತಾರೆ. ೪) ಸನ್ಮಾರ್ಗವನ್ನು ಬಿಟ್ಟು ಚಲಿಸುತ್ತಿದ್ದ ಈ ಪ್ರಾಣಿಯನ್ನು ಬೊಕ್ಕತಲೆಯಲ್ಲಿ ಹುಗಿಯಿರಿ. ಏಕೆಂದರೆ ಮಹಾ ಚಕ್ರವರ್ತಿ(ದೇವರು)ಯ ಎದುರು ಬೊಕ್ಕತಲೆಯಲ್ಲಿ ಹೋಗುವ ಪ್ರತಿ ಪಾಪಿಯೂ ಕರುಣೆಗೆ ಪಾತ್ರನಾಗುತ್ತಾನೆ. ೫) ಗಾಝಿ ಅರಿವೆ(ದಪ್ಪ ಒರಟು ಅರಿವೆ)ಯಿಂದ ನನ್ನ ಶವಪೆಟ್ಟಿಗೆಯನ್ನು ಮುಚ್ಚಿರಿ. ಮೆರವಣಿಗೆ ಮುಂತಾದ ವೈಭವಗಳು ಬೇಡ.

ಮುಂದಿನ ಏಳು ಆದೇಶಗಳಲ್ಲಿ ಸಾಮ್ರಾಜ್ಯ ಸಂಘಟನೆಗಾಗಿ ಅನುಸರಿಸಬೇಕಾದ ಸೂಚನೆಗಳಿವೆ.

ಪ್ರಜ್ಞೆ ತಪ್ಪುವ ಮೊದಲು ಅವನು ಮಾಡಿದ ಕೊನೆಯ ಕಾರ್ಯವೆಂದರೆ, ತನ್ನ ಮಕ್ಕಳಾದ ಅಜಂ ಮತ್ತು ಕಾಮಬಕ್ಷರಿಗೆ ಅವರಿಬ್ಬರೂ ಬಂಧು ಪ್ರೇಮದಿಂದ, ಸಹನೆಯಿಂದ ಶಾಂತಿಯಿಂದ ನಡೆದುಕೊಳ್ಳಬೇಕೆಂದು ಕೇಳಿಕೊಳ್ಳುವ ಪತ್ರಗಳನ್ನು ಬರೆದದ್ದು.

೧೭೦೭, ಫೆಬ್ರುವರಿ ೨೧, ಶುಕ್ರವಾರದ ದಿನ ಔರಂಗಜೇಬನು ರಾತ್ರಿಯ ಕೊನೆಯ ಪ್ರಹರದಲ್ಲಿ ಮುಂಜಾನೆಯ ಪ್ರಾರ್ಥನೆಗಾಗಿ ಹಾಸಿಗೆ ಬಿಟ್ಟಿದ್ದ.

ಜಪಮಾಲೆಯ ಮಣಿಗಳನ್ನೆಣಿಸುತ್ತಿದ್ದ ಹಾಗೆ ಅವನ ಶ್ವಾಸೋಚ್ಛ್ವಾಸ ಬಿಗಿಯಾಯಿತು. ಸಾವಕಾಶವಾಗಿ ಆತ ಎಚ್ಚರ ತಪ್ಪಿದ. ಆದರೆ ಆತನ ಮನೋಬಲ ಎಷ್ಟಿತ್ತೆಂದರೆ ಮುಂಜಾನೆ ೮ ಗಂಟೆಯ ವರೆಗೂ ಅವನ ಬೆರಳುಗಳು ಮಣಿಗಳ ಮೇಲೆ ಹರಿದಾಡುತ್ತಲೇ ಇದ್ದವು; ತುಟಿಗಳು ಕಲಮಾ ಪಠಿಸುವಂತೆ ಅಲುಗಾಡುತ್ತಿದ್ದವು

ಐವತ್ತು ವರ್ಷ, ಎರಡೂವರೆ ತಿಂಗಳು ರಾಜ್ಯಭಾರ ಮಾಡಿದ ಬಳಿಕ ಔರಂಗಜೇಬ ಮರಣ ಹೊಂದಿದ.

ಮಾಳವಾಕ್ಕೆ ಹೊರಟಿದ್ದ ಮುಹಮ್ಮದ ಅಝಂ ಅವಸರದಿಂದ ತಿರುಗಿ ಅಹಮ್ಮದ ನಗರಕ್ಕೆ ಬಂದ. ತಂದೆಯ ಮರಣಕ್ಕಾಗಿ ಆತ ಶೋಕ ಪ್ರದರ್ಶಿಸಿದ. ತಂಗಿ ಝೀನತ-ಉನ್ನಿಸಾ ಬೇಗಂಳಿಗೆ ಸಮಾಧಾನ ಹೇಳಿದ.

ಶವದ ಮೆರವಣಿಗೆ ಅಹಮದನಗರದಿಂದ ದೌಲತಾಬಾದದ ಬಳಿಯ ಖುಲ್ದಾಬಾದಕ್ಕೆ ಹೊರಟಾಗ ಮಹಮ್ಮದ ಅಜಂ ಕೆಲ ದೂರದ ವರೆಗೆ ಅದರ ಸಂಗಡ ಹೋದ. ಆದರೆ ಬಳಿಕ ಪರಿಸ್ಥಿತಿಯ ಅವಲೋಕನಕ್ಕಾಗಿ ನಗರಕ್ಕೆ ಹಿಂತಿರುಗಿದ.

ಬಾದಶಾಹ ಔರಂಗಜೇಬನ ಶವ ಶೇಕ ಬುರಹಾನುದ್ದೀನ ಮೊದಲಾದ ಸಂತರ ಗೋರಿಗಳ ಮಗ್ಗಲಲ್ಲಿ ಹೂಳಲ್ಪಟ್ಟಿತು.

ಔರಂಗಜೇಬನ ಬಿನ್ನಹದಂತೆ ಗೋರಿಯ ಮೇಲೆ ಛತ್ರವೇನೂ ನಿರ್ಮಿಸಲ್ಪಟ್ಟಿಲ್ಲ. ಅಲ್ಲಿರುವ ತುಳಸೀಗಿಡವೊಂದು ಎರಡು ನೂರು ವರ್ಷಗಳ ಹಿಂದೆ ನೆಟ್ಟಾಗ ಎಷ್ಟು ಎತ್ತರವಿತ್ತೋ ಈಗಲೂ ಅಷ್ಟೇ ಎತ್ತರವಾಗಿ ಇದೆ ಎಂದು ಈ ಗೋರಿಯಿರುವ ರಾಮೋಜಾ ಊರಿನ ಜನ ಅನ್ನುತ್ತಾರೆ. ಈ ಗೋರಿಯನ್ನು ಬಿಳಿ ವಸ್ತ್ರವೊಂದು ಸದಾ ಮುಚ್ಚಿರುತ್ತದೆ.

ನ್ಯತ್ಯು ಸಮತಾವಾದಿಯೆಂದು ನೀವು ಕೇಳಿದ್ದೀರಿ,
ಆದರೆ ಇಂಗ್ಲಂಡಿನಲ್ಲಿ ನ್ಯತ್ಯುಕರ ಸಮತಾವಾದವನ್ನು ತರುತ್ತಿದೆ.

# ಬ್ರಿಟಿಶ ಆಸ್ತಿವಂತರ ಉತ್ತರಪೂಜೆ

ಐವತ್ತು ವರ್ಷಗಳ ಹಿಂದೆ ಬ್ರಿಟಿಶ ದ್ವೀಪಗಳ ಅರ್ಧಾಂಶ ಭೂಮಿ ೨,೫೦೦ ಭೂಮಾಲಿಕರ ಕೈಯಲ್ಲಿತ್ತೆಂದು ಅಂದಾಜು ಮಾಡಲಾಗಿತ್ತು. ಅವರಲ್ಲಿ ವೆಸ್ಟ್‌ಮಿನ್‌ಸ್ಟರ್, ನಾರ್ಫೋಕ್, ದಿವೋನ್‌ಶಾಯರ್, ಸದರ್ಲಂಡ್, ಅಥೋಲ್, ಬಕ್‌ಕ್ಲ್ಯೂ, ಆರ್ಗಿಲ್, ಮೋಂಟ್ರೋಸ್ ಮತ್ತು ಬೆಡ್‌ಫೋರ್ಡ್ ವಂಶದವರು ಹೆಸರಾಂತವರು. ಪ್ರತಿಯೊಂದು ಡ್ಯೂಕ್ ಮನೆತನಕ್ಕೂ ತನ್ನ ಸ್ವಂತ "ರಾಜ್ಯ" ಇತ್ತು.

ಇಂದು ಈ ಮಹಾ ಆಸ್ತಿಗಳೆಲ್ಲ ಭರದಿಂದ ಕರಗಿಹೋಗುತ್ತಿವೆ. ಏಕೆ? ಅಲ್ಲಿಯೂ ಜಮೀನ್ದಾರಿ ನಿರ್ಮೂಲನ, ಹೊಲಸಾಗುವಳಿ, "ಉಳುವವನಿಗೇ ಹೊಲ" ಕಾಯದೆಗಳು ಬಂದವೆಂದೆ?

ಅಲ್ಲ—ಕರಗಳು ಆ ಕೆಲಸ ಮಾಡುತ್ತಿವೆ. ದೊಡ್ಡ ಆಸ್ತಿಗಳನ್ನು ಕರಗಿಸಿದ ಒಂದೇ ಕರವೆಂದರೆ ನ್ಯತ್ಯುಕರ—ಅರ್ಥಾತ್ ವಾರಸಾಕರ.

ನಾಲ್ಕು ಶತಮಾನಗಳಿಂದ ಬೆಡ್‌ಫೋರ್ಡ್ ಡ್ಯೂಕರ "ರಾಜಧಾನಿ" ಯಾಗಿದ್ದ ವೋಬರ್ನ್ ಅಬೆಯ ಭವ್ಯ ಸುಂದರ ಆಸ್ತಿ ಮೊನ್ನೆ ಮೊನ್ನೆ ವಾರಸಾಕರಕ್ಕೆ ತುತ್ತಾಗಿ ಕರಗಿಹೋಗಿದೆ.

ಬ್ರಿಟನ್ನಿನಲ್ಲಿ ದೊಡ್ಡ ಆಸ್ತಿಗಳ ಮೇಲೆ ವಾರಸಾಕರ ಸೇಕಡಾ ೮೦ರ ವರೆಗೂ ಬೀಳಬಹುದು. ಇಷ್ಟು ಕರವನ್ನು ನಗದಿಯಲ್ಲಿ ಅಥವಾ ಸರಕಾರಿ ಸಾಲಪತ್ರಗಳ ರೂಪದಲ್ಲಿ ಕೊಡುವುದು ಹೇಗೆ ಸಾಧ್ಯ? ಅದನ್ನು ಮಾರಿ ಕರಕ್ಕೆ ಬೇಕಾದ ಹಣ ದೊರಕಿಸುವುದೂ ಕಷ್ಟವೇ. ಆದ್ದರಿಂದ ಸರಕಾರವೇ ಅದನ್ನು ತೆಗೆದುಕೊಂಡು ಕರ ಸಂದಾಯ ಮಾಡಿಕೊಳ್ಳಬೇಕಾಗುತ್ತದೆ. ವಾರಸಾಕರ ತೀರಿಸಲಾರದೆ ಪೇಟೆಗೆ ಬಂದ ಭೂಮಿಯ ಅಂಶಗಳನ್ನು ಕೊಂಡುಕೊಳ್ಳಲೆಂದೇ ೧೯೪೬ರಲ್ಲಿ ಸರಕಾರವು ರಾಷ್ಟ್ರೀಯ ಭೂಮಿನಿಧಿಯನ್ನು ಸ್ಥಾಪಿಸಿತು.

ಎಂಭತ್ತು ವರ್ಷಗಳ ಹಿಂದೆ ದಿವೋನ್‌ಶಾಯರ್ ಡ್ಯೂಕರ ಆಸ್ತಿ ೨,೦೦,೦೦೦ ಎಕರೆಯಷ್ಟಿತ್ತು. ಅದರ ವಾರ್ಷಿಕ ಗೇಣಿ ಆದಾಯವೇ ೧,೮೦,೦೦೦ ಪೌಂಡು (ಸುಮಾರು ರೂ. ೨೪,೦೦,೦೦೦) ಇತ್ತು.

ಕೆಲ ವರ್ಷಗಳ ಹಿಂದೆ ದಿವೋನ್‌ಶಾಯರ್ ಡ್ಯೂಕರು ತೀರಿಕೊಂಡಾಗ ಅವರ ಆಸ್ತಿಯ ಬೆಲೆ ೩೦,೦೦,೦೦೦ ಪೌಂಡೆಂದು ಅಂದಾಜು ಮಾಡಿ ವಾರಸಾಕರ ಹೇರಲಾಯಿತು. ಈ ಕರ ತೀರಿಸಲೆಂದು ೭,೦೦೦ ಎಕರೆ ಭೂಮಿಯನ್ನು ಮಾರಾಟಕ್ಕೆ ತೆಗೆದರು. ಅದನ್ನೆಲ್ಲ ಚಿಕ್ಕ ಚಿಕ್ಕ ರೈತರು ಕೊಂಡರು. ಅದರಿಂದ ೨,೫೦,೦೦೦ ಪೌಂಡು ನಗದಿಯಾಗಿ ಬಂತು. ಆದರೆ ಸರಕಾರಕ್ಕೆ ಸಲ್ಲಬೇಕಾದ ಕರದಲ್ಲಿ ಇದು ನೂರಕ್ಕೆ ಹತ್ತರಷ್ಟು ಮಾತ್ರವಾಗಿತ್ತು.

ಹೊಸ ಡ್ಯೂಕರು ಈ ಕರವನ್ನು ಕಂತು ಕಂತಾಗಿ ತೀರಿಸಹೊರಟರು. ಆದರೆ ಅವರಿಗೆ ನಗದಿಯಾಗಿ ಅದನ್ನು ತೀರಿಸಲು ಸಾಧ್ಯವಾಗಲಿಲ್ಲ. ಆದ್ದರಿಂದ ಅವರಿಗೆ ಡರ್ಬಿಶಾಯರಿನಲ್ಲಿರುವ ತಮ್ಮ ತಾತ ಮುತ್ತಾತಂದಿರ ಭವ್ಯ ಅರ

ಜಾರ್ಜ್ ಗಾಡ್ವಿನ್ನರ ಲೇಖದ ಆಧಾರದಿಂದ

ಮನೆಯನ್ನೇ ಮಾರುವ ಪ್ರಸಂಗ ಬಂತು.

ವೆಸ್ಟ್‌ಮಿನಿಸ್ಟರಿನ ಎರಡನೇ ಡ್ಯೂಕರ ಮರಣಾನಂತರವೂ ಹೀಗೆಯೇ ಆಯಿತು. ಮೇಫ್ಯಾರ್ ಮೊದಲಾದೆಡೆಗಳಲ್ಲಿಯ ಅವರ ದೊಡ್ಡ ಆಸ್ತಿ-ಗಳು ಚಿಕ್ಕಪುಟ್ಟ ಭೂಮಾಲಿಕರ ಕೈಸೇರಿಬಿ-ಟ್ಟವು.

ವಾರಸಾಕರವು ಸದ್ದಿಲ್ಲದೆ ಇಂಗ್ಲಂಡಿನಲ್ಲಿ ಹಿಡುವಳಿಗಳ ಸ್ವರೂಪದಲ್ಲಿ ಕ್ರಾಂತಿಯನ್ನುಂಟು ಮಾಡಿಬಿಟ್ಟಿದೆ. ಈ ವಿರಾಟ್ ಆಸ್ತಿಗಳಲ್ಲಿ ಬಹು ಭಾಗ ಒಕ್ಕಲುತನದ ಭೂಮಿ. ಅದರಲ್ಲಿ ಕೃಷಿ ಮಾಡುವವರು ಒಡೆಯನಿಗಾಗಿ ದುಡಿಯುವ ಒಕ್ಕಲುಗಳು. ವಾರಸಾಕರವು ಕೈವಾಡ ತೋರಿಸಲಾರಂಭಿಸಿದ ಮೇಲೆ ಸಾವಕಾಶವಾಗಿ ಈ ಆಸ್ತಿಗಳು ಒಡೆದು ಅವುಗಳಲ್ಲಿ ಅಷ್ಟಿಷ್ಟು ಅದೇ ಒಕ್ಕಲುಗಳ ಕೈಸೇರುತ್ತಿದೆ. ತಮ್ಮ ಅಜ್ಜ ಮುತ್ತಜ್ಜಂದಿರ ಕಾಲದಿಂದ ಡ್ಯೂಕರ ಒಕ್ಕಲುಗಳಾಗಿ ಗೇಣಿಗಾಗಿ ದುಡಿಯುತ್ತಿದ್ದವರು ಈಗ ಅಷ್ಟಿಷ್ಟೇ ತಮ್ಮ ಒಡೆಯರ ಭೂಮಿಗಳನ್ನು ಕೊಳ್ಳುತ್ತಿದ್ದಾರೆ. "ಉಳುವವನಿಗೇ ಭೂಮಿ" ಹೀಗೆ ತಾನಾಗಿ ಸಾಧಿಸುತ್ತಿದೆ.

ಹಿಂದಿನ ಕಾಲದಲ್ಲಿ ದೊಡ್ಡ ಆಸ್ತಿಗಳಿಂದ ಬರುವ ಗೇಣಿ ಮತ್ತು ಬಾಡಿಗೆಗಳು ಆ ಆಸ್ತಿಗಳ ಉಸ್ತುವಾರಿಗೆ ಸಾಲುತ್ತಿದ್ದವು. ಆದರೆ ಇಂದಿನ ತುಟ್ಟಿ ದಿನಗಳಲ್ಲಿ ಉತ್ಪನ್ನವು ಆಸ್ತಿ ಮನೆಗಳ ದುರಸ್ತಿ, ಸುಧಾರಣೆ, ಪೋಷಣೆಗಳಿಗೆ ಏನೂ ಸಾಲುವುದಿಲ್ಲ. ಆದ್ದರಿಂದ ದೊಡ್ಡ ದೊಡ್ಡ ಔದ್ಯೋಗಿಕ ಕಂಪನಿಗಳಿಂದ ಧಾರಾಳ ಉತ್ಪನ್ನವುಳ್ಳವರಷ್ಟೇ ದೊಡ್ಡ ಭೂ-ಆಸ್ತಿಗಳನ್ನು ಕಾಪಾಡಿಕೊಳ್ಳಬಲ್ಲರು.

ಆದರೆ ಇಂದಿನ ವಾರಸಾಕರದ ಹೊಡೆತದ ಮುಂದೆ ಔದ್ಯೋಗಿಕ ಸಂಪತ್ತುಗಳೂ ತಾಳಲಾರದಂತಾಗಿವೆ. ಶ್ರೀಮಂತನಾದವನು ತನ್ನ ಜೀವಮಾನವಿರುವ ವರೆಗೆ ನಾನಾ ವಿಧವಾದ ಉತ್ಪನ್ನಗಳಿಂದ ಹಿಂದಿನವರಂತೆ ಆಢ್ಯತೆಯಲ್ಲೇ ಬಾಳಬಹುದು. ಆದರೆ ಅವನ ಉತ್ತರಾಧಿಕಾರಿಗಳಿಗೆ ಅದು ಶಕ್ಯವಾಗುವುದಿಲ್ಲ.

ಉದಾಹರಣೆಗೆ: ಕೌಡ್ರೇ ಆಸ್ತಿಯನ್ನು ತೆಗೆದು

**ಜೀವಂತನಾಗಿರುವಾಗ ವ್ಯಕ್ತಿಗೆ ತನ್ನ ಆಸ್ತಿಯನ್ನು—ಕರಗಳನ್ನೆಲ್ಲ ತೆತ್ತ ಮೇಲೆ ನಿರಾತಂಕವಾಗಿ ಅನುಭವಿಸಲು ಹಕ್ಕು ಕೊಡಬೇಕು. ಅವನು ಸತ್ತನೆಂದರೆ ಉತ್ತರಾಧಿಕಾರಿಗಳಿಗೆ ಅವನ ಆಸ್ತಿ ಹೆಚ್ಚು ಕೈಗೆ ಹತ್ತಬಾರದು ಎಂಬುದೇ ಮೃತ್ಯುಕರ ಅಥವಾ ವಾರಸಾಕರದ ಉದ್ದೇಶ. ಭಾರತದಲ್ಲಿ ಈ ಕರ ಕಳೆದ ವರ್ಷವೇ ಜಾರಿಯುಲ್ಲಿ ಬಂದಿದೆ. ಅದ-ರನ್ವಯ ವ್ಯಕ್ತಿ ಸತ್ತೊಡನೆ ಅವನ ಆಸ್ತಿ ಉತ್ತರಾಧಿಕಾರಿಗಳ ಕೈಸೇರುವ ಮೊ-ದಲು ಕರಕ್ಕೆ ಪಾತ್ರವಾಗುತ್ತದೆ.**

**ಭಾರತೀಯ ಆಸ್ತಿ (ವಾರಸಾ) ಕರ ೧,೦೦,೦೦೦ ರೂಪಾಯಿಗಿಂತ ಕಡಿಮೆ ಬೆಲೆಯ ಆಸ್ತಿ ಬಿಟ್ಟು ಹೋದರೆ ಬೀಳುವುದಿಲ್ಲ. ಅನಂತರದ ಆಸ್ತಿಯ ಮೇಲೆ ಹೆಚ್ಚು ಹೆಚ್ಚು ಪ್ರಮಾಣದ ಕರ ಬೀಳುತ್ತ ಹೋಗುವುದು. ೧,೫೦,೦೦೦ ದ ಆಸ್ತಿ ಬಿಟ್ಟು ಹೋದರೆ ಅದರ ಮೇಲೆ ರೂ. ೩,೭೫೦ ಕರ ಬಿದ್ದರೆ ೫,೦೦,೦೦೦ ದ ಆಸ್ತಿಯ ಮೇಲೆ ರೂ. ೫೧,೨೫೦, ೧೦,೦೦,೦೦೦ ದ ಆಸ್ತಿಯ ಮೇಲೆ ರೂ. ೧,೫೧,೨೫೦, ರೂ. ೨೦,೦೦,೦೦೦ ಆಸ್ತಿಯ ಮೇಲೆ ರೂ. ೪,೦೧,೨೫೦, ರೂ. ೪೧,೦೦,೦೦೦ ಲಕ್ಷದ ಆಸ್ತಿಯ ಮೇಲೆ ರೂ. ೧೪,೦೧,೨೫೦ ಮತ್ತು ಅದರ ಮೇಲಿನ ಪ್ರತಿ ೧೦೦ ಕ್ಕೆ ೪೦ ರೂಪಾಯಿ ಕರ ಬೀಳುವುದು!**

ಕೊಳ್ಳೋಣ. ಗತಿಸಿದ ಲಾರ್ಡ್ ಕೌಡ್ರೆಯವರು ವಿರಾಟ್ ಎಂಜಿನಿಯರಿಂಗ್ ಮತ್ತು ಕಾಂಟ್ರ್ಯಾಕ್ಟ್ ಉದ್ಯಮೆಗಳ ಒಡೆಯರಾಗಿದ್ದರು. ಅವುಗಳ ಉತ್ಪನ್ನದಿಂದ ಅವರು ಒಂದು ದೊಡ್ಡ ಅರಮನೆ ಯಂಥ ಭವನವನ್ನೂ ಭಾರೀ ಉದ್ಯಾನವನ್ನೂ ನಡೆಸಿಕೊಂಡು ಹೋಗುತ್ತಿದ್ದರು. ಆದರೆ ಅವರು ಸತ್ತದ್ದೇ ತಡ, ವಾರಸಾಕರವನ್ನು ಕೊಡಲೆಂದು ಅವರ ಆಸ್ತಿಗಳಲ್ಲಿ ೪೦,೦೦೦ ಎಕರೆಯನ್ನು ಮಾರಬೇಕಾಯಿತು. ಇದರ ಬಹು ಭಾಗವನ್ನು ಅವರ ಹಿಂದಿನ ಒಕ್ಕಲುಗಳೇ ಸ್ವಂತ ಆಸ್ತಿ ಯಾಗಿ ಪಡೆದಿದ್ದಾರೆ.

ವಾರಸಾಕರವನ್ನು ತಪ್ಪಿಸಲು ಏನಾದರೂ ಉಪಾಯವಿಲ್ಲವೆ? ಇದೆ. ಆಸ್ತಿದಾರನು ಜೀವ ಮಾನದಲ್ಲೇ ಬೇಕಾದವರಿಗೆ ತನ್ನ ಆಸ್ತಿಯ ಎಷ್ಟು ದೊಡ್ಡ ಅಂಶವನ್ನಾದರೂ "ಕಾಣಿಕೆ" ಎಂದು ಕೊಡಬಹುದು. ವಾರಸಾಕರ ಅಂಥ ಆಸ್ತಿಗಳಿಗೆ ಕೈಹಚ್ಚಲಾರದು. ಅನೇಕ ಶ್ರೀಮಂ ತರು ಈ ಉಪಾಯದಿಂದ ಬ್ರಿಟಿಶ ಬೊಕ್ಕಸಕ್ಕೆ ವಂಚನೆ ಮಾಡುತ್ತಾರೆ. ಆದರೆ ಇದು ನಿಶ್ಚಿತ ಉಪಾಯವೆಂದು ಹೇಳಲು ಬಾರದು. "ಕಾಣಿಕೆ" ಅಥವಾ "ದಾನ" ಕೊಟ್ಟ ಮೇಲೆ ಅವನು ಕನಿಷ್ಠ ಐದು ವರ್ಷವಾದರೂ ಹೇಗಾದರೂ ಮಾಡಿ ಬದುಕಿರಬೇಕು. ಅಷ್ಟು ತಪ್ಪಿ ಅವನು ಅದಕ್ಕೆ ಮೊದಲೇ ಸತ್ತುಹೋದರೆ ಅವನು ಕಾಣಿಕೆ ಕೊಟ್ಟ ಆಸ್ತಿಯೂ ವಾರಸಾಕರಕ್ಕೆ ಒಳಗಾಗು ವುದು. ಈಚೆಗೆ ಇಂಥ ಒಂದು ನಿದರ್ಶನ ಘಟಿ- ಸಿತು. ಒಬ್ಬ ಶ್ರೀಮಂತ ಲಾರ್ಡರು ತಮ್ಮ ಆಸ್ತಿಯ ದೊಡ್ಡ ಭಾಗವನ್ನು ಬಳಗದವರಿಗೆ "ಕಾಣಿಕೆ" ಕೊಟ್ಟಿಟ್ಟದ್ದರು. ಈ ಕಾಣಿಕೆ ಕೊಟ್ಟು ಐದು ವರ್ಷ ತುಂಬಲು ಇನ್ನೂ ಹನ್ನೊಂದು ವಾರವಿರುವಾಗ ಆಕಸ್ಮಾತ್ತಾಗಿ ಅವರಿಗೆ ಮರಣ ಬಂತು. ಸರಕಾರ ನಡುವೆ ಪ್ರವೇಶಿಸಿ ಕಾಣಿಕೆ ಕೊಟ್ಟ ಆಸ್ತಿಯ ಮೇಲೂ ಭಾರವಾದ ವಾರಸಾಕರ ಹೇರಿತು!

ವಾರಸಾಕರವು ಬ್ರಿಟಿಶ್ ದ್ವೀಪದ ಭೂಮಾ- ಲಿಕತ್ವದ ಸ್ವರೂಪವನ್ನು ವಿಚಿತ್ರ ದಿಶೆಗಳಲ್ಲಿ ಬದಲಾಯಿಸಿದೆ. ಕ್ರೈಸ್ತಮಠಗಳ ಆಸ್ತಿಯ ಮೇಲೆ ವಾರಸಾಕರ ಇಲ್ಲವಾದ್ದರಿಂದ ಮಠಗಳು ದಿನ ದಿನಕ್ಕೆ ಧನಸಂಪನ್ನವಾಗುತ್ತಿವೆ. ಬ್ರಿಟಿಶ್ ಮಠ ಗಳ ಆಸ್ತಿಯ ಬೆಲೆ ಇಂದು ೬,೦೦,೦೦,೦೦೦ ಪೌಂಡುಗಳಷ್ಟಿದೆ. ಡ್ಯೂಕ್ ಮತ್ತು ಲಾರ್ಡರಿಗೆ ಅಷ್ಟು ಆಸ್ತಿ ಇಲ್ಲ.

ಇನ್ನೊಂದು ಸ್ವರೂಪ ಬದಲಾವಣೆಯೆಂದರೆ ಸರಕಾರವು ಎಲ್ಲರಿಗಿಂತ ದೊಡ್ಡ ಭೂಮಾಲಿಕ ನಾಗಿರುವುದು. ವಾರಸಾ ಕರ ಕೊಡಲಾರದ ಒಡೆಯರು ರಾಷ್ಟ್ರೀಯ ಭೂನಿಧಿಯವರ ಹತ್ತಿರ ಒಪ್ಪಂದ ಮಾಡಿಕೊಂಡು ತಮ್ಮ ಭವನಗಳನ್ನೂ ಭೂಮಿಗಳನ್ನೂ ಸರಕಾರದ ವಶಕ್ಕೆ ಒಪ್ಪಿಸು ತ್ತಾರೆ. ಸರಕಾರವು ಪ್ರತಿಯಾಗಿ ಅವರಿಗೆ ಜೀವ ಮಾನವಿರುವ ವರೆಗೆ ಪುಕ್ಕಟೆ ವಸತಿಯನ್ನು ಕೊಡುತ್ತದೆ. ಹೀಗೆ ಇಂದು ಬ್ರಿಟಿಶ ಸರಕಾರ ೫೦,೦೦,೦೦೦ ಎಕರೆ ಭೂಮಿಯ ಒಡೆಯನಾ ಗಿದೆ.

ಈ ಭವನಗಳನ್ನೂ ಉದ್ಯಾನಗಳನ್ನೂ ತೆಗೆದು ಕೊಂಡು ಸರಕಾರ ಏನು ಮಾಡುತ್ತದೆ? ಆಸ್ಪತ್ರೆಯಾಗಿಯೋ ಶಾಲೆಯಾಗಿಯೋ ರಾ- ಷ್ಟ್ರೀಯ ಉದ್ಯಾನವಾಗಿಯೋ ಮಾರ್ಪಡಿಸು ತ್ತದೆ. ಅವುಗಳನ್ನು ಕೊಳ್ಳುವ ಸಂಪನ್ನರು ಇಂಗ್ಲಂಡಿನಲ್ಲೀಗ ದುರ್ಲಭರೇ.



ಜೀವನದಲ್ಲಿ ಸೋಲಿಗಿಂತ
ಗೆಲವಿನ ಸಂಭವವೇ
ಹೆಚ್ಚೆಂಬ ದೃಢವಿಶ್ವಾಸ ಬೇಕು.



# ಕೊನೆಯ ವರೆಗೂ ಸೋಲೊಪ್ಪಬೇಡ!

ಕನ್ಹಯ್ಯಾಲಾಲ ಮಿಶ್ರ ಪ್ರಭಾಕರ

ಮೃತ್ಯುಂಜಯ ಇಲಿಗೆ ಜಯವಾಗಲಿ!

ಒಂದಿನ ಪತ್ರಿಕೆಯೊಂದರಲ್ಲಿ ಒಂದು ವಿಚಿತ್ರ ಸಮಾಚಾರ ಪ್ರಕಟವಾಗಿದೆ. ಜಾವರಾ ಎಂಬಲ್ಲಿ ಸ್ವಾಮಿ ಮಾಧವಾನಂದರ ಕುಟೀರದ ಎದುರುಗಡೆ ಒಂದು ಇಲಿ ಅತ್ತಿತ್ತ ಓಡಾಡುತ್ತಿದ್ದಾಗ ಒಂದು ಭಯಂಕರ ಕೃಷ್ಣಸರ್ಪವು ಪೊದೆಯಿಂದ ಹೊರಬಿದ್ದು ಆ ಇಲಿಯನ್ನು ರಸಗುಲ್ಲಾ ನುಂಗುವಂತೆ ನುಂಗಿಬಿಟ್ಟಿತು.

ಹೌದು. ರಸಗುಲ್ಲಾದಂತೆ ನುಂಗಿತು. ಮಾತ್ರ ಇಷ್ಟೇ ವ್ಯತ್ಯಾಸ. ರಸಗುಲ್ಲಾವನ್ನು ನಾಲಿಗೆಯಮೇಲಿಟ್ಟುಕೊಂಡು ಅಂಗಳಕ್ಕೆ ಒತ್ತಿದೊಡನೆ ಕರಗಿ ನೀರಾಗುತ್ತದೆ. ಆದರೆ ಎಲುವು ಚರ್ಮದ ಪ್ರಾಣಿಯಾದ ಇಲಿ ಹಾಗೆ ಹೇಗೆ ಕರಗೀತು? ಕೇವಲ ಫೂತ್ಕಾರದಿಂದ ನಾ-ನೀ ಎನ್ನುವ ವೀರರನ್ನು ಕೂಡ ನಡುಗಿಸುವ ಭಯಂಕರ ಸರ್ಪ ಅದು. ಆದರೆ ಅದರ ಬಾಯಲ್ಲಿ ಅಗಿರುವ ಹಲ್ಲುಗಳಿಲ್ಲ. ನಾಲಿಗೆಯೋ ರೇಶಿಮೆಯ ದಾರದಂತೆ ಮೃದು. ನುಂಗಿದ್ದು ಜಠರಾಗ್ನಿಯನ್ನು ತಲುಪಿದ ಬಳಿಕ ಭಕ್ಷ್ಯವನ್ನು ಬೇಯಿಸುವ, ಜೀರ್ಣಿಸುವ ಕೆಲಸ ಅದರದು.

ದೀರ್ಘಕಾಲದ ವಿರಹದ ನಂತರ ಭೆಟ್ಟಿಯಾದ ಮಿತ್ರನನ್ನು ಸಂತೋಷಾತಿರೇಕದಿಂದ ಬಿಗಿದಪ್ಪಿಕೊಳ್ಳುವಂತೆ ಸರ್ಪವು ಇಲಿಯನ್ನು ಬಾಯಿಯಲ್ಲಿ ಗಟ್ಟಿಯಾಗಿ ಹಿಡಿದುಕೊಂಡಿತು. ಉಸಿರು ಕಟ್ಟಿ ಸತ್ತ ಬಳಿಕ ಗಂಟಲೊಳಗೆ ಇಳಿಸೋಣ ಎಂದು ಅದು ಯೋಚಿಸಿರಬೇಕು. ಆದರೆ ಆ ಇಲಿ ಪ್ರಾಣಾಯಾಮವನ್ನು ಅಭ್ಯಾಸ ಮಾಡಿಕೊಂಡಂತಿತ್ತು. ಹಾವಿನ ಗಂಟಲಲ್ಲಿಳಿದೊಡನೆ ಅದು ಶ್ವಾಸೋಚ್ಛ್ವಾಸವನ್ನು ಪ್ರಾರಂಭಿಸಿತಲ್ಲದೆ ಉದ್ದನ್ನ ಕಂದರದಂತಿದ್ದ ಅದರ ಹೊಟ್ಟೆಯಲ್ಲಿ ಮುಂದೆ ಸಾಗಿತು.

ಈ ಕಂದರದೊಳಗೆ ಕುಳಿತುಕೊಂಡು ಅದು ಶಾಂತಚಿತ್ತದಿಂದ ಎರಡು ಮೂರು ಸಲ ಶ್ವಾಸವನ್ನೆಳೆದುಕೊಂಡು ತನ್ನ ಬಿಲದೊಡನೆ ಈ ಕಂದರವನ್ನು ಹೋಲಿಸಿಕೊಂಡು ನೋಡಿರಬೇಕು. ಕತ್ತಲೆ ಅಲ್ಲಿಯೂ ಇತ್ತು, ಇಲ್ಲಿಯೂ

ಇತ್ತು. ಅಲ್ಲಿ ಮನಬಂದಾಗ ಕತ್ತಲೆಯಿಂದ ಬೆಳಕಿಗೆ ಹೋಗಲು ಸಾಧ್ಯವಿತ್ತು. ಇಲ್ಲಿ ಇಲ್ಲ. ಯಾಕೆ?

ದೇಹ-ಮನಸ್ಸು ಎರಡೂ ದಣಿದವು. ಓ! ಇದು ಕಂದರವಲ್ಲ, ಸರ್ಪದ ಹೊಟ್ಟೆ. ಸರ್ಪದ ಆಕ್ರಮಣ, ಅದರ ಬಾಯಿಯ ಹಿಡಿತ, ಬಳಿಕ ಗಂಟಲೊಳಗೆ ಜಾರಿದ್ದು ಎಲ್ಲ ಅದರ ನೆನಪಿಗೆ ಬಂದಿರಬೇಕು. ಇನ್ನು ಮರಣವೇ ಗತಿ. ಉಳಿದುಕೊಳ್ಳುವ ಮಾರ್ಗವಿಲ್ಲ, ಇಲ್ಲಿಂದ ಹೊರಗೆ ಹೋಗಲು ಯಾವ ಮಾರ್ಗವೂ ಇಲ್ಲ. ಇಲಿಗೆ ತನ್ನ ಹೆಂಡತಿಯ ನೆನಪು ಬಂತು. ಪಾಪ! ಅದು ತನ್ನ ಹಾದಿ ಕಾಯುತ್ತ ಕುಳಿತಿರಬಹುದು.

ಹೆಂಡತಿಯ ನೆನಪಿನಿಂದ ಉತ್ಸಾಹ ಹೆಚ್ಚಿ ಉದ್ಯೋಗಶೀಲತೆ ತಲೆಯೆತ್ತಿರಬೇಕು. ಶಹರದಲ್ಲಿದ್ದಾಗ ಸಿಮೆಂಟಿನ ನೆಲವನ್ನು ಕೊರೆದು ಮನೆ ಮಾಡಿಕೊಂಡದ್ದೂ ಮುದಿ ಶೇಠಾಣಿ ಕಪಾಟಿನಲ್ಲಿ ತಿನ್ನುವ ವಸ್ತುಗಳನ್ನು ಇಟ್ಟಾಗ ಅದರ ಕಟ್ಟಿಗೆಯ ಬಾಗಿಲುಗಳನ್ನು ಹಲ್ಲಿನಿಂದ ಕಡಿದು ಒಳಗೆ ಹೋಗಲು ಬಾಗಿಲು ಮಾಡಿಕೊಂಡಿದ್ದೂ ಅದರ ನೆನಪಿಗೆ ಬಂತು. ಅಂದ ಮೇಲೆ ಸರ್ಪದ ಹೊಟ್ಟೆಯನ್ನು ಕಡಿದು ಕೊರೆದು ಹೊರಗೆ ?ಗಲು ಬರುವದಿಲ್ಲವೇ?

ಈ ಪ್ರಶ್ನೆಗೆ ಅದರ ಬುದ್ಧಿ ಇಲ್ಲವೆಂದು ಉತ್ತರ ಹೇಳಲಿಲ್ಲ. ಇಲಿ ಮೆತ್ತನ್ನ ಜಾಗವನ್ನಾರಿಸಿಕೊಂಡು ಮೊದಲನೆಯ ದಂತ ಪ್ರಹಾರ ಮಾಡಿತು. ಅದರ ಮನ ಹರ್ಷದಿಂದ ಹಿಗ್ಗಿತು. ಅದು ತನ್ನಷ್ಟಕ್ಕೇ "ಎಲಾ, ಇದು ಸಿಮೆಂಟೂ ಅಲ್ಲ, ಕಟ್ಟಿಗೆಯೂ ಅಲ್ಲ. ಬಲು ಮೃದುವಾಗಿಯೂ ರುಚಿಕಟ್ಟಾಗಿಯೂ ಇದೆ" ಎಂದು ಅಂದುಕೊಂಡಿತು. ಮತ್ತೆ ದಂತಪ್ರಹಾರ ಮಾಡತೊಡಗಿತು.

ಸರ್ಪಕ್ಕೆ ಪ್ರಾಣಸಂಕಟವಾಗತೊಡಗಿತ್ತು. "ದೇವಾ, ಇದೇನಾಯಿತು? ಇಂದೇ ಮೊದಲನೇ ಸಲವೇನೂ ಈ ತಿನಿಸನ್ನು ತಿನ್ನಲಿಲ್ಲ. ಅಂದ ಮೇಲೆ ಹೊಟ್ಟೆಯಲ್ಲಿ ಇದೇಕೆ ಶಲ್ಯ ಚುಚ್ಚಿದಂತೆ ಆಗುತ್ತಿದೆ!' ಸರ್ಪ ಫೂತ್ಕರಿಸಿತು, ಆದರೆ ಫೂತ್ಕಾರವೇನೂ ಹೊಟ್ಟೆಯೊಳಗೆ ಮುಟ್ಟುವದಿಲ್ಲವಲ್ಲ. ಸರ್ಪ ಹೆಡೆಯಗಲಿಸಿ ನೆಲಕ್ಕೆ ಬಡಿಯಿತು. ಬಾಲವನ್ನೆತ್ತಿ ಅಪ್ಪಳಿಸಿತು. ನೆಟ್ಟಗಾಯಿತು. ಸುರುಳಿಸುತ್ತಿತು. ಆದರೆ ಒಳಗೆ ಇಲಿ ಕಡಿಯುವದೇನೂ ನಿಲ್ಲಲಿಲ್ಲ. ತುಸು ಹೊತ್ತಿನಲ್ಲಿ ತಾನು ಮಾಡಿದ ಕಿಂಡಿಯಿಂದ ಇಲಿ ಹೊರಬಿದ್ದು ಬಂದದ್ದನ್ನು ಎಲ್ಲರೂ ನೋಡಿದರು. ಸರ್ಪ ಕೆಲಹೊತ್ತಿನ ವರೆಗೆ ಚಡಪಡಿಸಿ ಒಂದು ಗಿಡಗಂಟೆಯ ಮರೆಯನ್ನು ಸೇರಿತು. ಮುಂದೆ ತುಸು ಹೊತ್ತಿನಲ್ಲಿಯೇ ಅದರ ಪ್ರಾಣ ಹಾರಿ ಹೋಯಿತು. ಇರುವೆಗಳು ಅದನ್ನು ಮುತ್ತಿದವು.

"ಹಲೊ, ಮಾಲವೀಯಜಿ ಇದ್ದಾರೇನು?"

"ಇದ್ದಾರೆ. ಮಾತಾಡಿ ಅವರ ಹತ್ತರ."

ಪೂಜ್ಯ ಪಂಡಿತ ಮದನ ಮೋಹನ ಮಾಲವೀಯಜಿ ಹೊಸದಿಲ್ಲಿಗೆ ಬಂದಿದ್ದರು. ನಾನೂ ಯಾವದೊ ಕೆಲಸಕ್ಕಾಗಿ ದಿಲ್ಲಿಗೆ ಹೋಗಿದ್ದೆ. ಅವರ ದರ್ಶನ ಮಾಡೋಣ ಎನಿಸಿತು. ಅವರ ಧ್ವನಿ ಕಿವಿಗೆ ಬಿತ್ತು. ಅವರ ವಾಣಿಯಲ್ಲಿ ಏನೋ ಅದ್ಭುತವಿತ್ತು. ನನಗಂತೂ ಅದು ಪಂಚಾಮೃತದಂತೆ ಮಧುರವೆನಿಸಿತು. "ದೂರದಿಂದಲೇ ಏನು ಮಾತಾಡುತ್ತಿದ್ದೀರಿ? ಇಲ್ಲಿಗೆ ಬನ್ನಿರಲ್ಲ. ಬರುತ್ತೀರಿ ತಾನೇ?" ಅವರು ಕೇಳಿದರು.

ಮಾಲವೀಯಜಿ ಘನವಂತರು. ಯಾರಿಗೂ ಇಲ್ಲವೆನ್ನುವದು ಅವರಿಂದಾಗುತ್ತಿರಲಿಲ್ಲವೆಂಬುದೊಂದೇ ಅವರಲ್ಲಿದ್ದ ದೋಷವಾಗಿತ್ತು. ನಾನು ಹೋದೊಡನೆ ನನ್ನನ್ನು ಕಂಡು ಹಿಗ್ಗಿದರು. ಎಷ್ಟೋ ಹೊತ್ತು ಏನೇನೋ ಮಾತಾಡಿದೆವು. ಹಠಾತ್ತಾಗಿ ಅವರು ಗಡಿಯಾರ ನೋಡಿಕೊಂಡು ಗಡಬಡಿಸಿ ಎದ್ದು, "ನಾನು ಇದೇ ಗಾಡಿಗೆ ಮಥುರೆಗೆ ಹೋಗಬೇಕಾಗಿದೆ' ಎಂದರು

ಲಗುಬಗೆಯಿಂದ ಅಂಗಿ ಹಾಕಿಕೊಳ್ಳುತ್ತ ತಮ್ಮ ಸೇವಕನಿಗೆ "ಸಾಮಾನನ್ನು ಮೋಟಾರಿನಲ್ಲಿಡು" ಎಂದರು. ಸೇವಕ ತನ್ನ ಗಡಿಯಾರ ನೋಡಿಕೊಂಡು "ಮಹಾರಾಜ, ಇನ್ನು ಗಾಡಿ ಸಿಗುವದಿಲ್ಲ, ಅದು ದಿಲ್ಲಿ ಸ್ಟೇಶನ್ನನ್ನು ಬಿಟ್ಟೀ

ಬಹಳ ಹೊತ್ತಾಯಿತು '' ಎಂದ.

ಆದರೆ ಗಡಬಿಡಿಯಿಲ್ಲ, ನಿರಾಶೆಯಿಲ್ಲ. ಮೊದಲಿನದೇ ಶಾಂತ ಮುಖ. "ಸಾಮಾನು ಇಡಪ್ಪಾ" ಎಂದು ಹೋಗಿ ಮೋಟಾರಿನಲ್ಲಿ ಕುಳಿತರು. ನಾನು ಜೊತೆಗೆ ಹೋದೆ. ಇತ್ತ ಮಾಲವೀಯಜಿ ಸ್ಟೇಶನ್ನಿಗೆ ಬಂದರು, ಅತ್ತ ಅವರು ಹೋಗಬೇಕಾಗಿದ್ದ ಗಾಡಿ ಸ್ಟೇಶನ್ನಿಗೆ ಬಂತು. ಅವರೆಷ್ಟು ತಡವಾಗಿ ಬಂದಿದ್ದರೋ ಗಾಡಿ ಕೂಡ ಅಷ್ಟೇ ತಡವಾಗಿ ಬಂದಿತ್ತು. ಅವರು ಮೊದಲನೆ ವರ್ಗದ ಡಬ್ಬಿಯಲ್ಲಿ ಕುಳಿತರು. ನಾನು ಕಿಡಕಿಯ ಹೊರಗೆ ನಿಂತೆ. ಅವರು ಹೇಳಿದರು: "ಒಂದು ಸೂತ್ರವನ್ನು ಬರೆದುಕೊ."

ನಾನು ಪುಸ್ತಕ ತೆಗೆದೆ. '' ಎಲ್ಲಿಯ ವರೆಗೆ ಸೋಲು ಎದೆಯ ಮೇಲೆ ಕೂಡ್ರುವದಿಲ್ಲವೋ ಅಲ್ಲಿಯ ವರೆಗೆ ಅದನ್ನೊಪ್ಪಬೇಡ, ಎದೆಗುಂದಬೇಡ. ''

"ಮತ್ತು ಯಶಸ್ಸಾಧನೆಗಾಗಿ ಸದಾ ಉದ್ಯೋಗ ಮಾಡುತ್ತಿರು'' ಎಂದು ನನ್ನ ಬಾಯಿಂದ ಸಹಜವಾಗಿ ಹೊರಬಿತ್ತು. ಅದನ್ನು ಕೇಳಿ ಅವರು ತುಂಬ ಸಂತೋಷಗೊಂಡು, '' ಸರಿ, ನೀವು ಸರಿಯಾಗಿ ತಿಳಿದುಕೊಂಡಿರಿ '' ಎಂದರು. ನನಗೆ ಎಷ್ಟು ತಿಳಿಯಿತೋ ಅಷ್ಟು ತಿಳಿದುಕೊಂಡೆ. ಆದರೆ ಈ ಇಲಿ ಮಾತ್ರ ಮಾಲವೀಯಜಿಯವರ ಮಾತನ್ನು ಸಂಪೂರ್ಣವಾಗಿ ಅರಿತುಕೊಂಡಿತ್ತು. ಬರೇ ಅರಿತುಕೊಂಡಿತೆಂದರೇನು, ಅದನ್ನು ಕೃತಿಯಲ್ಲಿಳಿಸಿ ತೋರಿಸಿತು. ಸರ್ಪವನ್ನು ನೋಡಿದೊಡನೆ ಮಾನವನು ಮೃತ್ಯುವಿನ ಮುತ್ತಿಗೆಯನ್ನು ಕಾಣುತ್ತಾನೆ. ಆದರೆ ಈ ಅಲ್ಪ ಇಲಿ ಸರ್ಪವನ್ನು ನೋಡಲೇ ಇಲ್ಲ. ಸರ್ಪ ಅದನ್ನು ನುಂಗಿತು. ಈ ಇಲಿ ಅದರ ಹೊಟ್ಟೆಯೊಳಗೆ ಹೋದ ಬಳಿಕ ಮೃತ್ಯುವಿನ ಮುತ್ತಿಗೆಯನ್ನು ಕಾಣುವ ಬದಲು ಜೀವನದ ಬಯಲನ್ನು ಕಂಡಿತು.

ಒಮ್ಮೆ ವಿದ್ಯಾರ್ಥಿಗಳ ವಿಚಾರ ಗೋಷ್ಠಿಯಲ್ಲಿ ಮಾತಾಡುತ್ತಿದ್ದಾಗ ಅವರು, '' ಯಶಸ್ಸಿನ ಹಾದಿ ಯಾವದು ? '' ಎಂದು ನನಗೆ ಕೇಳಿದರು.

''ಸ್ವಪ್ನ, ಸಂಕಲ್ಪ, ಶ್ರಮ, ಸಿದ್ಧಿ'' ಎಂದು ಉತ್ತರವಿತ್ತೆ.

ಅವುಗಳ ವ್ಯಾಖ್ಯೆಯನ್ನು ಮಾಡುತ್ತ ಹೇಳಿದೆ: ಸ್ವಪ್ನವನ್ನು ಕಾಣಿರಿ, ಕಲ್ಪನೆಯನ್ನು ಮಾಡಿರಿ; ಇದರಿಂದ ನಿಮ್ಮ ಬಯಕೆಗೆ ಒಂದು ನಿಶ್ಚಿತ ರೂಪಪ್ರಾಪ್ತವಾಗುವದು. ಆಗ ಸಂಕಲ್ಪಮಾಡಿರಿ. ನನ್ನ ಸ್ವಪ್ನಕ್ಕೆ ಸಾಕಾರ ರೂಪವನ್ನು ಕೊಡುವೆನು, ಇಚ್ಛಿತವನ್ನು ಪೂರೈಸಿಕೊಳ್ಳುವೆನು, ಸಿದ್ಧಿಯಾದ ಬಳಿಕವೇ ವಿಶ್ರಮಿಸುವೆನು ಎಂದು ನಿರ್ಧರಿಸಿರಿ. ಈ ಬಗೆಯ ಸಂಕಲ್ಪದಿಂದ ನಿಮ್ಮ ಜೀವನ ಸಫಲವಾಗುವದು. ನಿಮ್ಮ ಸಂಕಲ್ಪವನ್ನು ಈಡೇರಿಸುವ ಬಲ ನಿಮ್ಮಲ್ಲಿದೆಯೆಂಬ ಅನುಭವ ನಿಮಗಾಗುವದು. ಇಷ್ಟೇ ಅಲ್ಲ, ನಿಮ್ಮ ಸ್ವಪ್ನವು ಆಕಾಶದ ನಕ್ಷತ್ರವಲ್ಲ, ಈ ಪೃಥ್ವಿಯ ಮೇಲಿನ ಫಲವೇ ಎಂದು ಮನವರಿಕೆಯಾಗಿ ಅದರ ದುರ್ಲಭತೆ ಮತ್ತು ನಿರಾಶಾಭಾವ ನಷ್ಟವಾಗುವದು. ಆಗ ನಾನು ಈ ಸ್ವಪ್ನವನ್ನು ಸಾಕ್ಷಾತ್ಕರಿಸಿಕೊಳ್ಳಬಹುದು ಎಂದು ನಿಮಗನಿಸುತ್ತದೆ.

" ಆಗ ಶ್ರಮಪಡಿರಿ. ಮನಸ್ಸಿನಿಂದ ದುಡಿಯಿರಿ. ಆದರೆ ದುಡಿತದ ಪ್ರಾಣ ಯೋಜನೆ ಎಂಬುದನ್ನು ಮರೆಯಬೇಡಿರಿ. ಆಚಾರ್ಯ ವಿನೋಬಾರವರು ಬುದ್ಧಿಯಿಲ್ಲದ ಕೆಲಸ ಮತ್ತು ಕೆಲಸವಿಲ್ಲದ ಬುದ್ದಿ ಎರಡರಿಂದಲೂ ಉಳಿದುಕೊಳ್ಳಿರಿ ಎಂಧಿದ್ದಾರೆ. ಬುದ್ಧಿಯಿಲ್ಲದ ಕೆಲಸವೆಂದರೆ ಯೋಜನಾಹೀನ ಶ್ರಮವೇ ಆಗಿದೆ. ಕೆಲಸವಿಲ್ಲದ ಬುದ್ಧಿ ಎಂದರೆ ಬರೆ ಯೋಜನೆಯೇ ಯೋಜನೆ. ಇವೆರಡರಿಂದಲೂ ದೂರವಾಗಿ ಯೋಜನಾ ಪೂರ್ವಕವಾಗಿ, ವಿಚಾರಮಾಡಿ ದುಡಿಯಿರಿ. ಯಶಸ್ಸು ನಿಮ್ಮ ಬಾಗಿಲಿಗೆ ಬಂದು ನಿಲ್ಲುವದು. "

ಶ್ರಮ ಮತ್ತು ಸಿದ್ಧಿಗಳ ನಡುವಿನ ಹಾದಿಯೇನೂ ಸುಗಮವಲ್ಲ, ಅದರಲ್ಲಿ ಅಡ್ಡಿ ಆತಂಕಗಳಿವೆ, ಸಂಕಟವಿದೆ, ಗಂಡಾಂತರವಿದೆ. ಇವುಗಳಿಂದ ಪಾರಾಗಲು ಬುದಿಯ ಅವಶ್ಯಕತೆ ಇದೆ.

ಅಮೇರಿಕೆಯ ಅಧ್ಯಕ್ಷ ಜಾರ್ಜ ವಾಶಿಂಗ್ಟನ್ನನು ಯುವಕರಿಗೆ "ಯಾವ ಕಾರ್ಯದಲ್ಲಿ ಅಡ್ಡಿ-ಆತಂಕ ಗಳು, ಕಷ್ಟ-ಸಂಕಟಗಳು ಇಲ್ಲವೋ ಅಂಥ ಕಾರ್ಯಗಳು ಮನುಷ್ಯರು ಮಾಡಲು ಯೋಗ್ಯವಾ ದವುಗಳಲ್ಲ" ಎಂದು ಹೇಳಿದ್ದರು. ಅದೇಕೆ ಎಂದು ಕೇಳಿದಾಗ ಅವರು, "ಕೆಲಸ ಮಾಡು ತ್ತಲೇ ಇರುವದರಲ್ಲಿ ಮನುಷ್ಯನ ಮಹತ್ವವಿಲ್ಲ. ಆತ ಮಾಡುವ ವಿಶಿಷ್ಟ ಕಾರ್ಯದಲ್ಲೇ ಮಹತ್ವ ವಿದೆ. ಮತ್ತು ಕಾರ್ಯಕ್ಕೆ ವೈಶಿಷ್ಟ್ಯವನ್ನು ಕೊಡು ವದು ಅದರ ಮಾರ್ಗದಲ್ಲಿರುವ ಸಂಕಟ, ಆತಂಕ ಇತ್ಯಾದಿಗಳು. ಯಾವ ಕಾರ್ಯದಲ್ಲಿ ಇವಿ ಲ್ಲವೋ ಅದು ಸರ್ವ ಸಾಧಾರಣ ಮನುಷ್ಯನ ಕಾರ್ಯವಾಯಿತು," ಎಂದರು.

ನಾವು ಸಂಕಟದಲ್ಲಿ ಸಿಲುಕಿದಾಗ ಸಂಕಟ ಪೂರ್ಣ ಜೀವನ ಮತ್ತು ಶಾಂತಿ ಪೂರ್ಣ ಜೀವ ನಗಳಲ್ಲಿ ಆಯ್ಕೆ ಮಾಡಿಕೊಳ್ಳುವ ಪ್ರಸಂಗವಿರು ವದಿಲ್ಲ. ಸಂಕಟಕ್ಕೆ ತಲೆಬಾಗಿ ಸೋತು ನಷ್ಟ ವಾಗಬೇಕೇ ಅಥವಾ ಅದನ್ನು ನಿವಾರಿಸಲು ಲಭ್ಯ ವಿರುವ ಕ್ಷೀರ ಕ್ಷುಲ್ಲಕ ಉಪಾಯಗಳನ್ನೂ ಪರೀ- ಕ್ಷಿಸಿ ನೋಡಬೇಕೇ ಎಂಬ ಪ್ರಸಂಗವಿರುತ್ತದೆ.

ಸಂಕಟದಿಂದ ಪಾರಾಗಲು ಇರುವ ಮಾರ್ಗ ಎಂದೂ ಕ್ಷುಲ್ಲಕವಾಗಿರುವದಿಲ್ಲ. ಇದು ಜೀವನದ ದೊಡ್ಡ ರಹಸ್ಯವಾಗಿದೆ. ನಮ್ಮ ಮನೋದೌರ್ಬ ಲ್ಯದ ಮೂಲಕ ನಾವದನ್ನು ಕ್ಷುಲ್ಲಕ ಎಂದು ತಿಳಿಯುತ್ತೇವೆ. ಈ ಮಾರ್ಗ ದುರ್ಬಲವಾಗಿರದೆ ಸೂಕ್ಷ್ಮವಾಗಿರುತ್ತದೆ. ನಮ್ಮ ಮನಸ್ಸಿನ ಕಣ್ಣು ಗಳ ದೃಷ್ಟಿಮಾಂದ್ಯದಿಂದ ನಾವದನ್ನು ಸರಿಯಾಗಿ ತಿಳಿದುಕೊಳ್ಳಲಾರದವರಾಗುತ್ತೇವೆ. ಇದಕ್ಕೆ ಉಪಾಯವೆಂದರೆ ಕನ್ನಡಕ. ಹೊರಗಿನ ಕಣ್ಣು ಗಳಿಗೆ ಗ್ಲಾಸಿನ ಕನ್ನಡಕವಾದರೆ ಒಳಗಿನ ಕಣ್ಣು ಗಳಿಗೆ ಸಾಹಸೀ ಜನರ ಅನುಭವದ ಕನ್ನಡಕ. ಈ ಕನ್ನಡಕವೇ ಸರ್ಪದ ಹೊಟ್ಟೆಯಿಂದ ಜೀವಂತ ಪಾರಾಗಿ ಬರಲು ಇಲಿಗೆ ಸಹಾಯ ಮಾಡಿತು. ಇಲಿ ಹೊರಗೆ ಬರಲು ಇದ್ದ ಮಾರ್ಗ ಎಷ್ಟು ಸೂಕ್ಷ್ಮವಾಗಿತ್ತು ! ಆದರೆ ಅದೇ ಎಷ್ಟು ಫಲಕಾರಿಯಾಯಿತು !

೧೯೪೪ ರಲ್ಲಿ ಗಾಂಧೀಜಿಯವರು ಸೇವಾಗ್ರಾಮ ದಿಂದ ಬಂದು ಕೆಲ ಕಾಲ ವರ್ಧಾದಲ್ಲಿದ್ದರು. ಅವರಿಗೆ ಯಾವ ಸಾಮಾನು ಇಲ್ಲದಿದ್ದರೂ ನಡೆ ಯುತ್ತಿತ್ತು, ಪ್ರಾರ್ಥನೆಯಿಲ್ಲದೆ ನಡೆಯುತ್ತಿರ ಲಿಲ್ಲ. ಮುಂಜಾನೆಯ ಪ್ರಾರ್ಥನೆಯ ಸಮಯ ಬೆಳಗಿನ ನಾಲ್ಕೂವರೆ ಗಂಟೆ. ಎಲ್ಲ ಜನರು ಪ್ರಾರ್ಥನಾ ಸ್ಥಳದಲ್ಲಿ ಬಂದು ಕುಳಿತಿದ್ದರು. ವಲ್ಲಭ ಸ್ವಾಮಿಯವರು ಇನ್ನೂ ಬಂದಿರಲಿಲ್ಲ. ಅವರು ಐದಾರು ಮೈಲು ದೂರದಿಂದ ಬರಬೇಕಾ ಗಿತ್ತು. ಅವರೇ ಗೀತೆಯನ್ನು ಓದತಕ್ಕವರಿದ್ದರು. ಗಾಂಧೀಜಿಯವರು ಸಮಯಕ್ಕೆ ಸರಿಯಾಗಿ ಬಂದು ತಮ್ಮ ಸ್ಥಳದಲ್ಲಿ ಕುಳಿತುಕೊಂಡರು. ಆಗ ಎಲ್ಲರಲ್ಲಿಯೂ ಸಂದೇಹವುಂಟಾಗಿ ವಲ್ಲಭ ಸ್ವಾಮಿಯವರು ಬರಲಿಕ್ಕಿಲ್ಲ ಎಂದು ಭಾವನೆಯಾ ಯಿತು.

ಯಾರೋ ಒಬ್ಬರ ಮುಖದಿಂದ ಈ ಅವಿಶ್ವಾಸ ಪ್ರಕಟವಾಯಿತು. "ಇನ್ನೇನು ಅವರು ಬರು ತ್ತಾರೆ? ನಾವು ಪ್ರಾರ್ಥನೆಯನ್ನು ಶುರು ಮಾಡೋಣ."

"ಅವರೇಕೆ ಬರುವದಿಲ್ಲ?" ಎಂಬ ಪ್ರಶ್ನೆ ಮತ್ತು "ಏನು ಬರುತ್ತಾರೆ? ಇನ್ನು ಎರಡು ಮೂರು ಮಿನಿಟುಗಳು ಮಾತ್ರ ಉಳಿದಿವೆ": ಎಂಬೀ ಮಾತುಗಳ ನಡುವೆ ಗಾಂಧೀಜಿಯವರ ವಿಶ್ವಾಸದ ವಾಣಿ ಕೇಳಿಸಿತು. "ಇನ್ನೂ ಎರಡು ಮಿನಿಟುಗಳಿವೆ. ಬರದೆ ಏನು?"

ಭಾಷೆಯ ಸಂಕೇತ ಎಷ್ಟು ಮಧುರವಾಗಿದೆ!

ಅವಿಶ್ವಾಸದ ಭಾಷೆ "ಎರಡು ಮೂರು ಮಿನಿ ಟುಗಳು ಮಾತ್ರ ಇವೆ" ಎಂದಾದರೆ ವಿಶ್ವಾಸದ ಭಾಷೆ "ಇನ್ನೂ ಎರಡು ಮೂರು ಮಿನಿಟುಗಳಿವೆ ಯಲ್ಲ" ಎಂದು. ಇನ್ನು ಕೇವಲ ಅರ್ಧ ಮಿನಿ ಟಿರುವಾಗ ವಲ್ಲಭ ಸ್ವಾಮಿಯವರು ಬಂದರು. ಗಾಂಧೀಜಿಯವರು ಎಲ್ಲರನ್ನೂ ದೃಷ್ಟಿಸಿ ನೋಡಿ ದರು : "ನೀವೆಲ್ಲ ಇಷ್ಟು ಬೇಗ ವಿಶ್ವಾಸವನ್ನು ಹೇಗೆ ಕಳೆದುಕೊಳ್ಳುತ್ತೀರಿ? ಸೋಲನ್ನು ಇಷ್ಟು ಬೇಗ ಏಕೆ ಒಪ್ಪಿಕೊಳ್ಳುತ್ತೀರಿ?"

ನಿಜವಾಗಿಯೂ ಜೀವನದಲ್ಲಿ ಸೋಲಿನ ಸಂಭ

ವಕ್ಕಿಂತಲೂ ವಿಜಯದ ಸಂಭವವು ಹೆಚ್ಚು ಸತ್ಯವೂ ವಾಸ್ತವಿಕವೂ ಆಗಿದೆ.

ಪ್ರಭಾವೀ ಹಿಂದೀ ಲೇಖಕರೂ ಭಾರತದ ಸ್ವಾತಂತ್ರ್ಯ ಪ್ರಾಪ್ತಿಗಾಗಿ ಹಿಂಸಾತ್ಮಕ ಪಥವನ್ನು ಹಿಡಿದ ಕ್ರಾಂತಿಕಾರರೂ ಆದ ಯಶಪಾಲರ ಜೀವನದಲ್ಲಿ ಹೇಳತಕ್ಕಂಥ ಒಂದು ಕಥೆ ಇದೆ.

೧೯೨೬, ಡಿಸೆಂಬರ ೨೩. ವೈಸರಾಯ ಲಾರ್ಡ ಆಯರ್ವಿನ್ ಕೊಲ್ಲಾಪುರದಿಂದ ದಿಲ್ಲಿಗೆ ಹೊರಟಿದ್ದರು. ಅಂದೇ ಅವರು ಮತ್ತು ಗಾಂಧೀಜಿಯವರ ಭೆಟ್ಟಿಯಾಗತಕ್ಕದ್ದಿತ್ತು. ಕ್ರಾಂತಿಕಾರಿಗಳು ಆಯರ್ವಿನ್ನರು ಪ್ರಯಾಣ ಮಾಡುತ್ತಿದ್ದ ರೇಲ್ವೆಗಾಡಿಯನ್ನು ಬಾಂಬಿನಿಂದ ಧ್ವಂಸಗೊಳಿಸಿ ವೈಸರಾಯರ ಅವತಾರ ಮುಗಿಸಬೇಕು ಎಂದು ನಿಶ್ಚಯಿಸಿದರು. ರೇಲ್ವೆ ಲಾಯಿನಿನ ನಡುವೆ ಡೈನ್‌ಮೈಟ್ ಇಟ್ಟು ನೆಲದಡಿಯಿಂದ ದೂರದವರೆಗೆ ತಂತಿಯನ್ನೊಯ್ದು ಬ್ಯಾಟರಿಗೆ ಜೋಡಿಸಲಾಯಿತು. ಗಾಡಿಬಂದೊಡನೆ ಡೈನಮೈಟ್ ಹಾರಿಸುವ ಕೆಲಸ ಯಶಪಾಲರಿಗೊಪ್ಪಿಸಲ್ಪಟ್ಟಿತು.

ಗಾಡಿ ಸರಿಯಾದ ಸಮಯಕ್ಕೆ ಬಂದಿತು. ಇಗ್ನೈಟ್ ಮಾಡಲಾಯಿತು. ಎಂಜಿನ್ನಿನ ಅಡಿಗೆ ಬಾಂಬಿನ ಸ್ಫೋಟವಾಯಿತು. ಆದರೆ ಬಾಂಬು ಸಾಕಷ್ಟು ಶಕ್ತಿಶಾಲಿಯಾಗಿರಲಿಲ್ಲ. ಗಾಡಿಗೆ ಏನೂ ಧಕ್ಕೆಯಾಗದೆ ಅದು ಮುಂದೆ ಹೋಗಿಬಿಟ್ಟಿತು. ಯಶಪಾಲರು ತಮ್ಮ ಮೋಟರ ಸಾಯಕಲ್ಲನ್ನೇರಿ ಹೋಗಬೇಕೆಂದಾಗ ಥಂಡಿಯ ಮೂಲಕ ಎಂಜಿನ್ ಸುರುವಾಗಲೇ ಇಲ್ಲ. ಅಷ್ಟರಲ್ಲಿ ಒಂದು ಸೇನೆಯ ತುಕಡಿ ಅಲ್ಲಿಗೆ ಬಂತು.

ಸೇನೆಯ ತುಕಡಿ ಎಂದರೆ ಯಶಪಾಲರ ಪಾಲಿಗೆ ಯಮದೂತನೇ ಸರಿ. ಯಶಪಾಲರು ಎದ್ದು ನಿಂತು ತಮ್ಮ ಕಿಸೆಯಲ್ಲಿದ್ದ ಪಿಸ್ತೂಲಿನ ಮೇಲೆ ಕೈಯಿಟ್ಟರು. ಸಾಯುವದೇ ಆದರೆ ಅವರಲ್ಲಿ ಮೂರು ನಾಲ್ಕು ಜನರನ್ನು ಕೊಂದಾದರೂ ಸಾಯೋಣವೆಂದುಕೊಂಡರು. ಸೈನ್ಯ ತುಕಡಿ ಅವರ ಎದುರು ಬಂತು. "ಫಾಯರ್" ಎಂಬ ಅಪ್ಪಣೆ ಕಿವಿಗೆ ಬೀಳುವದನ್ನುಎದುರುನೋಡುತ್ತ ಯಶಪಾಲರು ನಿಂತರು. ಆದರೆ ಅವರು ಕೇಳಿದ್ದೇನು? ಬ್ರಿಟಿಶ ಸೈನ್ಯದ ಆಫೀಸರನು ಯಶಪಾಲರಿಗೆ ಸಲಾಮು ಸಲ್ಲಿಸಲು ತನ್ನ ಸೈನಿಕರಿಗೆ ಅಪ್ಪಣೆ ಮಾಡುತ್ತಿದ್ದಾನೆ. ಯಶಪಾಲರು ಆಶ್ಚರ್ಯ ಚಕಿತರಾಗಿ ಹೋದರು. ಆಗ ಯಶಪಾಲರು ಸೈನಿಕ ಸಮವಸ್ತ್ರವನ್ನು ತೊಟ್ಟಿದ್ದರು. ಅವರ ಭುಜದ ಮೇಲೆ ಮೇಜರರ ಚಿಹ್ನ ಹಚ್ಚಲಾಗಿತ್ತು. ಮೇಜರ ಸಾಹೇಬರು ಮೋಟರ ಸ್ಯಾಕಲ್ಲಮೇಲೆ ತಮಗಿಂತಲೂ ಮೊದಲೇ ಇಲ್ಲಿಗೆ ಬಂದು ತಲುಪಿದ್ದಾರೆಂದು ಭಾವಿಸಿ ಇಂಗ್ಲೀಷ ಆಫೀಸರನು ಅವರಿಗೆ ಸಲಾಮು ಸಲ್ಲಿಸಿದ. ದೂರದಿಂದ ಅವನಿಗೆ ಮೇಜರರ ಬಿಲ್ಲೆಯ ಮೇಲೆ ಇಂಗ್ಲೀಷ ಸೇನೆಯ ಹೆಸರಿನ ಬದಲು ಕ್ರಾಂತಿಕಾರ ದಲದ ಹೆಸರಿರುವದು ಕಾಣಿಸಲಿಲ್ಲ.

ಯಶಪಾಲರು ಮಿಲಿಟರಿ ಪದ್ಧತಿಯಲ್ಲಿ ಪ್ರತಿವಂದನೆ ಸಲ್ಲಿಸಿದರು. ಸೈನ್ಯ ತುಕಡಿ ಮುಂದೆ ಸಾಗಿತು. ಮರಣ ಎದುರು ಬಂದಿದ್ದು ಖಂಡಿತವಾಗಿತ್ತು. ಬದುಕಿನ ಎಳೆ ಹರಿದಿತ್ತು. ಆದರೆ ನಡೆದದ್ದರ ಮೇಲಿಂದ ಜೀವನದಲ್ಲಿ ಅಪಯಶಸ್ಸಿಗಿಂತ ಯಶಸ್ಸಿನ ಸಂಭವವೇ ಹೆಚ್ಚು ಎಂದು ಕಾಣಿಸುವದಿಲ್ಲವೆ? ಸಂಕಟ ಬಂದೊಡನೆ ಕೈ ಚಲ್ಲಿ ನಿರಾಶರಾಗಿ ಸೋಲನ್ನೊಪ್ಪಿಕೊಂಡು ಹೊಸ ಪ್ರಯತ್ನ ಮಾಡದಿರುವದು ನಮ್ಮ ದೌರ್ಬಲ್ಯವೇ ಸರಿ ಎಂದು ಕಾಣುವದಿಲ್ಲವೆ?



ಮುಳುಗುವವರಲ್ಲಿ ಸಹಾನುಭೂತಿ ತೋರಿಸುವುದೆಂದರೆ ಅವರೊಡನೆ ಮುಳುಗಿ ಸಾಯುವುದಲ್ಲ, ಈಸಿ ಅವರನ್ನು ಉಳಿಸಲು ಯತ್ನಿಸುವುದು.

— ವಿನೋಬಾ

ಪೃಥಿವಿಯ ಅಜರಾಮರ ಪದಾರ್ಥದ ಪರಿಚಯ

# ಬೂದಿಯ ಮಹಿಮೆ

ಪ. ಮ. ಕರ್ವೆ

ಬೂದಿ! ಹ್ಞಂ! ಚಲ್ಲದನ್ನು ಕಸದ ಗುಂಡಿಯಲ್ಲಿ ಅನ್ನುತ್ತೇವೆ. ಬೂದಿ ನಿರುಪಯುಕ್ತ ವಸ್ತು ಎಂದೇ ನಮ್ಮೆಲ್ಲರ ಭಾವನೆ. ಬಹಳವೆಂದರೆ ಪಾತ್ರೆ ತಿಕ್ಕಲು ನಾವದನ್ನು ಉಪಯೋಗಿಸುತ್ತೇವೆ, ಅಷ್ಟೇ. ಪಾತ್ರೆ ತಿಕ್ಕಲು ಬೇಕಾಗುವ ಬೂದಿಯಾದರೂ ಎಷ್ಟು? ಅದರ ನೂರಾರು ಪಟ್ಟು ಬೂದಿಯನ್ನು ನಾವು ಕಸದ ಗುಂಡಿಗೆ ಎಸೆದುಬಿಡುತ್ತೇವೆ.

ಆದರೆ ಶಾಸ್ತ್ರೀಯ ದೃಷ್ಟಿಯಿಂದ ವಿಚಾರಿಸಿದಾಗ ಬೂದಿಯಲ್ಲಿಯ ಘಟಕಗಳು ಎಷ್ಟು ಬೆಲೆಯುಳ್ಳವು, ವ್ಯವಹಾರದಲ್ಲಿ ಬೂದಿಯಿಂದ ಎಂಥೆಂಥ ಪ್ರಯೋಜನಗಳಾಗಬಹುದು ಎಂದು ತಿಳಿದು ನಾವು ಬೆರಗಾಗಬಹುದು.

ಅಗ್ನಿಯ ಶಕ್ತಿ ಅಪಾರವಾದದ್ದು. ಅಗ್ನಿಗೆ ಚೇತನ-ಅಚೇತನ, ಒಳಿತು-ಕೆಡಕು, ಶ್ರೇಷ್ಠ-ಕನಿಷ್ಠ ಮುಂತಾದ ಯಾವ ಭೇದಭಾವವೂ ಇಲ್ಲ. ತನ್ನ ಅಳವಿಗೆ ಸಿಕ್ಕ ಸಮಸ್ತವನ್ನೂ ಭಸ್ಮೀಭೂತವನ್ನಾಗಿ ಮಾಡಿದ ಬಳಿಕವೇ ಅಗ್ನಿ ಶಾಂತವಾಗುವದು. ಆದರೆ ಇಂಥ ಪ್ರಚಂಡ ಶಕ್ತಿಯ ಅಗ್ನಿಗೂ ಸೊಪ್ಪು ಹಾಕದ ವಸ್ತುವೊಂದಿದೆ. ಅದೆಂದರೆ ಬೂದಿ. ಸಕಲವನ್ನು ಭಕ್ಷಿಸಿ ನಾಶ ಮಾಡುವ ಬೆಂಕಿ ಬೂದಿಯ ಎದುರಿನಲ್ಲಿ ಮಾತ್ರ ತಾನೇ ನಾಶ ಹೊಂದುತ್ತದೆ. ಬೂದಿ ಸುಡುವದಿಲ್ಲ, ಕೊಳೆಯುವದಿಲ್ಲ, ಕೆಡುವದಿಲ್ಲ; ಅಗ್ನಿದಿವ್ಯದಿಂದ ಪಾರಾದ ಅತ್ಯಂತ ಶುದ್ಧ ವಸ್ತು ಅದು. ಶ್ರೀಮಂತನಿರಲಿ, ಬಡವನಿರಲಿ, ಅರಮನೆಯಿರಲಿ, ಗುಡಿಸಲಿರಲಿ, ಚಂದನವಿರಲಿ ಅಥವಾ ಸಾದಾ ಕಟ್ಟಿಗೆಯಿರಲಿ, ಒಮ್ಮೆ ಸುಟ್ಟು ಬೂದಿಯಾಯಿತೆಂದರೆ ಅವುಗಳಲ್ಲಿ ಹೆಚ್ಚಿನ ಭೇದವುಳಿಯುವದಿಲ್ಲ. ಬೂದಿಯಲ್ಲಿ ಮೇಲು-ಕೀಳುಗಳೆರಡೂ ಒಂದೇ ಪಾತಳಿಗೆ ಬರುವವು.

ಸರ್ವಸಂಗ ಪರಿತ್ಯಾಗ ಮಾಡಿದ, ನಶ್ವರ ಜಗತ್ತಿನಲ್ಲಿ ಜುಗುಪ್ಸೆ ಹೊಂದಿದ ಸಾಧುಗಳು ತಮ್ಮ ಧ್ಯೇಯ ಪ್ರತೀಕವೆಂದು ಶಾಶ್ವತ ದ್ರವ್ಯವಾದ ಬೂದಿ ಅಥವಾ ಭಸ್ಮವನ್ನು ಧರಿಸುತ್ತಾರೆ.

ಆದರೆ ಸಂಸಾರಿಗಳು ಮಾತ್ರ ಬೂದಿಯನ್ನು ಬೇರೆ ದೃಷ್ಟಿಯಿಂದ ನೋಡುತ್ತಾರೆ. ಬೂದಿಯೆಂದರೆ ಜೀವನ, ಚೈತನ್ಯ, ವ್ಯಕ್ತಿತ್ವ ಮೊದಲಾದವೆಲ್ಲ ಹೋಗಿ ಉಳಿಯುವ ನಿರ್ಜೀವ, ನಿಃಸತ್ವವಾದ ತ್ಯಾಜ್ಯವಸ್ತು ಎಂದೇ ಅವರ ತಿಳಿವಳಿಕೆ. ಅದನ್ನು ಕಸದ ಗುಂಡಿಗೆ ಒಗೆಯದೇ ಮತ್ತೇನು ಮಾಡಬೇಕು?

ಬೂದಿಯ ಜನ್ಮಕಥೆ ಉದ್ಬೋಧಕವಾದದ್ದು. ಯಾವದೊಂದು ವಸ್ತು ಸುಟ್ಟು ಬೂದಿಯಾಗುತ್ತದೆ ಎಂದರೆ ಆಗುವದಾದರೂ ಏನು? ಒಂದು ವನಸ್ಪತಿ ಅಥವಾ ಗಿಡದ ಉದಾಹರಣೆ ತೆಗೆದುಕೊಳ್ಳೋಣ. ಇಂಗಾಲ (ಕಾರ್ಬನ್), ಜಲಜನಕ (ಹೈಡ್ರೋಜನ್), ಪ್ರಾಣವಾಯು (ಆಕ್ಸಿಜನ್) ಮತ್ತು ಸಾರಜನಕ (ನೈಟ್ರೋಜನ್) ಎಂಬ ನಾಲ್ಕು ಮೂಲತತ್ವಗಳ ಪರಮಾಣುಗಳು ಹೆಚ್ಚುಕಡಿಮೆ ಪ್ರಮಾಣದಲ್ಲಿ ಏಕತ್ರ ಬಂದು ಗಿಡವು ಮುಖ್ಯತಃ ತಯಾರಾಗುತ್ತದೆ. ಪ್ರತಿ

ಯೊಂದು ಗಿಡದಲ್ಲಿಯೂ ಈ ನಾಲ್ಕು ಮೂಲ ತತ್ವಗಳ ಪ್ರಮಾಣವು ನೂರಕ್ಕೆ ೯೮ರಿಂದ ೯೯ ರಷ್ಟು ಇದ್ದೇ ಇರುವದು. ಉಳಿದ ೧ರಿಂದ ೨ ರಷ್ಟರಲ್ಲಿ ಇನ್ನೂ ಹತ್ತಾರು ಮೂಲತತ್ವಗಳ ಸಮಾವೇಶವಾಗಿರುತ್ತದೆ.

ಬೀಜ ಸಸಿಯಾಗಿ ಬೆಳೆದು ದೊಡ್ಡ ಗಿಡವಾಗುವಾಗ ಅದರ ಶರೀರ ಪೋಷಣೆಗೆ ಬೇಕಾಗುವ ಮುಖ್ಯ ದ್ರವ್ಯಗಳೆಂದರೆ ಅಂಗಾರಾಮ್ಲ (ಕಾರ್ಬನ್-ಡಯಾಕ್ಸಾಯಿಡ್) ಮತ್ತು ನೀರಿನ ಉಗಿ. ಇವಂತೂ ಹವೆಯಿಂದಲೇ ದೊರೆಯುವವು. ಇದಲ್ಲದೆ ನೀರು ಮತ್ತು ಕೆಲವು ಕ್ಷಾರ ದ್ರವ್ಯಗಳು ಭೂಮಿಯಿಂದ ಬೇರುಗಳ ಮೂಲಕ ದೊರೆತು ಗಿಡ ಬೆಳೆಯತೊಡಗುತ್ತದೆ. ಈ ಕ್ಷಾರಗಳು ಗಿಡದ ಪೋಷಣೆಗೆ ಅಗತ್ಯವಾಗಿವೆ. ಆದರೆ ಗಿಡದಲ್ಲಿ ಅವುಗಳ ಮೂಲರೂಪ ಪೂರ್ಣ ಬದಲಾಗಿಬಿಡುತ್ತದೆ.

ಈ ಗಿಡ ಅಗ್ನಿಗೆ ಆಹಾರವಾದಾಗ, ಅಂದರೆ ಸುಟ್ಟಾಗ, ಹವೆಯಿಂದ ತೆಗೆದುಕೊಂಡ ದ್ರವ್ಯಗಳು ಅಂದರೆ ಅಂಗಾರಾಮ್ಲ ಮತ್ತು ನೀರಿನ ಉಗಿ ಮತ್ತೆ ಹವೆಯಲ್ಲಿ ಸೇರಿಕೊಳ್ಳುತ್ತವೆ. ಬಳಿಕ ಅವು ಇನ್ನೊಂದು ಗಿಡಕ್ಕೆ ಉಪಯೋಗವಾಗುತ್ತವೆ. ಭೂಮಿಯಿಂದ ಪಡೆದ ಕ್ಷಾರಗಳಲ್ಲಿ ಸಾರಜನಕ ಮಾತ್ರ ರೂಪಾಂತರವಾಗಿ ಹವೆಯಲ್ಲಿ ವಿಲೀನವಾಗುತ್ತದೆ. ಇತರ ಕ್ಷಾರಗಳು ಮಾತ್ರ ಒಂದಿಲ್ಲೊಂದು ರೂಪದಲ್ಲಿ ಭೂಮಿಯ ಮೇಲೆ ಬೂದಿಯಾಗಿ ಉಳಿಯುತ್ತವೆ.

ಪ್ರತಿಯೊಂದು ಗಿಡದ ಪೂರ್ಣ ಬೆಳವಣಿಗೆಗೂ ಕ್ಷಾರಗಳ ಅಗತ್ಯವಿದೆ. ಈ ಕ್ಷಾರಗಳು ಸಾಮಾನ್ಯವಾಗಿ ಎಲ್ಲ ಬೂದಿಯಲ್ಲೂ ಇರುತ್ತವೆ. ಅಂತೇ ನಾವು ಬೂದಿಯನ್ನು ಗೊಬ್ಬರವೆಂದೂ ಉಪಯೋಗಿಸುತ್ತೇವೆ. ಇದರಿಂದ ಗಿಡಗಳಿಗೆ ಬೇಕಾಗುವ ಕ್ಷಾರಗಳು ಒಂದೇ ಕಡೆಯಲ್ಲಿ ವಿಪುಲವಾಗಿ ದೊರೆತು ಗಿಡದ ಬೆಳವಣಿಗೆ ಬೇಗ ಆಗುತ್ತದೆ. ಬೂದಿಯಲ್ಲಿರದ ಸಾರಜನಕಯುಕ್ತ ಕ್ಷಾರದ ಕೊರತೆಯನ್ನು ನೀಗಿಸಲು ಬೂದಿಯೊಡನೆ ಸೆಗಣಿ ಅಥವಾ ಕೃತ್ರಿಮ ಗೊಬ್ಬರವನ್ನು ಕೂಡಿಸಿದಲ್ಲಿ ಉತ್ತಮ ಗೊಬ್ಬರವಾಗುವದು.

ಪೆಟ್ರೊಮ್ಯಾಕ್ಸ್ (ಗ್ಯಾಸದೀಪ) ಉರಿಯುವದನ್ನು ಸಾಮಾನ್ಯವಾಗಿ ಎಲ್ಲರೂ ನೋಡಿರುತ್ತಾರೆ. ಕಣ್ಣು ಕುಕ್ಕುವ ಅದರ ಪ್ರಕಾಶವು ಬೂದಿಯಲ್ಲಿ ಉಗಮ ಹೊಂದಿದೆ. ಅತಿಯಾಗಿ ಕಾದ ಬೂದಿಯು ಕಣ್ಣು ಕುಕ್ಕುವ ಇಂಥ ಪ್ರಖರ ಪ್ರಕಾಶವನ್ನು ಕೊಡಬಲ್ಲದು ಎಂದರೆ ಸರ್‍ರನೆ ಯಾರಿಗೂ ನಂಬಿಕೆಯಾಗಲಿಕ್ಕಿಲ್ಲ. ಗ್ಯಾಸ್ ಮ್ಯಾಂಟಲ್ (ಬತ್ತಿ) ಒಂದು ರೇಶಿಮೆಯ ಚೀಲವಾಗಿರುತ್ತದೆ. ಈ ಚೀಲವನ್ನು ವಿಶಿಷ್ಟ ಕ್ಷಾರಗಳಲ್ಲಿ ಅದ್ದಿ ಒಣಗಿಸುತ್ತಾರೆ. ಜಾಳಿಗೆಯಂಥ ಈ ಚೀಲ ಸುಟ್ಟ ಬಳಿಕ ಅದರಲ್ಲಿಯ ರೇಶಿಮೆಯ ಅಂಶ ಹಾರಿಹೋಗುತ್ತದೆ. ಅನಂತರ ಮೂಲ ಆಕಾರದಲ್ಲಿ ವಿಶಿಷ್ಟಕ್ಷಾರಗಳ ಬೂದಿ ಉಳಿಯುವದು. ಆದ್ದರಿಂದಲೇ ಗ್ಯಾಸ್‌ಮ್ಯಾಂಟಲ್ ತುಸು ಬಿರುಸಾಗಿ ಸುಲಭದಲ್ಲಿ ಉದುರಿಹೋಗುವಂಥದಾಗುತ್ತದೆ. ಅದನ್ನು ತುಂಬ ಜಾಗರೂಕತೆಯಿಂದ ಉಪಯೋಗಿಸಬೇಕಾಗುತ್ತದೆ. ಪೆಟ್ರೊಮ್ಯಾಕ್ಸಿನಲ್ಲಿಯ ಚಿಮಣಿ ಎಣ್ಣೆ ಉಗಿಯಾಗಿ ಉರಿಯುವಾಗ ಬಹಳ ಪ್ರಕಾಶವೇನೂ ಬೀಳುವದಿಲ್ಲ. ಆದರೆ ಆ ಉರಿಯುವ ಉಗಿಯ ಉಷ್ಣತೆಯಿಂದ ಗ್ಯಾಸ್‌ಮ್ಯಾಂಟಲಿನ ಬೂದಿ ಮಾತ್ರ ತುಂಬ ಕಾಯುತ್ತದೆ. ಕಾಯ್ದ ಬೂದಿ ಸರ್ವತ್ರ ಪ್ರಖರ ಪ್ರಕಾಶ ಬೀರುವಷ್ಟು ತೇಜಸ್ವಿಯಾಗುತ್ತದೆ.

ಅಡಿಗೆಯ ಪಾತ್ರಗಳು ಸುಟ್ಟುಹೋಗಬಾರದು ಎಂದರೆ ಅವಕ್ಕೆ ಹೊರಗಡೆ ಬೂದಿಯನ್ನು ಲೇಪಿಸುತ್ತಾರೆ. ಬೂದಿ ಅಷ್ಟೇನೂ ಉಷ್ಣತಾವಾಹಿಯಲ್ಲವಾಗಿರುವರಿಂದ ಅದರ ಉಪಯೋಗವನ್ನು ನಾವು ಈ ರೀತಿ ಮಾಡಿಕೊಳ್ಳುತ್ತೇವೆ. ಉರಿಯುವ ಬೆಂಕಿಯ ಉಷ್ಣತೆಯು ಪಾತ್ರೆಗೆ ಅಧಿಕ ಪ್ರಮಾಣದಲ್ಲಿ ಬೂದಿಯ ಲೇಪದ ಮೂಲಕ ತಗಲದಿದ್ದರೂ ಸಾಕಷ್ಟು ತಗಲುತ್ತದೆ.

ಬೂದಿ ಮಂದ ಉಷ್ಣತಾವಾಹಿಯಾಗಿರುವಂತೆ ಥಂಡಿಯನ್ನೂ ಅದು ನಿರೋಧಿಸುತ್ತದೆ. ಅಂತೇ ಸಾಧುಗಳು ಮೈಗೆ ಬೂದಿಯನ್ನು ಲೇಪಿಸಿಕೊಂಡು ಚಳಿಯಿಂದ ತಮ್ಮ ದೇಹವನ್ನು ರಕ್ಷಿಸಿಕೊಳ್ಳುತ್ತಾರೆ. ಬೂದಿಯ ಲೇಪನದಿಂದ ಶರೀರ

ದೊಳಗಿನ ಉಷ್ಣತೆ ಹೊರಗೆ ಹೋಗುವದಿಲ್ಲ ಮತ್ತು ಹೊರಗಿನ ಥಂಡಿ ದೇಹವನ್ನು ಮುಟ್ಟುವದಿಲ್ಲ. ಚಳಿಗಾಲದಲ್ಲಿ ನಾಯಿ, ಬೆಕ್ಕುಗಳು ಬೂದಿಯ ರಾಶಿಯಲ್ಲಿ ಆಶ್ರಯ ಪಡೆಯುವದು ಈ ಕಾರಣಕ್ಕಾಗಿಯೇ.

ಒಲೆಯೊಳಗಿನ ಕಟ್ಟಿಗೆ ಉರಿದು ಕೆಂಪಗೆ ಕೆಂಡವಾದಾಗ ಅದನ್ನು ಲಕ್ಷ್ಯವಿಟ್ಟು ನೋಡಿರಿ. ಮೊದಲು ಉಷ್ಣತೆಯಿಂದ ಕಟ್ಟಿಗೆ ಕಪ್ಪು ಇದ್ದಲಿಯಾಗುವದು; ಬಳಿಕ ಈ ಇದ್ದಲಿ ಉಷ್ಣತೆಯಿಂದ ಪ್ರಜ್ವಲಿತವಾಗಿ ಕೆಂಪಗಾಗುತ್ತದೆ. ಇದ್ದಲಿ ಉರಿಯುತ್ತಲೇ ಇರುವದರಿಂದ ಅದರಲ್ಲಿ ಉಷ್ಣತೆ ನಿರ್ಮಾಣವಾಗುತ್ತದೆ. ಸುಡುವ ಕ್ರಿಯೆಯಲ್ಲಿ ಇದ್ದಲಿಯಲ್ಲಿಯ ಜ್ವಲನಶೀಲ ಪದಾರ್ಥಗಳು ಗಾಳಿಯ ರೂಪದಲ್ಲಿ ಹಾರಿ ಹೋಗುವವು. ಆದರೆ ಸುಡದಂಥ ಭಾಗವು ಇದ್ದಲಿಯ ಮೇಲೆಯೇ ಬೂದಿಯ ರೂಪದಲ್ಲಿ ಶೇಖರವಾಗುತ್ತದೆ. ಈ ರೀತಿ ಕೂಡಿದ ಬೂದಿ ಮಾತ್ರ ಸುಡುವ ಕ್ರಿಯೆಗೆ ವ್ಯತ್ಯಯವುಂಟುಮಾಡುತ್ತದೆ. ಉರಿಗೆ ಬೇಕಾಗುವ ಪ್ರಾಣವಾಯುವು ಈ ಬೂದಿಯ ಥರಗಳ ನಡುವೆ ಹಾದಿಮಾಡಿಕೊಂಡು ಹೋಗಬೇಕಾಗುತ್ತದೆ. ಬಹಳಷ್ಟು ಬೂದಿ ಇದ್ದಲಿಯ ಮೇಲೆ ಕೂಡಿತಾದರೆ ಪ್ರಾಣವಾಯು ಒಳಗೆ ಪ್ರವೇಶಿಸುವದು ಕೂಡ ಕಠಿಣವಾಗುತ್ತದೆ. ಉರಿಯುವ ಕೆಂಡವೊಮ್ಮೆ ಬೂದಿಯ ದಪ್ಪ ಥರಗಳಲ್ಲಿ ಪೂರ್ಣ ಮುಚ್ಚಿ ಹೋದರೆ ಅದು ಉರಿಯುವದು ನಿಂತು ಹೋಗುತ್ತದೆ. ಕೆಂಡ ಶಾಂತವಾಗುತ್ತದೆ. ಉರಿಯನ್ನು ಜಾಗ್ರತವಾಗಿಡಲು ಸಕಾಲಕ್ಕೆ ಬೂದಿಯನ್ನು ಹಾರಿಸಬೇಕಾಗುತ್ತದೆ.

ಆದರೆ ಸುಡುವ ಕ್ರಿಯೆ ಸಾವಕಾಶವೂ ಮಂದವೂ ಆಗಬೇಕಾದಾಗ ಉರಿ ನಂದದಷ್ಟು ಆದರೆ ಉರಿಯನ್ನು ಕಡಿಮೆ ಮಾಡಲು ಬೇಕಾಗುವಷ್ಟು ಬೂದಿಯನ್ನು ಹಾಕಬೇಕಾಗುತ್ತದೆ. ಬೆಂಕಿಪೆಟ್ಟಿಗೆಯ ಶೋಧವಾಗುವ ಮೊದಲು ಅಡಿಗೆಮನೆಯಲ್ಲಿ ಬೆಂಕಿಯನ್ನು ಕಾಯ್ದಿಡಲು ಬೆಂಕಿಯ ಕೊಳ್ಳಿಯನ್ನು ಬೂದಿಯಲ್ಲಿ ಹುಗಿದಿಡುತ್ತಿದ್ದರು. ಬೂದಿಯನ್ನು ಊದಿ ಹಾರಿಸಿದಾಗ ಒಳಗೆ ಮಂದವಾಗಿದ್ದ ಬೆಂಕಿ ಮತ್ತೆ ಪ್ರಜ್ವಲಿಸುತ್ತದೆ.

ಬೂದಿ ರಾಶಿಯಾಗಿ ಕೂಡಿ ಬಿದ್ದಾಗ ಸಾಮಾನ್ಯ ಮನುಷ್ಯನಿಗೆ ತೊಂದರೆಯಾಗುತ್ತದೆ. ಅನೇಕಾನೇಕ ಉದ್ಯೋಗಗಳು, ಕಾರಖಾನೆಗಳುಳ್ಳ ಪ್ರಗತಿಪರ ರಾಷ್ಟ್ರಗಳಲ್ಲಿಯಂತೂ ಈ ತೊಂದರೆ ಬಹುವಾಗಿ ಅನುಭವಕ್ಕೆ ಬರುತ್ತದೆ: ಪ್ರತಿಯೊಂದು ಕಾರಖಾನೆಯಲ್ಲಿ ಕಲ್ಲಿದ್ದಲಿಯ ಲಕ್ಷಗಟ್ಟಲೆ ಟನ್ನು ಬೂದಿ ರಾಶಿಯಾಗಿ ಬಿದ್ದಾಗ ಅದನ್ನೇನು ಮಾಡಬೇಕೆಂಬ ಯಕ್ಷ ಪ್ರಶ್ನೆಉದ್ಭವಿಸುತ್ತದೆ. ಬೂದಿ ಸುಡುವದಿಲ್ಲ, ಕೊಳೆಯುವದಿಲ್ಲ, ಕೆಡುವದಿಲ್ಲ. ಈ ಅಮರದ್ರವ್ಯವನ್ನು ನಾಶಪಡಿಸುವದಾದರೂ ಹೇಗೆ?

ಕಳೆದ ಮಹಾಯುದ್ಧದ ಪ್ರಾರಂಭದಲ್ಲಿ ಜರ್ಮನರಿಗೆ ಕಚ್ಚಾ ಸರಕಿನ ಕೊರತೆಯೆನಿಸತೊಡಗಿತ್ತು. ಜರ್ಮನ್ ಶಾಸ್ತ್ರಜ್ಞರ ಚಿಕಿತ್ಸಕ ದೃಷ್ಟಿ ಆಗ ಈ ಬೂದಿಯ ಅಪಾರ ರಾಶಿಯ ಮೇಲೆ ಬಿತ್ತು. ಬೂದಿಯೆಂದರೆ ಏನು? ಕ್ಷಾರ ಮತ್ತು ಖನಿಜ ದ್ರವ್ಯಗಳ ಸಂಗ್ರಹ. ಖನಿಜ ದ್ರವ್ಯಗಳಿಗಾಗಿ ನಾವು ಬಹಳ ಆಳದ ವರೆಗೆ ನೆಲವನ್ನು ಅಗೆಯುತ್ತೇವೆ. ಈ ಖಟಾಟೋಪಕ್ಕಿಂತಲೂ ಕಾರಖಾನೆಯ ಹತ್ತರ ರಾಶಿಯಾಗಿ ಬಿದ್ದ ಬೂದಿಯಲ್ಲಿಯ ಖನಿಜ ದ್ರವ್ಯಗಳನ್ನು ಸಂಪಾದಿಸಿದರೆ ಒಂದೇ ಕಲ್ಲಿಗೆ ಎರಡು ಹಕ್ಕಿಗಳನ್ನು ಹೊಡೆದಂತಾಗುವದಿಲ್ಲವೆ? ಎಂದು ಅವರು ವಿಚಾರಮಾಡಿದರು. ಹಾಗಾದಲ್ಲಿ ಇತ್ತ ಬೂದಿಯ ರಾಶಿಯೂ ಕರಗಿದಂತಾಗುತ್ತಿತ್ತು, ಅತ್ತ ಖನಿಜ ದ್ರವ್ಯಗಳೂ ಸುಲಭದಲ್ಲಿ ಸಿಕ್ಕಂತಾಗುತ್ತಿತ್ತು.

ಬೂದಿಯಲ್ಲಿ ಸಕಲ ಬಗೆಯ ಖನಿಜದ್ರವ್ಯಗಳು ಹೆಚ್ಚು ಕಡಿಮೆ ಪ್ರಮಾಣದಲ್ಲಿರುವದರಿಂದ ನಮಗೆ ಬೇಕಾದ ಖನಿಜದ್ರವ್ಯವನ್ನು ಅದರಿಂದ ಆರಿಸಿ ತೆಗೆಯುವದು ಸುಲಭವಲ್ಲ. ಅವಶ್ಯಕತೆಯೆ ಶೋಧದ ತಾಯಿ. ಬೂದಿಯಲ್ಲಿಯ ಖನಿಜದ್ರವ್ಯಗಳನ್ನು ತೆಗೆಯುವದು ಕಠಿಣವಾದರೂ ಅಶಕ್ಯವಲ್ಲ ಎಂದು ಜರ್ಮನ್ ವಿಜ್ಞಾನಿಗಳು ಯೋಚಿಸಿದರು. ತೀರ ನಿರುಪಾಯಸ್ಥಿತಿಯಲ್ಲಿ ಈ ಬಗೆಯ ಪ್ರಯೋಜನ ಪಡೆಯಲು ಅವರು ನಿರ್ಧರಿಸಿದರು. ಅವರು ಈ ವಿಷಯದಲ್ಲಿ ಸಂಶೋಧನ ನಡೆಸಿ

ವೆಚ್ಚ ಮತ್ತು ಉತ್ಪಾದನೆಗಳ ಅಂಕೆಸಂಖ್ಯೆಗಳನ್ನು ತಯಾರಿಸಿದ್ದಾರೆ.

ಜರ್ಮನಿಯಲ್ಲಿ ಯುದ್ಧಪೂರ್ವಕಾಲದಲ್ಲಿ ಸಾವಿರಾರು ಕಾರಖಾನೆಗಳಿದ್ದವು. ಅವುಗಳಲ್ಲಿ ಎಲ್ಲವೂ ಅಲ್ಲದಿದ್ದರೂ ಬಹಳಷ್ಟು ಕಾರಖಾನೆಗಳ ಬೂದಿಯ ರಾಶಿಯನ್ನು ಒಂದೆಡೆ ಹಾಕಿದರೆ ಒಂದು ಕೋಟಿ ಟನ್ನುಗಳಷ್ಟಾದೀತು ಎಂದು ಅಂದಾಜಿತ್ತು. ಇಷ್ಟು ಬೂದಿಯಲ್ಲಿ ೧,೦೦೦ ಟನ್ ನಿಕೆಲ್, ೬೦೦ ಟನ್ ಕ್ರೋಮಿಯಂ, ೧,೨೦೦ ಟನ್ ಸತುವು, ೧,೨೦೦ ಪೌಂಡು ಬಂಗಾರ, ೧,೦೦೦ ಪೌಂಡು ಪ್ಲೇಟಿನಂ ಮುಂತಾದವು, ೧೨,೦೦೦ ಪೌಂಡು ಬೆಳ್ಳಿ ದೊರೆಯಬಹುದು ಎಂದು ಲೆಕ್ಕ ಮಾಡಿದ್ದಾರೆ. ಬೂದಿಯ ತೂಕದಲ್ಲಿ ನೂರಕ್ಕೆ ಮೂರರಷ್ಟು ಅದರಲ್ಲಿರುವ ಲೋಹಗಳ ತೂಕವಿರುತ್ತದೆ.

ಈಗ ಸದ್ಯಕ್ಕೆ ಬೂದಿಯಿಂದ ಖನಿಜ ದ್ರವ್ಯಗಳನ್ನು ತೆಗೆಯುವದು ಆರ್ಥಿಕ ದೃಷ್ಟಿಯಿಂದ ಪೂರೈಸಲಿಕ್ಕಿಲ್ಲ. ಆದರೆ ಧಾತು ಉತ್ಪಾದನೆಗಳ ತಂತ್ರವು ಹೊಸ ಹೊಸ ಪ್ರಯೋಗಗಳಿಂದ ಸುಲಭವೂ ಕಡಿಮೆ ಖರ್ಚಿನದೂ ಆಗುತ್ತಿದೆ. ಇಂದಲ್ಲದಿದ್ದರೆ ಭವಿಷ್ಯತ್ತಿನಲ್ಲಿಯಾದರೂ ಇಂದು ಕಃ-ಪದಾರ್ಥವೆಂದು ಮೂಲೆಗೆ ಬೀಳುತ್ತಿರುವ ಬೂದಿಗೆ ಬೆಲೆ ಬಾರದೆ ಉಳಿಯದು. ಬೂದಿ ಗುಪ್ತಧನದ ಸುಪ್ತ ಗಣಿಯೆನ್ನುವದು ಪ್ರತ್ಯಕ್ಷವಾಗುವ ಕಾಲ ಬಂದೇ ಬರುವದು.



## ಟಾಲಾಸ್ಟಾಯನ ರೆಕ್ಕೆಗಳು

ವಿಶ್ವಸಾಹಿತಿ ಟಾಲ್‌ಸ್ಟಾಯನು ಜಗತ್ತಿಗೇ ಗುರುವೆನಿಸಿದಾತ, ವಿವೇಕ ಬೋಧಿಸಿದಾತ. ಆದರೆ ಆತನ ಕಲ್ಪನಾಶಕ್ತಿ ಒಮ್ಮೊಮ್ಮೆ ತುಂಬ ಮೋಜಿನ ಪ್ರಸಂಗಗಳನ್ನು ತರುತ್ತಿತ್ತು. ಒಂದು ಸಲ ಅವನು ತನ್ನ ಮನೆಯ ಮುಹಡಿಯ ಕಿಡಿಕಿಯಲ್ಲಿ ನಿಂತು ಹೊರಗೆ ಗರಿಗೆದರಿ ಹಾರುವ ಹಕ್ಕಿಗಳನ್ನು ಕಂಡನು. ಒಡನೇ ಈ ಜಗದ್ಗುರುವಿನ ಕಲ್ಪನಾಶಕ್ತಿ ಕೆಲಸ ಮಾಡತೊಡಗಿತು. ತಾನೂ ಒಂದು ಹಕ್ಕಿ ಎಂದು ಅವನಿಗೆ ಭಾಸವಾಯಿತು. ಆತ ಹಕ್ಕಿ ರೆಕ್ಕೆಗಳನ್ನು ಬಿಚ್ಚಿ ಹಾರುವಂತೆ ತಾನೂ ಕೈಗಳನ್ನು ಅಗಲಿಸಿ ಕಿಡಿಕಿಯಿಂದ ಹೊರಗೆ ಹಾರಿದನು. ಗುರುತ್ವಾಕರ್ಷಣವು ಅವನ ಕಲ್ಪನಾಶಕ್ತಿಯನ್ನು ಲೆಕ್ಕಿಸದಿದ್ದುದರಿಂದ ಅವನು ನೇರವಾಗಿ ನೆಲಕ್ಕೆ ಬಿದ್ದನು. ಪುಣ್ಯಾವಶಾತ್ ಅಲ್ಲೇ ಬೀಜಬಿತ್ತಲು ಹಸನು ಮಾಡಿದ ಮೆತ್ತನ್ನ ನೆಲವಿದ್ದುದರಿಂದ ಅವನ ಕಾಲು ಮುರಿಯುವುದು ತಪ್ಪಿತು.

—ಮುರಲೀಧರ, ಹುಬ್ಬಳ್ಳಿ

* * *

ಹೆಚ್ಚು ಕೆಲಸ ಮಾಡಿದಷ್ಟೂ ಹೆಚ್ಚು ಕೆಲಸ ಮಾಡುವ ಶಕ್ತಿ ಬೆಳೆಯುತ್ತದೆ; ಹೆಚ್ಚು ಕಾರ್ಯಾಸಕ್ತರಾದಷ್ಟೂ ಹೆಚ್ಚು ವಿರಾಮ ನಮಗೆ ದೊರೆಯುತ್ತದೆ.

—ಹ್ಯಾಜಲಿಟ್



# ಅವಳಿಗೆ ಮೋಟಾರ್ ಬೇಕಿತ್ತು !

ಸಿ. ಆರ್. ಸತ್ಯನಾರಾಯಣ

ನನ್ನ ಹೆಂಡತಿಯ ಬಯಕೆಗಳು ಇತ್ತೀಚೆಗೆ ಹೆಚ್ಚಿದ್ದವು. ಮೊನ್ನೆಯ ದಿನ ಸೀರೆಯೆಂದಳು, ತೆಗೆದುಕೊಟ್ಟೆ. ಅದೇ ದಿನ ಸಂಜೆ ಮಗುವಿಗೆ ಜರತಾರಿ ಲಂಗವೆಂದಳು, ಅದಕ್ಕೂ ಒಪ್ಪಿದೆ. ಅಂಗಡಿಗೆ ಹೋದಾಗ ಹೈಹೀಲ್ಡ್ ಷೂ ಎಂದಳು. ನನಗೆ ರೋಷವೇರಿತು. '' ನಿನ್ನ ಆಡಂಬರಗಳಿಗೆ ನಾನೊಬ್ಬ ಶ್ರೀಮಂತ ಆಫೀಸರನಲ್ಲ '' ಎಂದು ಗದರಿಸಿದೆ. ಆಗ ಅವಳೇನೋ ತಗ್ಗಿದ್ದವಳಂತಿದ್ದಳು. ಆದರೆ ದಾರಿಯಲ್ಲಿ ಬರುವಾಗ, ಇದ್ದಕ್ಕಿದ್ದಂತೆಯೇ ನಿಂತಳು. ತಿಳಿಯಿತು. ಅವಳ ಗಮನವೆಲ್ಲಾ ಪಕ್ಕದ ಅಂಗಡಿಯಲ್ಲಿ ತೂಗಾಡುತ್ತಿದ್ದ ಹ್ಯಾಂಡ್‌ಬ್ಯಾಗ್ ಮೇಲೆ ಇತ್ತು. ನನಗೆ ಮಿತಿಮೀರಿದ ಕೋಪ ಬಂತು. " ನೀನು ಕೊಂಡುಕೊಳ್ಳುವುದಕ್ಕಂತೂ ನಾನು ಬಿಡುವುದಿಲ್ಲ. ಬೇಕಾದರೆ ಸುಮ್ಮನೆ ನೋಡಿಕೊಂಡು ನಂತರ ಬಾ " ಎಂದು ದಡದಡನೆ ಮನೆಗೆ ಬಂದೆ.

ಆದರೆ ಮನೆಯ ಬಳಿ ಬಂದಾಗ ನನ್ನ ಹಿಂದೆಯೇ ಒಂದು ಟ್ಯಾಕ್ಸಿಯು ಬಂದು ನನ್ನ ಮನೆಯೆದುರೇ ನಿಂತಿತು. ಏನಾಶ್ಚರ್ಯ ! ನನ್ನ ಹೆಂಡತಿಯೇ ಅದೇ ಹ್ಯಾಂಡ್‌ಬ್ಯಾಗ್ ಅನ್ನು ತಿರುವುತ್ತಾ ಕೆಳಗೆ ಇಳಿದಳು. ಅವಳ ಹಿಂದುಗಡೆ ರಾಜಿ, ಕೈಯಲ್ಲಿ ಹೊಸ ಬೂಡ್ಸಿನ ಪೆಟ್ಟಿಗೆ !

ಟ್ಯಾಕ್ಸಿಯವನಿಗೆ ಅವಳೇ ದುಡ್ಡು ಕೊಟ್ಟಳು. ನಾನು ರೋಷದಿಂದಿದ್ದದ್ದು ನೋಡಿ,

"ನೀವೇನೂಂದ್ರೆ, ಮುಖಗಂಟು ಹಾಕ್ಕೋತೀರಿ? ನಾನು ಖರ್ಚು ಮಾಡಿದ್ದು ನಿಮ್ಮ ದುಡ್ಡಲ್ಲ. ನಮ್ಮಪ್ಪನ ದುಡ್ಡು ತಿಳಿಯಿತೆ?" ಅಂದಳು.

"ಯಾರ ದುಡ್ಡಾದರೇನೆ? ಇಲ್ಲಿ ನಾನು, ನಮ್ಮಪ್ಪನ ಚಪ್ಪಲಿ, ಮದುವೆಯ ಕೋಟು, ನಮ್ಮ ರಾಜಿಯ ಪೆನ್ನು, ಕೈಯಲ್ಲಿ ಗೋಣೀಚೀಲ – ಹೀಗೆ ಹಾಕ್ಕೊಂಡು ಆಫೀಸಿನಿಂದ ಮನೆಗೆ ಮನೆಯಿಂದ ಆಫೀಸಿಗೆ ಅಲೀತಿರೋದು! ಇಲ್ಲಿ ನೀನು, ಕಾರಕೂನನ ಹೆಂಡ್ತಿ ಅಂತ ಹೆಸರಿಗೆ, ಟ್ಯಾಕ್ಸಿ ಗಾಡಿ ಮಾಡಿಕೊಂಡು ಅಂಗಡಿಯಿಂದ ಮನೆಗೆ, ಮನೆಯಿಂದ ಸಿನಿಮಾಕ್ಕೆ ಸುತ್ತುತಾ ಇರೋದು! ಇಲ್ಲಿ ನೋಡು. ನನ್ನ ಬಳಿ ಇರುವೆಯೋ ಸರಿ, ಕಾರಕೂನನ ಮಡದಿಯ ಹಾಗೆ ಇರು. ಇಲ್ಲ, ರಾಣಿಯಾಗಿ ಮೆರೀತೀನಿ ಅಂತ ಆಸೆಪಟ್ಟಿಯೋ, ನಿಮ್ಮಪ್ಪನಮನೆಗೆ ಹೋಗಿ ಸಂತೋಷಪಟ್ಕೊ!'' ಅಂತ ನಾನು ಕೂಗಾಡಿ ನನ್ನ ಕೊಠಡಿಗೆ ಹೋಗಿ ಬಾಗಿಲು ಹಾಕ್ಕೊಂಡೆ.

ನಾನು ಕೊಠಡಿಯಿಂದ ಹೊರಗೆ ಬಂದಾಗ ಮನೆ ನಿಶ್ಶಬ್ದವಾಗಿತ್ತು. ನನ್ನ ಹೆಂಡತಿಯೊಬ್ಬಳೇ ಕುಳಿತುಕೊಂಡು ಏನೋ ಬರೆಯುತ್ತಿದ್ದಳು.

"ಸರಿ! ಅಪ್ಪನಿಗೆ ಕಾಗದ ಬರೆಯುವಿ ತಾನೆ?"

ಅವಳು ತಿರುಗುವಳೆಂದಿದ್ದೆ. ಅವಳು ಕೇಳಿಸದವಳಂತೇ ಕುಳಿತಿದ್ದಳು. ಪರವಾಗಿ ತಾನು ಬರೆಯುತ್ತಿದ್ದನ್ನು ತೋರಿಸಿದಳು.

ಒಂದು ಮೋಟಾರಿನ ಚಿತ್ರ!

"ನಿನಗೇನು ಹುಚ್ಚು ಹಿಡಿದಿಲ್ಲವಷ್ಟೆ?"

ಅವಳು ಮಾತನಾಡಲಿಲ್ಲ. ಮೋಟಾರನ್ನು ತಿದ್ದಿದಳು. ಚಕ್ರಗಳಿಗೆಲ್ಲಾ ಕಪ್ಪು ಬಣ್ಣ ಬಳಿದಳು. ದೀಪಗಳಿಗೆ ಬಿಳಿಯ ಬಣ್ಣ ಹಾಕಿದಳು. ನಾನು ಇನ್ನೂ ಅಲ್ಲೇ ನಿಂತಿದ್ದೆ.

"ಮೋಟಾರಿನ ಚಿತ್ರ ಬರೆದರೆ ನಿಮ್ಮ ಹಣವೇನೂ ಖರ್ಚಾಗುವುದಿಲ್ಲವಲ್ಲಾ!"

"ಇಲ್ಲ; ಆದರೆ ನಿನ್ನ ವಿಚಿತ್ರ ಮನಸ್ಸನ್ನು ನೋಡಿ ಆಶ್ಚರ್ಯವಾಯಿತು. ಆಗ ನಿನ್ನ ಮನಸ್ಸೆಲ್ಲಾ ಹ್ಯಾಂಡ್ ಬ್ಯಾಗ್ ಮೇಲೆ ಇದ್ದಂತಿತ್ತು. ಈಗ ಕಾರಿನ ಮೇಲೆ ಮನಸಾಯಿತೇನೊ!"

ಇದೊಂದೇ ದಿವಸವಲ್ಲ ಹೀಗೆ ನಡೆದದ್ದು. ಆಫೀಸಿಗೆಂದು ಟೋಪಿಯನ್ನು ಮೇಜಿನ ಮೇಲಿಂದ ಎತ್ತಿದರೆ, ಅಲ್ಲಿ ಒಂದು ಮೋಟಾರಿನ ಚಿತ್ರ! ರಾಜಿ ಅಂದಳು, ಅಮ್ಮ ಬರೆದಿದ್ದು ಎಂದು. ಮನೆಯ ಮುಂದೆ ರಂಗವಲ್ಲಿಯನ್ನೇನೋ ಇಟ್ಟಿದ್ದಳು. ಅದರ ತುದಿಗಳಲ್ಲಿಯೂ ಮೋಟಾರಿನ ಚಿತ್ರ! ಅಡಿಗೆಮನೆಯಲ್ಲಿ ಹುಣಿಸೆ ಬೀಜಗಳನ್ನು ಜೋಡಿಸಿ, ಮೋಟಾರನ್ನು ಮಾಡಿದಾಗಲಂತೂ ನನಗೆ ನಗೆ ತಡೆಯಲಾಗಲಿಲ್ಲ.

"ಇದು ಏನು ವಿಪರೀತ! ಎಲ್ಲಿ ನೋಡಿದರೂ ಕಾರಿನ ಚಿತ್ರವೇ ಬರೆದಿದ್ದೀಯಲ್ಲ! ರಾಜಿಯೆಂದು ತಿಳಿದಿದ್ದೆ. ನೋಡಿದರೆ, ನೀನೇ ಬರೆದಿದ್ದೀಯ! ಯಾರಾದರು ನೋಡಿದರೆ ನಕ್ಕಾರು!"

ಅವಳು ಗದ್ಗದ ಕಂಠದಿಂದ ಅಂದಳು :

"ನೀವು ಒಂದು ಮೋಟಾರು ಕೊಂಡುಕೊಳ್ಳಿ!" ಅಂತ.

"ಶಿವ! ಶಿವ!! ಏನೆಂದೆ? ಮೋಟಾರೆ?.. ಮೋಟಾರು? ನಾನು? ಅಯ್ಯೋ! ನಾನು ಕಾರಕೂನ ಕಣೇ, ಬಡ ಕಾರಕೂನ! ನಿಮ್ಮಪ್ಪನ ಮನೆ ಕಡೆಯವರಂತೆ ಆಫೀಸರನಲ್ಲವೇ ಮೂಢಿ! ಮೋಟಾರು!—ಇದೇನು ಅತೀ ಆಸೆ! ಮೋಟಾರಂತೆ, ಮೋಟಾರು!"

"ಹಾಗಾದರೆ...."

"ಏನು ಹಾಗಾದರೆ?"

"ನಾನು ಮೀರಾಬಾಯಿ ಮನೆಗೆ—"

"ಹೋಗಿದ್ದಾಗ ಅವರ ಮನೆಯ ಮೋಟಾರನ್ನು ನೋಡಿದೆಯಲ್ಲವೆ?"

"ಹೋಗುವಾಗ—"

"ಅದೇ ಹೇಳಿದೆನಲ್ಲ, ಮೋಟಾರನ್ನು ಕಂಡೆಯೆಂದು!"

ಅವಳಿಗೆ ಅಳು ತಡೆಯಲಾಗಲಿಲ್ಲ.

"ನನ್ನ ಸ್ನೇಹಿತೆಯರೆಲ್ಲರೂ ಅವರ ಮನೆ ಮದು

ವೆಗೆ....ಮೋಟಾರಿನಲ್ಲಿ ಬರುವಾಗ ನಾನು ಮಾತ್ರ ....ಇದೇ ಸೀರೆ, ಇದೇ ಚಪ್ಪಲಿ, ನಡೆದು ಕೊಂಡು—"

"ಅಲ್ಲವೆ? ಇದೇ ಸೀರೆ, ಇದೇ ಹೈಹೀಲ್ಡ್ ಷೂ! ಇದೇ ಹ್ಯಾಂಡ್‌ಬ್ಯಾಗ್..! ನಿನ್ನ ಬಯಕೆಗಳಿಗೆ, ಕುಬೇರನೇ ಹಣ ತರಬೇಕೇ ಮಹಾರಾಯ್ತಿ! ನಿಮ್ಮನೆಯವರು ಕಲಿಸಿದ ಬುದ್ಧಿಯಿದು. ಕಾರಂತೆ! ಕಾರು!"

ಅಂದು ರಾತ್ರಿ ಊಟಮಾಡುವಾಗಂದಳು,

"ನಿಮ್ಮ ಆಫೀಸರ್ ಹೆಂಡ್ತಿ ಕಾರು ಬಿಡ್ತಾರಲ್ಲ, ಅವರಿಗಾದರೂ ಹೇಳಲ್ವೆ?"

"ಏನೇ ಅದು..?"

"ನನ್ನನ್ನ ಕಾರಿನಲ್ಲಿ ಮದುವೆಯ ಮನೆಗೆ ಬಿಡುವಿರಾ ಎಂದು?" ನನಗೆ ಬೃಹತ್ ಕೋಪ ಬಂತು. ಕೈಯಲ್ಲಿದ್ದ ಅನ್ನವನ್ನು ನೆಲಕ್ಕೆ ಅಪ್ಪಳಿಸಿದೆ. ತಟ್ಟೆಯನ್ನು ಒದ್ದು, ಅದೇ ಕೈಯಿಂದ ಅವಳ ಕೆನ್ನೆಗೆ ಫಟೀರ್ ಎಂದು ಹೊಡೆದೆ. ಗಂಟಲು ಬಿರಿಯುವಂತೆ ಕೂಗಿದೆ,

"ಇನ್ನು ಮೋಟಾರೆಂದು ಪಿಸುಗುಟ್ಟಿದರೂ ಸರಿಯೆ, ಮನೆಬಿಟ್ಟು ಓಡಿಸಿಬಿಟ್ಟೇನು!" ನನ್ನ ಆವೇಶದಲ್ಲಿ, ರಾಜಿಯನ್ನು ಒದ್ದಿದ್ದೆ. ನನ್ನವಳ ಕೈಯಲ್ಲಿದ್ದ ಪಾತ್ರೆಗಳೆಲ್ಲಾ ಉರುಳಿದ್ದವು. ಶತಪಥ ಸುತ್ತಿದೆ. ಸನ್ನಾಕೆ ಗೊಣಗುತ್ತಿದ್ದಂತಿತ್ತು:

"ಮದುವೆಗೆ ಮೋಟಾರಿನಲ್ಲಿ ಹೋಗುವವಳೇ ಹೌದು!"

ಮೀರಾಬಾಯಿ ಮನೆಯ ಮದುವೆಯ ದಿವಸ ಬಂತು. ಅಂದು ಆಫೀಸಿಗೆ ಹೋಗುವಾಗ ಕೇಳಿದೆ, "ಕಾರಿನ ಆಸೆ ಬಿಟ್ಟಿರುವಿಯೇನು?" ಅವಳು ನಕ್ಕಳಷ್ಟೆ. ಸಂಜೆ ಆಫೀಸಿನಿಂದ ಮನೆಗೆ ಬಂದಾಗ, ಮನೆಗೆ ಬೀಗ ಹಾಕಿತ್ತು. ಪಕ್ಕದ ಮನೆಯ ಗಂಡಸರು, ಕಿಟಿಕಿಯಿಂದ ತಲೆ ಚಾಚಿದರು.

"ಆಂಬುಲೆನ್ಸ್ ಬಂದು, ನಿಮ್ಮವರನ್ನ ಮತ್ತು ನಿಮ್ಮ ಮಗುವನ್ನ ಕರಕೊಂಡು ಹೋಯ್ತ್ರೀ!"

"ಆ್ಞ! ಆಂಬುಲೆನ್ಸಾ? ಯಾವ ಆಸ್ಪತ್ರೇದ್ರೀ ಯಾವಾಗ್ರೀ...? ಹುಷಾರಾಗಿದ್ದರು ತಾನೆ?"

"ಹುಷಾರೇನು?..... ಮಾಮೂಲಾಗೆ ಅನ್ನಿ." ಅವರು ಒಳಗೆ ಹೋದರು. ನನಗೆ, ತಲೆಯ ಮೇಲೆ ಬೆಟ್ಟವೇ ಕಳಚಿ ಬಿದ್ದಂತಾಯಿತು. ಅವಳ ಗ್ರಹಚಾರಕ್ಕೆ ಏನು ವಿಪತ್ತು ಒದಗಿತೋ! ಅವಳು!.... ರಾಜಿ!! ನನಗರಿವಿಲ್ಲದೆಯೇ ಕಾಲುಗಳು ಆಸ್ಪತ್ರೆಯ ಕಡೆಗೆ ಹೊರಟಿದ್ದವು. ಏನಾಗಿರಬಹುದು?.... ಬೆಂಕಿ? ಯಾರೋ ನನ್ನನ್ನು ಕೂಗಿದಾಗಲೇ, ಮೀರಾಬಾಯಿ ಮನೆ ಮುಂದೆ ಹೋಗುತ್ತಿದ್ದೇನೆಂದು ತಿಳಿಯಿತು. ಅವರ ಮನೆಯ ಡ್ರೈವರ್ ಕೈ-ಬೀಸಿದ.

"ನಿನ್ನ ಜೊತೆಗೆ ಮಾತನಾಡಲು ನನಗೆ ಸಮಯವಿಲ್ಲ. ನಾನು—"

"ಹಾಗಲ್ಲ ರಾಯರೆ! ನಿಮ್ಮ ಮನೆಯವರು–"

"ಹಾ! ಹಾ! ನಮ್ಮನೆಯವರೆ? ಹೇಳ್ರೀ, ಹೇಳ್ರೀ, ಏನಾಯ್ತು? ಆಸ್ಪತ್ರಿಗೆ ಹೋದ್ರೆ?... ಏನಾಯ್ತೀ...? ಅಲ್ಲಿಗೇನ್ರೀ ಹೋಗ್ತಾ ಇರೋದು!"

ಅವನು ನಕ್ಕ. "ಏನಾಗಲಿಲ್ಲ ರಾಯರೆ. ಆಂಬುಲೆನ್ಸಿಇಂದ ಇಲ್ಲಿ ಬಂದಿಳಿದರು, ಅಷ್ಟೆ!"

"ಇಲ್ಲಿ ಇಳಿದರೆ! ಆಸ್ಪತ್ರೆಗೆ ಹೋಗಲಿಲ್ಲ ತಾನೆ?" ಎಂದೆ. ಏನೆಂದು ನೋಡದೆ ಮದುವೆಯ ಮನೆಗೆ ನುಗ್ಗಿದೆ. ಅತಿಥಿ ಸತ್ಕಾರದಲ್ಲಿದ್ದವರೆಲ್ಲರೂ ಗಾಬರಿಯಾದರು. ಎಡವಿದೆ. ಓಡಿದೆ ಮುಂದೆ. ಇನ್ನೂ ಹೋಗುತ್ತಿದ್ದೆನೇನೋ! ಡ್ರೈವರ್ ನನ್ನ ತಡೆದ.

"ಅಲ್ಲಿ ನೋಡ್ರಿ ರಾಯರೆ! ಅಲ್ಲಿ...."

ಅಲ್ಲಿ ನೋಡಿದೆ, ನನ್ನವಳನ್ನ ಮತ್ತು ರಾಜಿಯನ್ನ. ಇನ್ನೂ ಹೆಚ್ಚು ಸಂತೋಷವಾಗಿಯೇ ಇದ್ದಳು. ಡ್ರೈವರ್ ಅಂದ:

"ಆಂಬುಲೆನ್ಸ್, ನಮ್ಮ ಬಂಗಲೆ ಮುಂದೆ ಬಂದಾಗ, ಅದರ ಡ್ರೈವರ್‌ಗೆ ನಿಲ್ಲಿಸೋಕೆ ಹೇಳಿದ್ರು ರಾಯರೆ! ಅವನು ನಿಲ್ಲಿಸಿದ್ದೆ ತಡ, ಮಗೂನ ಎಳೆದುಕೊಂಡು ಮದುವೆ ಮನೆಯೊಳಗೆ ಬಂದ್ರು. ಆಂಬುಲೆನ್ಸ್ ಡ್ರೈವರ್

ಕೋಪ—"

"ಅರ್ಥವಾಯಿತು" ಅಂದೆ.

ಅರ್ಥವಾಗಿತ್ತು. ತನಗೇನೋ ವಿಪತ್ತು ಒದಗಿದೆಯೆಂದು ಆಂಬುಲೆನ್ಸ್‌ಗೆ ಫೋನ್ ಮಾಡಿ, ಆಂಬುಲೆನ್ಸ್ ಬಂದಾಗ, ಅದರಲ್ಲಿ ಕುಳಿತುಕೊಂಡು ಮೀರಾಬಾಯಿ ಮನೆ ಮುಂದೆ ಬಂದಾಗ ತನಗೇನೂ ಆಗಿಲ್ಲವೆಂದು ಹೇಳಿ, ಅಷ್ಟು ಜನ ಶ್ರೀಮಂತರ (ಕಾರುಳ್ಳವರ) ಎದುರಿಗೆ, ಮದುವೆಯ ಮನೆಯೊಳಗೆ ಹೋಗಿದ್ದಳು— ನನ್ನ ಮಡದಿ.

ಅಂತೂ ಮೀರಾಬಾಯಿ ಮನೆ ಮದುವೆಗೆ ಮೋಟಾರಿನಲ್ಲೇ ಹೋಗಿದ್ದಳು!

---

## ಮಹಾಪುರುಷನ ಮೌಢ್ಯ

ನ್ಯೂಟನನು ಎಲ್ಲರಿಗೂ ಪರಿಚಿತನಾದ ವಿಜ್ಞಾನಿ. ಭೂಮಿಯ ಗುರುತ್ವಾಕರ್ಷಣವನ್ನು ಅಳೆದ ಈ ಮಹಾ ಮೇಧಾವಿಗೆ ಬೆಕ್ಕುಗಳನ್ನು ಸಾಕುವುದರಲ್ಲಿ ಬಹಳ ಪ್ರೀತಿ ಮತ್ತು ಆಸಕ್ತಿ ಇತ್ತು. ಒಂದು ಸಲ ಅವನು ಎರಡು ಬೆಕ್ಕುಗಳನ್ನು ಸಾಕಿದನು. ಅವುಗಳಲ್ಲಿ ಒಂದು ಸಣ್ಣದು ಇನ್ನೊಂದು ದೊಡ್ಡದಾಗಿತ್ತು. ನ್ಯೂಟನನು ಅವುಗಳಿಗೆ ಒಂದು ಪ್ರತ್ಯೇಕವಾದ ಕೊಠಡಿಯನ್ನು ಬಿಟ್ಟುಕೊಟ್ಟಿದ್ದನು. ಅವುಗಳಿಗೆ ಬೇಕಾದಹಾಗೆ ಹೊರಗೂ ಒಳಗೂ ಓಡಾಡಲು ಬರಬೇಕೆಂದು ಅವನು ಅವುಗಳ ಕೊಠಡಿಯ ಬಾಗಿಲುಗಳನ್ನು ಯಾವಾಗಲೂ ತೆರೆದಿಡುತ್ತಿದ್ದನು. ಆದರೆ ಚಳಿಯನ್ನು ತಡೆಗಟ್ಟುವದು ಆ ಬೆಕ್ಕುಗಳಿಗೆ ಅಸಾಧ್ಯವಾಯಿತು. ಇದನ್ನರಿತ ನ್ಯೂಟನನು ಒಬ್ಬ ಒಳ್ಳೆಯ ಬಡಗಿಯನ್ನು ಕರೆಯಿಸಿ, "ಈ ಕೊಠಡಿಯ ಬಾಗಿಲುಗಳಿಗೆ ಎರಡು ತೂತುಗಳನ್ನು ಮಾಡತಕ್ಕದ್ದು, ಒಂದು ಸಣ್ಣದು, ಇನ್ನೊಂದು ದೊಡ್ಡದು" ಎಂದನು. ಬಡಗಿಯು ಎಲ್ಲವನ್ನೂ ತಿಳಿದುಕೊಂಡು ಆ ಬಾಗಿಲುಗಳಿಗೆ ದೊಡ್ಡ ಒಂದೇ ತೂತನ್ನು ಕೊರೆದನು. ಇದನ್ನು ಕಂಡು ನ್ಯೂಟನನು ಸಿಟ್ಟಿನಿಂದ, "ನಾನು ನಿನಗೆ ಎರಡು ತೂತುಗಳನ್ನು ಕೊರೆಯಲು ಹೇಳಿರಲಿಲ್ಲವೆ? ಸಣ್ಣ ಬೆಕ್ಕಿಗೆ ಹೊರಬೀಳಲಿಕ್ಕೊಂದು, ದೊಡ್ಡದಕ್ಕೊಂದು?" ಎಂದನು. ಆಗ ಬಡಿಗನು "ಯಾಕೆ, ಒಂದೇ ತೂತಿನಿಂದ ಎರಡೂ ಬೆಕ್ಕುಗಳಿಗೆ ಹೋಗಲು ಸಾಧ್ಯವಿಲ್ಲವೆ?" ಎಂದನು. ನ್ಯೂಟನನು ತನ್ನ ದಡ್ಡತನಕ್ಕೆ ನಾಚಿಕೊಂಡು ಸುಮ್ಮನಾದನು.

— ಪಂಡಿತ ವಾ. ಸದರಜೋಶಿ, ಚಿಕ್ಕೋಡಿ

೧೯೪೨, ಅಕ್ಟೋಬರ ೩೧ ನೆಯ ದಿನಾಂಕ ನಡೆದ ಮಾತಿದು. ಅಂದು ಸರದಾರ ವಲ್ಲಭಭಾಯಿ ಪಟೇಲರ ಜನ್ಮದಿನವೆನ್ನುವದು ಗಾಂಧೀಜಿಯವರ ಗಮನಕ್ಕೆ ಬರಲು ಅವರ ಮನಸ್ಸು ಸ್ನೇಹದಿಂದ ಪುಲಕಿತವಾಯಿತು. ಅವರು ಕೂಡಲೆ ಒಂದು ಪತ್ರ ಬರೆದು ಸರದಾರರಿಗೆ ಕಳಿಸಿಕೊಟ್ಟರು. ಆ ಪತ್ರ ಹೀಗಿತ್ತು:

ಭಾಯಿ ವಲ್ಲಭಭಾಯಿ,

ಇಂದು ನಿಮ್ಮ ಜನ್ಮದಿನ ಎಂದು ಕೇಳಿದ್ದೇನೆ. ಇದರಿಂದ ಸೇವೆಯ ವರ್ಷಗಳಲ್ಲಿ ಒಂದು ವರ್ಷವಂತೂ ಕಳೆದಂತಾಯಿತು. ಇಂಥ ಅನೇಕ ವರ್ಷಗಳು ಗತಿಸಲಿ ಎಂದು ಬಯಸುವದೆಂದರೆ ನೀವು ದೀರ್ಘಾಯುಷಿಗಳಾಗಿರಿ ಎಂದು ಬಯಸಿದಂತೆಯೇ ಸರಿ. ನೋಡುತ್ತಿರಿ, ಸ್ವರಾಜ್ಯ ಸಂಪಾದಿಸಿಕೊಂಡೇ ನಾವು ಹೋಗಬೇಕಾಗಿದೆ.

— ಬಾಪು

ಭಾರತೀಯ ರಾಜಕಾರಣದ
ಸಿಡಿಲ ಮರಿ

—ಪಾವೆಂ.

# ಡಾ. ರಾಮಮನೋಹರ ಲೋಹಿಯಾ

ಮಹಾಕವಿ ಶೆಲ್ಲಿಯನ್ನು ಕುರಿತು, "ಉಜ್ವಲ ರೆಕ್ಕೆಗಳನ್ನು ಗಗನದಲ್ಲಿ ವ್ಯರ್ಥವಾಗಿ ಬಡಿಯುತ್ತ ಹಾರುವ" ಹಕ್ಕಿಯೆಂದು **ಮ್ಯಾಥ್ಯು** ಆರ್ನಾಲ್ಡ್ ಹೇಳಿದ್ದಾನೆ. ಭಾರತದ ರಾಜಕೀಯ ಪ್ರಪಂಚದಲ್ಲಿ ಡಾ.ರಾಮಮನೋಹರ ಲೋಹಿಯಾರನ್ನು ಇದೇ ಬಗೆಯಾಗಿ ವರ್ಣಿಸಬಹುದು. ಶೆಲ್ಲಿಯಂತೆ ಲೋಹಿಯಾ ಕೂಡ ಓಜಸ್ವಿ; ಅವನಂತೆ ಇವರೂ ತಮ್ಮ ತೇಜಸ್ಸನ್ನು ಹೇಗೆ ವೆಚ್ಚ ಮಾಡಬೇಕೆಂದರಿಯದೆ ಯಾವಾಗಲೂ ಚಡಪಡಿಸುತ್ತಾರೆ; ಅವನಂತೆ ಇವರ ಬುದ್ಧಿಯೂ ಭಾವನೆಯ ರೆಕ್ಕೆಗಳನ್ನೇರಿ ಮೋಡಗಳ ಲೋಕದಲ್ಲಿ ವಿಹರಿಸುತ್ತದೆ. ಇಬ್ಬರೂ ಭೂಮಿಯ ಗಟ್ಟಿಯಾದ ನೆಲದಲ್ಲಿ ನಡೆಯಲು ಅರಿಯದ ಹಕ್ಕಿಗಳು.



ಲೋಹಿಯಾರ ಕಳಕಳಿಯನ್ನು ಯಾರೂ ಶಂಕಿಸಲಾರರು; ಆದರೆ ಅವರ ಕಾರ್ಯಕ್ರಮಗಳ ವಿವೇಕವನ್ನು ಲೋಕಾನುಭವವಿದ್ದವರಾರಿಗೂ ಒಪ್ಪಲು ಸಾಧ್ಯವಿಲ್ಲ. ಒಂದು ದಿನ ಅವರು ಪ್ರಜಾಸಮಾಜವಾದಿಗಳಿಂದ ಸಿಡಿದುಹೋಗಿ ತಮ್ಮದೇ ಸಮಾಜವಾದಿ ಪಕ್ಷವನ್ನು ಕಟ್ಟಿ ಏಳು ವರ್ಷಗಳೊಳಗೆ ಚುನಾವಣೆಗಳನ್ನು ಗೆದ್ದು ಅಧಿಕಾರಕ್ಕೆ ಬರುವೆವೆನ್ನುತ್ತಾರೆ. ಇನ್ನೊಂದು ದಿನ ಬ್ರಿಟಿಶ ಗವರ್ನರರ ಮೂರ್ತಿಗಳನ್ನು ಉದ್ಯಾನಗಳಿಂದಲೂ ಕೂಟಗಳಿಂದಲೂ ಕಿತ್ತು ಹಾಕಬೇಕೆಂದು ಸತ್ಯಾಗ್ರಹ ಹೂಡುತ್ತಾರೆ. ಮತ್ತೊಂದು ದಿನ ಹಿಂದೀ ರಾಷ್ಟ್ರಭಾಷೆಯಾಗದಿದ್ದರೆ ಬೇಡ, ಮೊದಲು ಇಂಗ್ಲೀಷನ್ನು ಉಚ್ಚಾಟನೆ ಮಾಡೋಣ ಎಂದು 'ಉಚ್ಚಾಟನಾ ದಿನ'ದ ಕರೆ ಕೊಡುತ್ತಾರೆ. ಸಾವಿರಾರು ತರುಣರು ಅವರ ಭಾವನಾತ್ಮಕ ಆದೇಶಕ್ಕೆ ಓಗೊಟ್ಟು ಸೆರೆಮನೆ ಕಂಡು ಬರುತ್ತಾರೆ. ಇಷ್ಟೆಲ್ಲ ಕೋಲಾಹಲದಿಂದ ಕೊನೆಗೆ ಬರುವುದು ಶೂನ್ಯ ಸಂಪಾದನೆ. ಆದರೆ ತಮ್ಮ ಇಂಥ ದೌರ್ಬಲ್ಯಗಳಿಂದಾಗಿಯೇ ಲೋಹಿಯಾ ಶೆಲ್ಲಿಯಂತೆ ಅತ್ಯಂತ ಆಕರ್ಷಕ ಮತ್ತು ಪ್ರೀತ್ಯಾಸ್ಪದ ವ್ಯಕ್ತಿಯಾಗಿದ್ದಾರೆ.

ಲೋಹಿಯಾರ ಬುದ್ಧಿ-ವೈಭವ ನಿಸ್ಸಂದಿಗ್ಧವಾದದ್ದು. ಅವರ ವಯಸ್ಸು ಬರಿ ೪೮ ಎಂದು ಹೇಳಿದರೆ ಆಶ್ಚರ್ಯವಾದೀತು. ಏಕೆಂದರೆ ನಾವು ಅವರನ್ನು ಕುರಿತು ಎಷ್ಟು ದಿವಸದಿಂದ ಎಷ್ಟೆಲ್ಲ ಕೇಳುತ್ತಿದ್ದೇವೆಂದರೆ ಅವರು ಇತರ ಕಾಂಗ್ರೆಸ್ ಸಮಾಜವಾದಿಗಳಂತೆ ೫೫ ರಿಂದ ೬೦ ರ ನಡುವಣವರೆಂದೇ ಕಲ್ಪಿಸಿಕೊಳ್ಳುತ್ತೇವೆ. ಅವರು ಹುಟ್ಟಿದ್ದು ೧೯೧೦ ರಲ್ಲಿ, ಉತ್ತರ ಪ್ರದೇಶದ ರಾಷ್ಟ್ರೀಯವಾದಿ ಮನೆತನದಲ್ಲಿ. ಆದರೆ ಅವರ ಪ್ರಗತಿ ವಿಲಕ್ಷಣವಾದುದು. ಅವರ ಶಿಕ್ಷಣ ಭಾರತದಲ್ಲಿ ಎಲ್ಲೆಲ್ಲಿಯೂ ನಡೆಯಿ

ತೆನ್ನಬೇಕು. ೧೫ ರಲ್ಲಿ ಮುಂಬೈಯಲ್ಲಿ ಮೆಟ್ರಿಕ್ ಪಾಸಾದರು; ಆ ಮೇಲೆ ಬನಾರಸ ಹಿಂದೂ ವಿಶ್ವವಿದ್ಯಾಲಯದಲ್ಲಿ ಇಂಟರ್‌ಆರ್ಟ್ಸ್ ಆದರು; ೧೯ ನೇ ವಯಸ್ಸಿನಲ್ಲಿ ಕಲಕತ್ತೆಯ ವಿದ್ಯಾಸಾಗರ ಕಾಲೇಜನಿಂದ ಸಾಹಿತ್ಯದಲ್ಲಿ ಆನರ್ಸ್ ಸಹಿತ ಬಿ.ಎ. ಉತ್ತೀರ್ಣರಾದರು. ಬರ್ಲಿನ್ ವಿಶ್ವವಿದ್ಯಾಲಯವು ಜಗತ್ತಿನ ಶ್ರೇಷ್ಠ ಮತ್ತು ದುರಾರಾಧ್ಯ ವಿಶ್ವವಿದ್ಯಾಲಯಗಳಲ್ಲೊಂದು. ಅಲ್ಲಿ ಲೋಹಿಯಾರವರು ಅರ್ಥಶಾಸ್ತ್ರದಲ್ಲಿ ಮೌಲಿಕ ಸಂಶೋಧನೆಗಳ ಮೂಲಕ ೨೨ ನೇ ವಯಸ್ಸಿನಲ್ಲಿ ಡಾಕ್ಟರೇಟ್ ಪಡೆದರು. ಗಾಂಧೀಜಿ ಲೋಹಿಯಾರನ್ನು ಅರ್ಧ ಹಾಸ್ಯ ಅರ್ಧ ಗಾಂಭೀರ್ಯದೊಡನೆ "ಲರ್ನೆಡ್ ಡಾಕ್ಟರ್"—ವಿದ್ವಾನ್ ಡಾಕ್ಟರ್ ಅನ್ನುತ್ತಿದ್ದರು. ಬರ್ಲಿನ್ ವಿಶ್ವವಿದ್ಯಾಲಯದಲ್ಲಿ ಪದವಿ ಗಳಿಸುವುದು ಎಷ್ಟು ಕಠಿನವೆಂದರಿತವರು ಲೋಹಿಯಾರ ವಿದ್ವತ್ತೆ ಬೇರೆ ಕೆಲ ವಿದೇಶಿ ಪದವೀಧರರ ಡಾಕ್ಟರೇಟುಗಳಂತೆ ಸುಖಾಸಾದಿತವಲ್ಲೆಂದು ಬಲ್ಲರು.

ಡಾ. ಲೋಹಿಯಾರ ಬಿರುಗಾಳಿಯಂಥ ರಾಜಕೀಯ ಜೀವನವೂ ಬಲು ಬೇಗನೆ ಪ್ರಾರಂಭವಾದದ್ದು. ೧೨ ನೇವಯಸ್ಸಿನಲ್ಲಿ ಅವರು ಕಾಂಗ್ರೆಸ್ಸಿನ ಅತ್ಯಂತ ಕೋಲಾಹಲದ ಅಧಿವೇಶಗಳಲ್ಲೊಂದಾದ ಗಯಾ ಕಾಂಗ್ರೆಸ್ಸಿಗೆ ಪ್ರತಿನಿಧಿಯಾಗಿ ಆರಿಸಿಹೋಗಿದ್ದರು. ಬರ್ಲಿನ್ನಿನಲ್ಲಿ ಡಾಕ್ಟರೇಟಿಗಾಗಿ ಅಧ್ಯಯನ ಮಾಡುತ್ತಿದ್ದಾಗಲೇ "ಲೀಗ್ ಆಫ್ ನೇಶನ್ಸ್" ಅಧಿವೇಶನದಲ್ಲಿ ಉತ್ಪಾತವೆಬ್ಬಿಸಲು ಯತ್ನಿಸಿದರು. ಜಿನೇವಾದಲ್ಲಿ ಸೇರಿದ್ದ ಈ ಅಧಿವೇಶನಕ್ಕೆ ಭಾರತದ ಪ್ರತಿನಿಧಿಯೆಂದು ಸಾಮ್ರಾಜ್ಯವಾದಿ ಸರಕಾರ ಬಿಕಾನೇರದ ಮಹಾರಾಜರನ್ನು ಕಳಿಸಿತ್ತು. ಲೋಹಿಯಾಗೆ ಇದು ಸೈರಿಸಲಿಲ್ಲ. ಅವರು ಜಿನೇವಾಕ್ಕೆ ಹೋದರು. ಲೀಗ್ ಆಫ್ ನೇಶನ್ಸ್ ಸಭೆ ಸೇರಿದಾಗ ಪ್ರೇಕ್ಷಕರ ಗ್ಯಾಲರಿಯಲ್ಲಿ ನಿಂತು "ಬಿಕಾನೇರ ಮಹಾರಾಜರು ಭಾರತದ ನಿಜವಾದ ಪ್ರತಿನಿಧಿಯಲ್ಲ" ಎಂದು ಕೂಗಿ ಕೂಗಿ ಹೇಳಿದರು; ಬ್ರಿಟನ್ನಿನ ಸೋಗನ್ನು ಬಯಲಿಗೆಳೆಯುವ ಕರಪತ್ರಗಳನ್ನು ಮುದ್ರಿಸಿ ಹಂಚಿದರು.

ಈ "ಅವಿವೇಕ"ಕ್ಕಾಗಿ ಡಾ. ಲೋಹಿಯಾಗೆ ಭಾರತಕ್ಕೆ ಮರಳಿದೊಡನೆ ಪ್ರತಿಫಲ ದೊರೆಯಿತು. ಯಾವುದೋ ಆರೋಪವನ್ನು ಸೃಷ್ಟಿಸಿ ಕಲಕತ್ತೆಯಲ್ಲಿ ಅವರನ್ನು ಬಂಧಿಸಲಾಯಿತು. ಆದರೆ ಲೋಹಿಯಾರ ಮೇಲೆ ಸೇಡು ತೀರಿಸಿಕೊಳ್ಳುವುದು ಅಷ್ಟು ಸುಲಭವಾಗಿರಲಿಲ್ಲ. ಅವರು ತಮ್ಮ ಪಕ್ಷದ ಪ್ರತಿಪಾದನೆಯನ್ನು ತಾವೇ ನ್ಯಾಯಸ್ಥಾನದಲ್ಲಿ ಮಾಡಿಕೊಂಡು ಕಾಯದೆ ಪಂಡಿತರಾದ ಸರಕಾರಿ ವಕೀಲರನ್ನು ಅಪ್ರತಿಭರಾಗಿ ಮಾಡಿದರು. ಚೀಫ್ ಪ್ರೆಸಿಡೆನ್ಸಿ ಮ್ಯಾಜಿಸ್ಟ್ರೇಟ ಸಿ. ಎಸ್. ರುಣು ಅವರು ಲೋಹಿಯಾರನ್ನು ಬಿಡುಗಡೆ ಮಾಡುತ್ತ, ಈ ಅರ್ಥಶಾಸ್ತ್ರ ತರುಣನ ಕಾಯದೆ ಜ್ಞಾನ ಮತ್ತು ಯುಕ್ತಿ ಕೌಶಲದ ಬಗ್ಗೆ ಆಶ್ಚರ್ಯ ವ್ಯಕ್ತಮಾಡಿ ಇವರು ಬ್ಯಾರಿಸ್ಟರರಾಗಬಯಸಿದ್ದರೆ ಅದರಲ್ಲಿಯೂ ಅಷ್ಟೇ ಯಶಸ್ವಿಯಾಗುತ್ತಿದ್ದರೆಂದು ಹೇಳಿದ್ದಾರೆ.

೧೯೩೪ ರಲ್ಲಿ ಪಾಟಣಾ ಕಾಂಗ್ರೆಸ್ಸಿನಲ್ಲಿ ಕಾಂಗ್ರೆಸ್ ಸಮಾಜವಾದಿ ಪಕ್ಷವನ್ನು ಸ್ಥಾಪಿಸಿದ ಪ್ರಮುಖರಲ್ಲಿ ಲೋಹಿಯಾ ಒಬ್ಬರು. ಭಾರತಕ್ಕೆ ಮರಳಿ ಒಂದೇ ವರ್ಷವಾಗಿದ್ದರೂ ಆಗಲೇ ಅವರು ಅಖಿಲಭಾರತ ನಾಯಕರಲ್ಲಿ ಒಬ್ಬರೆನಿಸಿದ್ದರು. ಕಾಂಗ್ರೆಸ್ಸಿನ ವಿದೇಶ ಸಂಪರ್ಕ ಶಾಖೆಯ ಕಾರ್ಯಭಾರವನ್ನೂ ಅವರು ಆಗಲೇ ವಹಿಸಿಕೊಂಡರು. ಆಗಿನ ಅವರ ಸಮಾಜವಾದಿ ಸಹೋದ್ಯೋಗಿಗಳಲ್ಲಿ ಈಗ ಯಾರೂ ತಮ್ಮ ಮೂಲ ಸಮಾಜವಾದಿ ಉತ್ಸಾಹವನ್ನುಳಿಸಿಕೊಂಡಿಲ್ಲ. ಜಯಪ್ರಕಾಶರು ಗಾಂಧೀವಾದಿಗಳಾಗಿ ರಾಜಕೀಯ ಸಂನ್ಯಾಸಗ್ರಹಣಮಾಡಿದ್ದಾರೆ. ಆಚಾರ್ಯ ನರೇಂದ್ರ ದೇವರು ಇಂದು ಉಳಿದಿಲ್ಲ. ಡಾ. ಸಂಪೂರ್ಣಾನಂದರು ಬಲಕ್ಕೆ ಸರಿದು ಉತ್ತರ ಪ್ರದೇಶದ ಮುಖ್ಯಮಂತ್ರಿಗಳಾಗಿದ್ದಾರೆ. ಮೀನೂ ಮಸಾನಿ ಸಮಾಜವಾದಕ್ಕೇ ಶರಣು ಹೊಡೆದು "ಖಾಸಗಿ ವಾಣಿಜ್ಯ"ದ ಪಕ್ಷಪಾತಿಗಳಾಗಿದ್ದಾರೆ. ಅಶೋಕ ಮೆಹತಾ ಸಮಾಜವಾದಕ್ಕೂ ಕಾಂಗ್ರೆಸ್ಸಿಗೂ ನಡುವೆ ಅಂತರದಲ್ಲಿ ನಿಂತಿದ್ದಾರೆ. ಲೋಹಿಯಾ ಒಬ್ಬರೇ ತಮ್ಮದೇ ಸಮಾಜವಾದಿ ಪಥದಲ್ಲಿ ನಡೆಯುತ್ತಿದ್ದಾರೆ.

೧೯೪೨ರ "ಚಲೇಜಾವ್" ಚಳವಳಿ ಲೋಹಿಯಾರಿಗೆ ಇಷ್ಟವಾದ ಸಾಹಸೋದ್ಯವಕ್ಕೆ ಸಂಧಿ ಒದಗಿಸಿತು. ಜಯಪ್ರಕಾಶರೊಡನೆ ಅವರು ಭೂಗತ ಚಳವಳಿಯನ್ನು ಸಂಘಟಿಸಿದರು. ಮುಂಬಯಿ ಕಲಕತ್ತೆಗಳಲ್ಲಿ ಗುಪ್ತ ರೇಡಿಯೋ ಕೇಂದ್ರಗಳನ್ನು ಸ್ಥಾಪಿಸಿ ಚಳವಳಿಗೆ ನಿರ್ದೇಶನವನ್ನು ಕೊಟ್ಟರು. "ಮಾಡು ಇಲ್ಲವೆ ಮಡಿ" ಪತ್ರಿಕೆಯನ್ನು ಹೊರಡಿಸಿದರು. ಕೊನೆಗೆ ಜಯಪ್ರಕಾಶರು ಸೆರೆ ಸಿಕ್ಕರೂ ಲೋಹಿಯಾ ಸಿಕ್ಕಿಬೀಳಲಿಲ್ಲ. ಹಜಾರಿಬಾಗ ಸೆರೆಮನೆಯಿಂದ ಕಾವಲುಗಾರರ ಕಣ್ಣಿಗೆ ಮಣ್ಣೆರಚಿ ಜಯಪ್ರಕಾಶರು ನಟ್ಟಿರುಳಲ್ಲಿ ಪರಾರಿಯಾಗಿ ನೇಪಾಳದ ಹನುಮಾನ್‌ನಗರದಲ್ಲಿ ಲೋಹಿಯಾರೊಡನೆ ಸೇರಿಕೊಂಡರು. ಅಲ್ಲಿ ಚಲೇಜಾವ್ ಚಳವಳಿಯ ಸ್ವಯಂ ಸೇವಕರಿಗೆ ಸಶಸ್ತ್ರ ತರಬೇತಿಕೊಡಲು ಸೈನಿಕಶಿಕ್ಷಣ ಶಾಲೆಯನ್ನು ಇಬ್ಬರೂ ಸೇರಿ ಸಂಘಟಿಸಿದರು.

ಬ್ರಿಟಿಶ ಸರಕಾರದ ಒತ್ತಾಯದಿಂದ ಒಂದು ದಿನ ಅನೇಕ ಸಹೋದ್ಯೋಗಿಗಳೊಡನೆ ಈ ಕ್ರಾಂತಿಕಾರಿಗಳನ್ನು ನೇಪಾಳ ಸರಕಾರ ಸೆರೆಹಿಡಿದು ದುರ್ಭೇದ್ಯ ಕಾರಾಗೃಹದಲ್ಲಿ ಸೇರಿಸಿತು. ಆದರೆ ಬಹಳ ದಿನ ಅವರು ಅಲ್ಲಿ ಉಳಿಯಲಿಲ್ಲ. ಒಂದು ಕಾರಿರುಳಲ್ಲಿ ಸೆರೆಮನೆಯ ಎಚ್ಚರಿಕೆಯ ಗಂಟೆ ಹುಚ್ಚೆದ್ದು ಬಾರಿಸತೊಡಗಿತು. ಸ್ತಬ್ಧ ಹಿಮಾಲಯವೂ ಸೆರೆಮನೆಯ ಕಲ್ಲಿನ ಗೋಡೆಗಳೂ ನಡುಗಿದವು. ಸೆರೆಮನೆಯ ಮಹಾದ್ವಾರ ಒಡೆಯಿತು. ಸ್ವಾತಂತ್ರ್ಯಸೈನಿಕರೆಲ್ಲ ಪಾರಾಗಿ ಹೋದರು.

ಲೋಹಿಯಾರನ್ನು ಹಿಡಿಯಲು ಬ್ರಿಟಿಶ ಸರಕಾರ ಆಕಾಶಪಾತಾಳ ಒಂದು ಮಾಡಿತು. ೧೯೪೪ ಜನವರಿಯಲ್ಲಿ ಅವರನ್ನು ಮುಂಬಯಿಯ ಒಂದು ಗುಪ್ತ ರೇಡಿಯೋ ಕೇಂದ್ರದಲ್ಲಿ ಪೋಲೀಸರು ಹಿಡಿದು ಬೇಡಿ ತೊಡಿಸಿದರು. ಅವರ ಮೇಲೆ ಸರಕಾರದ ಸಿಟ್ಟು ಅಷ್ಟಿಷ್ಟಲ್ಲ. ಸಾದಾ ಸೆರೆಮನೆಯಲ್ಲಿ ಅವರನ್ನಿರಿಸುವ ಧೈರ್ಯ ಸಾಲದೆ ಸದಾಕಾಲ ಬೇಡಿ ತೊಡಿಸಿಯೇ ಲಾಹೋರ ಮತ್ತು ಆಗ್ರಾ ಕಿಲ್ಲೆಗಳ ಕತ್ತಲು ಕೋಣೆಗಳಲ್ಲಿ ಅವರನ್ನಿಡಲಾಯಿತು. ಆರು ತಿಂಗಳ ಕಾಲ ಅವರಿಗೆ ನಿರಂತರ ಚಿತ್ರಹಿಂಸೆ ಕೊಟ್ಟರು. ಆ ಅವಧಿಯಲ್ಲಿ ಒಂದು ಗಳಿಗೆಯೂ ಲೋಹಿಯಾರಿಗೆ ನಿದ್ದೆ ಮಾಡಲು ಬಿಡಲಿಲ್ಲ. ಇಷ್ಟಾದರೂ ೧೯೪೬ರಲ್ಲಿ ಬಿಡುಗಡೆ ಹೊಂದಿದಾಗ ಅವರು ಹಸನ್ಮುಖಿಯಾಗಿಯೇ ಹೊರಬಂದರು.

ಡಾ. ಲೋಹಿಯಾ ಇಂಥ ಸಹಿಂಸಕ ಕ್ರಾಂತಿಕಾರಿಯಾಗಿದ್ದರೂ ಕ್ರಾಂತಿಕಾರಿಯಂತೆ ಕಾಣಿಸುವುದಿಲ್ಲ. ಅವರು ತುಂಬ ಆತ್ಮೀಯ ಸ್ವಭಾವದ ಮನುಷ್ಯ. ಇತರರ ದೌರ್ಬಲ್ಯಗಳನ್ನು ಅವರು ದಯೆಯಿಂದ ಸಹಿಸಬಲ್ಲರು. ಅವರು ಸಿಗರೇಟ್ ಸೇದುವುದಿಲ್ಲ; ಆದರೆ ನಿಮ್ಮ ಸಿಗರೇಟ್ ಚಟವನ್ನು ಅವರು ಖಂಡಿಸುವುದಿಲ್ಲ. ಅವರು ಸೈರಿಸಲಾರದ ಒಂದು ಸಂಗತಿಯೆಂದರೆ ಮಿಥ್ಯಾದಂಭ. ಎಲ್ಲ ವಿಧದ ದಂಭದ ಮೇಲೆ ಅವರ ಗದೆ ಕಠೋರವಾಗಿ ಎರಗುತ್ತದೆ. ಅವರ ಚುರುಕು ನಾಲಗೆಯ ವ್ಯಂಗ್ಯ ಆಗ ನಿರ್ದಯ ಅಸ್ತ್ರವಾಗುತ್ತದೆ. ತಮ್ಮ ಹೆಂಡಂದಿರನ್ನು "ಮೊಬೈಲ್ ಜುಯೆಲರಿ ಮಾರ್ಟ್" ಮಾಡಿಟ್ಟು ಕಮ್ಯುನಿಜಂ ಉಪದೇಶಿಸುವವರನ್ನು, ಸಭೆಯಲ್ಲಿ ಸರಕಾರದ ವಿರುದ್ಧ ಅಗ್ಗದ ಕಿಡಿಗಳನ್ನು ಕಾರಿ ಮುಚ್ಚಂಜೆಯ ಮಂದಪ್ರಕಾಶದಲ್ಲಿ ಅದು ಮಸಿಯಾಗುತ್ತಿರುವಾಗ ತಮ್ಮ ಸ್ವಾರ್ಥಕ್ಕೆ ಸಾವಿರಾರು ಕೂಲಿಕಾರರನ್ನು ಬಲಿಗೊಟ್ಟು ತಾವು ಮೋಟಾರು ಕಾರಿನಲ್ಲಿ ಪಾರಾಗಿ ಹೋಗುವವರನ್ನು ಅವರು ಸರ್ವಥಾ ಸಹಿಸಲಾರರು. ಇವರೇ ಪಕ್ಕಾ ದೇಶದ್ರೋಹಿಗಳೆಂದು ಡಾ. ಲೋಹಿಯಾರ ಮತ.

ಲೋಹಿಯಾರ ಕಹಿ ನಾಲಗೆಯನ್ನು ಯಾರೂ ಮೆಚ್ಚುವುದಿಲ್ಲ. ಅವರ ರಾಜಕೀಯ ರೀತಿ ನೀತಿಗಳು ಬಹಳ ಟೀಕೆಗೆ ಗುರಿಯಾಗಿವೆ. ಅವರು ದೂರದರ್ಶಿಗಳೆಂದು ಹೇಳುವುದು ಕಷ್ಟ. ಆದರೆ ಅವರಲ್ಲಿ ವೈಯಕ್ತಿಕ ಸ್ವಾರ್ಥದ ಲೇಶವೂ ಇಲ್ಲೆಂದು ಶತ್ರುಗಳೂ ಒಪ್ಪಬೇಕು.

ಡಾ ಲೋಹಿಯಾ "ಅಲಖನಿರಂಜನ." ಅವರಿಗೆ ತಂದೆಯಿಲ್ಲ, ತಾಯಿಯಿಲ್ಲ; ಅಣ್ಣ ತಮ್ಮ ಅಕ್ಕ ತಂಗಿ ಇಲ್ಲ; ಸ್ವಂತ ಭೂಮಿಕಾಣಿ ಮನೆ

ಮಾರು ಒಂದೂ ಕೇಳಬೇಡಿ. ಸಹಾಯವಿದ್ದರೂ ಅವರಿಗೆ ಸ್ವಂತ ಸೊತ್ತು ಇಲ್ಲ. ಆಸೇತು ಹಿಮಾಚಲದಲ್ಲಿ ಅವರನ್ನು ಮೆಚ್ಚುವ ನೂರಾರು ಜನರೇ ಅವರ ಅನ್ನವಸ್ತ್ರದ ಚಿಂತೆ ಮಾಡುತ್ತಾರಲ್ಲದೆ ಅವರಲ್ಲ.

ಒಮ್ಮೆ ಅವರು ಅತ್ಯಂತ ಅಸ್ವಸ್ಥ ಸ್ಥಿತಿಯಲ್ಲಿ ಕಲಕತ್ತೆಗೆ ಹೊರಟಿದ್ದರು. ಚಳಿಗಾಲ. ದಾರಿಯಲ್ಲಿ ಅವರಿಗೆ ಒಬ್ಬ ಬಡ ಕೆಲಸಗಾರ ಭೆಟ್ಟಿಯಾದ. ಅವನಿಗೆ ತಮ್ಮಲ್ಲಿದ್ದ ಎಲ್ಲ ಬೆಚ್ಚನ್ನ ಬಟ್ಟೆಗಳನ್ನು ಕೊಟ್ಟು ಚಳಿಯಲ್ಲಿ ಹಾಗೇ ನಡುಗುತ್ತ ಕಲಕತ್ತೆಗೆ ಬಂದರು. ಕಲಕತ್ತೆಯಲ್ಲಿ ಅವರ ಭಕ್ತ ಬಾಲಕೃಷ್ಣ ಗುಪ್ತರು ಮತ್ತೆ ಅವರಿಗೆ ಉಣ್ಣೆಯ ಬಟ್ಟೆಗಳನ್ನು ಕೊಟ್ಟು ಅವರನ್ನು ಆರೈಕೆ ಮಾಡಿ ಗುಣಪಡಿಸಬೇಕಾಯಿತು. ಸೌಖ್ಯವಾಯಿತೋ, ಮತ್ತೆ ಹೊರಟರು ಲೋಹಿಯಾ. ಅವರ ಆರೈಕೆ ಮಾಡಿದ ಗುಪ್ತರ ತಾಯಿ, ಮತ್ತು ಮಗಳು ಕಣ್ಣೀರಿನೊಡನೆ ಅವರನ್ನು ಬೀಳ್ಕೊಟ್ಟರು. ಅವರಾರೋ ಇವರಾರೋ. ಆದರೆ ತಮ್ಮ ಸಂಪರ್ಕ ಬಂದವರಲ್ಲಿ ಅಕೃತ್ರಿಮ ಪ್ರೀತಿಯನ್ನು ಜಾಗೃತಗೊಳಿಸುವ ಮಂತ್ರಸಿದ್ಧಿ ಲೋಹಿಯಾರಲ್ಲಿದೆ. "ಇವರೆಲ್ಲ ನನ್ನಂಥ ನಾಲಾಯಕ ಮನುಷ್ಯನನ್ನು ಇಷ್ಟೇಕೆ ಪ್ರೀತಿಸುತ್ತಾರೆ?" ಎಂದು ಲೋಹಿಯಾ ಯಾವಾಗಲೂ ಅಚ್ಚರಿಪಟ್ಟುಕೊಳ್ಳುತ್ತಾರೆ.

ಲೋಹಿಯಾರ ಈ ನಿಃಸ್ವಾರ್ಥ ನಿರ್ಲಿಪ್ತ ಮಧುರ ವ್ಯಕ್ತಿತ್ವವೇ ಗಾಂಧೀಜಿ ಮತ್ತು ನೆಹರು ಅವರನ್ನೂ ಮುಗ್ಧಗೊಳಿಸಿತ್ತು. ಸ್ವಾತಂತ್ರ್ಯ ಚಳವಳಿಯ ಬಹುಭಾಗ ದಿನಗಳನ್ನು ಲೋಹಿಯಾ ಅಲಹಾಬಾದಿನಲ್ಲಿ ನೆಹರೂ ಪರಿವಾರದೊಡನೆಯೇ ಕಳೆದರು. ಆ ಸಮಯದಲ್ಲಿ ನೆಹರೂ-ಲೋಹಿಯಾರಲ್ಲಿ ಒಂದು ಸ್ನೇಹಬಂಧನ ಬೆಳೆದು ಬಂತು. ಈ ಸ್ನೇಹ ಇಂದಿಗೂ ಉಳಿದಿದ್ದರೂ ಇಬ್ಬರ ದಾರಿ ಮಾತ್ರ ಬೇರೆಯಾಗಿದೆ.

ಜವಾಹರರು ನಡುಗಾಲ ಸರಕಾರದಲ್ಲಿ ಸೇರಿದ್ದು ಲೋಹಿಯಾರಿಗೆ ಸರಿಬರಲಿಲ್ಲ. ಅವರನ್ನು ಒಲಿಸಿಕೊಳ್ಳಬೇಕೆಂದು ಒಂದು ದಿನ ಜವಾಹರರು ದಿಲ್ಲಿಯಲ್ಲಿ ಐದನೇ ಮಹಡಿಯಲ್ಲಿದ್ದ "ಜನತಾ" ಪತ್ರಿಕೆಯ ಕಚೇರಿಗೆ "ದಾಳಿ" ಇಟ್ಟು ರಾಮಮನೋಹರರನ್ನು ಹಿಡಿದು ಆರ್. ಕೆ. ನೆಹರು ಅವರ ಮನೆಗೆ ಎಳೆದುಕೊಂಡು ಹೋದರು. ತಾಸುಗಟ್ಟಳೆ ಇಬ್ಬರಲ್ಲಿ ತರ್ಕವಾಯಿತು. ಲೋಹಿಯಾರ ನಿರ್ಧಾರ ಕದಲಲಿಲ್ಲ. ಮಾತುಕತೆ ವ್ಯರ್ಥವಾಯಿತು. ಇದರ ನಂತರ ಜವಾಹರರಿಗೂ ಲೋಹಿಯಾರಿಗೂ ಮಹತ್ವದ ರಾಜಕೀಯ ಮಾತುಕತೆ ಆಗಿಲ್ಲ.

ಆದರೂ ನೆಹರೂ ಮನೆತನದಲ್ಲಿ ಲೋಹಿಯಾರ ಮೇಲಿನ ಪ್ರೀತಿ ಹಾಗೇ ಉಳಿದುಬಂದಿದೆ. ಭಾರತ ಸ್ವತಂತ್ರವಾದಮೇಲೆ ನೇಪಾಳದ ರಾಯಭಾರಿಗೃಹದ ಮುಂದೆ ಲೋಹಿಯಾ ಮತಪ್ರದರ್ಶನ ಮಾಡಿದಾಗ ಅವರನ್ನು ಬಂಧಿಸುವ ದುಃಖದಾಯಕ ಕರ್ತವ್ಯ ಪ್ರಧಾನಮಂತ್ರಿಗಳ ಪಾಲಿಗೆ ಬಂತು. ಅವರು ಸೆರೆಯಲ್ಲಿದ್ದಾಗ ಇಂದಿರಾ ಗಾಂಧಿ ಅವರಿಗೆ ಮಾವಿನಹಣ್ಣುಗಳನ್ನು ಕಳಿಸಿದ್ದರು.

ಗಾಂಧೀಜಿ, ನೆಹರು ಇಬ್ಬರಿಗೂ ಲೋಹಿಯಾರ ಮೇಲೆ ಅಸೀಮ ವಿಶ್ವಾಸವಿತ್ತು. ಚೀನದ ಮಾರ್ಶಲ್ ಚಿಯಾಂಗರು ರಾಜಾತಿಥಿಯಾಗಿ ಭಾರತಕ್ಕೆ ಭೆಟ್ಟಿ ಕೊಟ್ಟಾಗ ಗಾಂಧೀಜಿ ಚಿಯಾಂಗರಿಗೆ ವರ್ಧಾಕ್ಕೆ ಬರಲು ಆಮಂತ್ರಣವಿತ್ತಿದ್ದರು. ಆದರೆ ವೈಸರಾಯ ಲಿನ್‌ಲಿತ್‌ಗೋರಿಗೆ ಚಿಯಾಂಗರು ವರ್ಧಾಕ್ಕೆ ಹೋಗುವುದು ಬೇಕಾಗಿರಲಿಲ್ಲ. ಚಿಯಾಂಗರಿಗೆ ಉಭಯ ಸಂಕಟ ಬಂತು. ಆ ಸಮಯದಲ್ಲಿ ಭಾರತದ ಸ್ವಾತಂತ್ರ್ಯಕ್ಕೆ ಚೀನದ ಸಹಾನುಭೂತಿ ಸಂಪಾದನೆ ಮಾಡಲು ಗಾಂಧೀಜಿಯೇ ಕಲಕತ್ತೆಯಲ್ಲಿ ಚಿಯಾಂಗರನ್ನು ಕಾಣಬೇಕೆಂದು ಜವಾಹರರ ಅಭಿಮತವಿತ್ತು. ಇದಕ್ಕಾಗಿ ಅವರು ಲೋಹಿಯಾರನ್ನು ಪತ್ರದೊಡನೆ ವರ್ಧಾಕ್ಕೆ ಕಳಿಸಿದರು. ಗಾಂಧೀಜಿಯ ಮನವೊಲಿಸಲು ಲೋಹಿಯಾ ಸಮರ್ಥರಾದರು. ಗಾಂಧೀಜಿ ಕಲಕತ್ತೆಗೆ ಬಂದರು.

ಕಾವ್ಯ—ನಾಟಕ, ನೃತ್ಯ-ಗಾನಗಳೆಂದರೆ ಲೋಹಿಯಾಗೆ ಪ್ರಾಣ. ಜಗತ್ತಿನ ಉತ್ತಮ ಪತ್ರಿಕೆಗಳನ್ನು ಅವರು ಓದುತ್ತಾರೆ. ಹಿಂದಿ,

ಉರ್ದು, ಬಂಗಾಲಿ, ಇಂಗ್ಲಿಷ್, ಫ್ರೆಂಚ್, ಜರ್ಮನ್ ಭಾಷೆಗಳಲ್ಲಿ ನಿರರ್ಗಳವಾಗಿ ಮಾತಾಡಬಲ್ಲರು. ವಿದೇಶಗಳಲ್ಲಿಯೂ ಅವರಿಗೆ ಪ್ರಸಿದ್ಧ ಪುರುಷರ ನಿಕಟ ಮೈತ್ರಿಯಿದೆ. ಟ್ಯುನೀಶಿಯದ ಅಧ್ಯಕ್ಷ ಹಬೀಬ ಬುಗಾಬಾ ಅವರ ಅತಿಥಿಗಳಾಗಿ ಕಲಕತ್ತೆಯಲ್ಲಿದ್ದರು. ಬ್ರಹ್ಮದೇಶದ ಉಪ-ಪ್ರಧಾನಮಂತ್ರಿ ಉ ಬಾ, ಯುಗೋಸ್ಲಾವಿಯದ ಹಿಂದಿನ ಉಪ ಪ್ರಧಾನಮಂತ್ರಿ ಜಿಲಾಸ್ ಇವರೂ ಲೋಹಿಯಾರ ಮಿತ್ರರೇ.

ಲೋಹಿಯಾ ಇದುವರೆಗೂ ನಾರಿಯರ ಪ್ರೇಮ ಪಾಶಗಳಿಂದ ತಪ್ಪಿಸಿಕೊಂಡು ಉಳಿದಿದ್ದಾರೆ. ಒಂದು ಕಾಲದಲ್ಲಿ ಅರುಣಾ ಅಸಫ ಅಲಿಯವರ ತಂಗಿ ಪೂರ್ಣಿಮಾ ಬ್ಯಾನರ್ಜಿಯೊಡನೆ ಅವರ ಮದುವೆಯಾಗಲಿದೆಯೆಂದು ಸುದ್ದಿ ಹಬ್ಬಿತ್ತು. ಪೂರ್ಣಿಮಾ ಮೊದಲನೇ ಗಂಡನೊಡನೆ ವಿವಾಹ ವಿಚ್ಛೇದ ಮಾಡಿಕೊಂಡಿದ್ದಳು. ಆದರೆ ಲೋಹಿಯಾ ಈ ವಿಷಯದಲ್ಲಿ ವೈರಾಗ್ಯ ತಳೆದುದರಿಂದ ಈ ಸಂಬಂಧ ಕೂಡಿ ಬರಲಿಲ್ಲ. ಪೂರ್ಣಿಮಾ ಉತ್ತರ ಪ್ರದೇಶದ ಪ್ರಸಿದ್ಧ ಕಾಂಗ್ರೆಸ್ಸಿಗರಲ್ಲೊಬ್ಬಳಾಗಿದ್ದಳು, ಅತ್ಯಂತ ಉಚ್ಚ ಶಿಕ್ಷಣ ಪಡೆದವಳಾಗಿದ್ದಳು. ಆದರೆ ವಿರಕ್ತ ಲೋಹಿಯಾರ ವಿರಕ್ತಿಯನ್ನು ನಿವಾರಿಸಲು ಅವಳಿಂದಾಗಲಿಲ್ಲ. ಅವಳು ಕೆಲ ಕಾಲ ಹಿಂದೆ ತೀರಿಕೊಂಡಳು.

ಬಹುಶಃ ಲೋಹಿಯಾರ ಈ ನಿಃಸ್ವಾರ್ಥತೆ, ಅಕಿಂಚನತೆಗಳೇ ಅವರ ಸ್ವಭಾವದ ವಿಲಕ್ಷಣ ಬೇಜವಾಬ್ದಾರಿತನಕ್ಕೆ ಕಾರಣವಾಗಿವೆಯೇನೋ. ಅವರ ಜೀವ ಯಾವುದೋ ಅಸ್ಫುಟ ಧ್ಯೇಯದ ಸಿದ್ಧಿಗಾಗಿ ಸದಾ ತುಡಿಯುತ್ತಿರಬೇಕು. ಅದೊಂದು ವಿದ್ಯುದ್ಗರ್ಭಿತ ಮೇಘ. ಅದರ ವಿದ್ಯುತ್ತಿನ ಶಕ್ತಿ ಅಪರಿಮಿತ. ಆದರೆ ಆ ವಿದ್ಯುತ್ತನ್ನು ಪ್ರಯೋಜನಕ್ಕೆ ತಿರುಗಿಸಬಹುದಾದ ವ್ಯವಹಾರಿಕತೆಯ ತಂತಿ ಇಲ್ಲದುದರಿಂದ ಅದು ಒಮ್ಮೆ ಅಲ್ಲಿ ಹೊಳೆದು ಕಣ್ಣು ಕುಕ್ಕಿಸುತ್ತದೆ, ಒಮ್ಮೆ ಇಲ್ಲಿ ಗುಡುಗಿ ನಡುಗಿಸುತ್ತದೆ. ಒಮ್ಮೆ ಬೇರೊಂದೆಡೆ ಸಿಡಿಲಾಗಿ ಬಡಿಯುತ್ತದೆ. ಆದ್ದರಿಂದಲೇ ಸ್ವಾತಂತ್ರ್ಯ ದೊರೆತ ನಂತರವೂ ಅವರು ಒಂದು ಸೆರೆಮನೆಯಿಂದ ಹೊರಬಂದರೆ ಇನ್ನೊಂದರ ದಾರಿ ಹಿಡಿಯುತ್ತಿದ್ದಾರೆ. ಸ್ವತಂತ್ರ ಭಾರತದಲ್ಲಿ ಅವರಷ್ಟು ಸಲ "ಸತ್ಯಾಗ್ರಹ" ಮಾಡಿ ಸೆರೆಮನೆಗೆ ಹೋದ ಪ್ರಮುಖರೊಬ್ಬರಿರಲಾರ.



## ಅವನಿಗೆ ಅಣ್ಣ ಬೇಕಂತೆ

" ಮಗೂ, ನಿನಗೊಬ್ಬ ತಂಗಿ ಬಂದಿದ್ದಾಳೆ '' ಎಂದು ಐದು ವರ್ಷದ ಕಿಟ್ಟಿಗೆ ತಂದೆ ಅದೇ ಹುಟ್ಟಿದ ಮಗುವನ್ನು ತೋರಿಸಿ ಹೇಳಿದರು.

ಕಿಟ್ಟಿ ಸಂತೋಷ ವ್ಯಕ್ತಮಾಡುವ ಬದಲು ಮುಖ ಸೊಟ್ಟಮಾಡಿ ಹೇಳಿದ: " ತಂಗಿ ಬೇಡಪ್ಪಾ ನನಗೆ. ಅಮ್ಮ ನನಗೆ ಒಬ್ಬ ದೊಡ್ಡಣ್ಣನ್ನ ಹಡೆದು ಕೊಡ್ತಾಳು ಅಂತ ಆಸೆ ಹಿಡಕೊಂಡಿದ್ದೆ ! ''

## ಉದ್ದೇಶ

ಎಂಭತ್ತು ವರ್ಷ ದಾಟಿದ ಒಬ್ಬ ಧರ್ಮಿಷ್ಠನಾದ ಶ್ರೀಮಂತನನ್ನು ಯಾರೋ ಒಬ್ಬರು ಕೇಳಿದರು: " ನಿಮಗೆ ದೀರ್ಘಾಯುಷ್ಯವನ್ನು ದೇವರು ಏತಕ್ಕಾಗಿ ಕರುಣಿಸಿದನೆನ್ನುತ್ತೀರಿ ? ''

" ನನಗೆ ? '' ಕೇಳಿದರಾ ಶ್ರೀಮಂತರು. " ನನ್ನ ಮಕ್ಕಳ ಸಹನ ಶಕ್ತಿಯನ್ನು ಪರೀಕ್ಷಿಸುವ ಸಲುವಾಗಿಯೇ ಎಂದು ತೋರುತ್ತದೆ. ''

# ಗುಬ್ಬಿಯ ಭಾಗ್ಯ

ವಿ. ಜಿ. ಭಟ್ಟ



ಒಂದು ದಿನ, ಗರುಡ, ನವಿಲು, ಹದ್ದು, ಕಾಗೆ ಮುಂತಾದ ಹಕ್ಕಿಗಳೆಲ್ಲ ಊರ ಹೊರಗಿನ ಕೊಳ್ಳದ ಬಳಿ ಸೇರಿ ಹೀಗೇ ಹರಟೆ ಹೊಡೆಯುತ್ತಿದ್ದವು. ನವಿಲಿನ ಬಣ್ಣ ಬಣ್ಣದ ಸೋಗೆಯನ್ನು ಕಾಗೆ ಬಣ್ಣಿಸಿತು. ಗರುಡನ ಗಾಂಭೀರ್ಯ ಸಾಮರ್ಥ್ಯಗಳನ್ನು ಗಿಳಿಯು ಹೊಗಳಿತು. ಹದ್ದಿನ ಬಾಯಿಯ ಪರಿಮಳವನ್ನು ಬಕಪಕ್ಷಿಯು ಮನವಾರೆ ಮೆಚ್ಚಿತು. ಹೀಗೆ ಎಲ್ಲವೂ ಒಂದನ್ನೊಂದು ಹೊಗಳುವದನ್ನು ಗುಬ್ಬಿಯು ಕಣ್ಣು ಬಿಟ್ಟು ನೋಡುತ್ತ ತೆಪ್ಪಗೆ ಕುಳಿತುಕೊಂಡಿತು. ಪಾಪ, ಅದನ್ನು ಬಣ್ಣಿಸುವವರಾರು ?

ಆ ಹಕ್ಕಿಗಳ ಮಾತನ್ನೆಲ್ಲ ಕಣ್ಣು ಮುಚ್ಚಿ ಕೇಳುತ್ತಿದ್ದ ಗೂಗೆಯು ನಕ್ಕು ಹೇಳಿತು: "ಅಯ್ಯಾ ಪಂಡಿತರೇ, ನೀವು ಹೇಳುವದೆಲ್ಲ ನಿಜ. ಆದರೆ ಮನುಷ್ಯನ ಮನೆಯೊಳಗೆ ನೀವು ಯಾರಾದರೂ ಪ್ರವೇಶಿಸುತ್ತೀರಾ ? ಅಲ್ಲಿ ಗೂಡು ಕಟ್ಟುತ್ತೀರಾ? ಹಾರಾಡಿ ಅಲ್ಲಿ ಬಿದ್ದಿರುವ ನುಚ್ಚು ಆರಿಸಿ ತಿನ್ನುವ ಭಾಗ್ಯ ನಿಮ್ಮಲ್ಲಿ ಯಾರಿಗಿದೆ ? "

ಹಕ್ಕಿಗಳ ದೃಷ್ಟಿ ಥಟ್ಟನೇ ಗುಬ್ಬಿಯ ಕಡೆಗೆ ತಿರುಗಿತು. ಒಮ್ಮೆಲೇ ಎಲ್ಲವೂ ತನ್ನನ್ನು ದಿಟ್ಟಿಸುವದನ್ನು ಕಂಡು ಗುಬ್ಬಿ ಹೆದರಿ ನಡುಗಿತು.

" ಹೌದಲ್ಲಾ! ಈ ಗುಬ್ಬಿಯ ಭಾಗ್ಯ ನಮ್ಮಲ್ಲಿ ಯಾರಿಗೂ ಇಲ್ಲವಲ್ಲ. ಗಿಳಿಯೇನೋ ಮಾನವನ ಪಂಜರದಲ್ಲಿ ಸಿಕ್ಕುಬಿದ್ದು ಏನೇನೋ ಹಲುಬುವದುಂಟು. ಆದರೆ ಮನುಷ್ಯನ ಮನೆಯಲ್ಲಿ ಗೂಡು ಕಟ್ಟಿ ಬಾಳುವ ಪುಣ್ಯ ಈ ಗುಬ್ಬಿಗೆ ಮಾತ್ರ. ನಾವು ಯಾರೂ ಮಾಡದ ಕೆಲಸವನ್ನು ಈ ಪುಟಾಣಿ ಗುಬ್ಬಿ ಮಾಡುವದು ಸರಿಯೇ ? ಮನುಷ್ಯನು ನಮಗಾರಿಗೂ ತನ್ನ ಮನೆಯಲ್ಲಿ ಗೂಡು ಕಟ್ಟಲು ಬಿಡುವದಿಲ್ಲ. ಇದನ್ನು ತಿಳಿದೂ ತಿಳಿದೂ ಅಂಜುಬುರುಕ ಗುಬ್ಬಿಯು ಮನುಷ್ಯನ ಹತ್ತಿರ ಹೋಗಿರುವದು ನಮಗೆಲ್ಲ ಅವಮಾನ ಮಾಡಿದಂತಲ್ಲವೇ ? "

ಹೀಗೆ ಇತರ ಹಕ್ಕಿಗಳು ಬಿಸಿ ಬಿಸಿ ವಿಚಾರ ಮಾಡುತ್ತಿರುವಾಗ ಗುಬ್ಬಿಯು ಮೆಲ್ಲನೆ ಜಾರಿಕೊಂಡಿತು. ತನ್ನ 'ಗೂಡು' ಸೇರಲು ಹೊರಟ ಅದನ್ನು ಹದ್ದು ಕಾಗೆಗಳೆಲ್ಲ ಬೆನ್ನಟ್ಟಿದವು.

ಮಾಡಿನ ಸಂದಿಯೊಳಗಿಂದ ಗುಬ್ಬಿಯು ಮನೆಯೊಳಗೆ ಹೊಕ್ಕು ಪಾರಾಯಿತು. ಅದನ್ನು ಬೆನ್ನಟ್ಟಿ ಬಂದ ಹದ್ದು ಕಾಗೆಗಳು ಬಾಗಿಲಲ್ಲಿ ಮನುಷ್ಯನನ್ನು ಕಂಡು ಮರಳಿದವು.

" ಮನುಷ್ಯನ ಹತ್ತರ ಬಂದೂಕು ಇರದಿದ್ದರೆ ನೋಡುತ್ತಿದ್ದೆ ! " ಅಂದಿತು ಕಾಗೆ.

ಹಕ್ಕಿಗಳ ಸಭೆಗೆ ಗುಬ್ಬಿಯು ಮುಂದೆ ಹೋಗಲೇ ಇಲ್ಲ. ಬಂದೂಕು ನೇತಾಡುವ ಗೋಡೆಯ ತುದಿಗೇ ಅದು ಗೂಡಿನಲ್ಲಿ ಬೆಚ್ಚಗೆ ಬದುಕಿತು.

ಸಂತಾಲಿ ತರುಣನಿಗೆ
ಧೈರ್ಯವಿದ್ದರೆ ಅವನು
ಪ್ರೇಯಸಿಯನ್ನು
ಹೀಗೂ ಪಡೆಯಬಹುದು

# ಇತುತ್ ಮದುವೆ

ಜಿ. ಜಿ. ಹೆಗಡೆ



ಬಯಸಿದ ಹುಡುಗಿ ತನ್ನನ್ನು ಮದುವೆಯಾಗುವಂತಿಲ್ಲವೆಂದು ತೋರಿದಾಗ ನಾಗರಿಕ ಪ್ರಪಂಚದಲ್ಲಿ ತರುಣರು ಏನು ಮಾಡುತ್ತಾರೆ? ಅವರು ಕೆರೆ ಬಾವಿಯನ್ನೋ ನಾಲ್ಕು ಮೊಳದ ನೇಣು ಮತ್ತು ಒಂದು ಗಟ್ಟಿಯಾದ ತೊಲೆಯನ್ನೋ ಹುಡುಕುತ್ತಾರೆ; ಇಲ್ಲದಿದ್ದರೆ ಅವರಿಗೆ ಹುಚ್ಚು ಹಿಡಿಯುತ್ತದೆ. ಇದು ಹೆಚ್ಚಾಗಿ ಕಾದಂಬರಿಗಳಲ್ಲಿ ಮತ್ತು ವಿರಳವಾಗಿ ನಿತ್ಯಜೀವನದಲ್ಲಿ ನಡೆಯುವ ಘಟನೆ. ಕಡಿಮೆ ಭಾವನಾವಶರಾದ ತರುಣರು ಹೊಡೆಸಿಕೊಂಡ ನಾಯಿಗಳಂತೆ ಬಾಲ ಮಡಚಿಕೊಂಡು ತಮ್ಮ ದಾರಿ ಹಿಡಿಯುವರು.

ಆದರೆ ಬಿಹಾರ-ಬಂಗಾಲಗಳಲ್ಲಿರುವ ಸಂತಾಲ ಜನರಲ್ಲಿ ಹೀಗಿಲ್ಲ. ಸಂತಾಲ ತರುಣನಿಗೆ ದುರ್ಲಭಳಾದ ಪ್ರಿಯತಮೆಯನ್ನು ವಶಪಡಿಸಿಕೊಳ್ಳಲು —ತುಸು ಅಪಾಯಕರವಾದರೂ—ಸರಳ ಉಪಾಯವೊಂದಿದೆ. ಅವನು ಒಂದು ಹಿಡಿ ತುಂಬ ಕುಂಕುಮ ಅಥವಾ ಅದು ಸಕಾಲಕ್ಕೆ ಸಿಗದಿದ್ದರೆ ಕೆಂಪು ಧೂಳನ್ನು ತೆಗೆದುಕೊಂಡು ಪೇಟೆ ಅಥವಾ ಜಾತ್ರೆಯಂಥ ಸಾರ್ವಜನಿಕ ಸ್ಥಳದಲ್ಲಿ ಆ ಹುಡುಗಿಯ ಹಣೆಗೆ ಬಲವಂತದಿಂದ ಹಚ್ಚುವನು. ಬಳಿಕ ತನ್ನ ಮಿತ್ರರ ಸಹಾಯದಿಂದ ಅವಳನ್ನು ತನ್ನ ಮನೆಗೆ ಎಳೆದೊಯ್ಯುವನು.

ಕೃಷ್ಣಾರ್ಜುನರೇ ಮೊದಲಾದ ವೀರರು ದ್ವಾಪರಯುಗದಲ್ಲಿ ಅನುಸರಿಸಿ ಜನಪ್ರಿಯತೆ ಗಳಿಸಿದ "ಕನ್ಯಾಪಹಾರ ವಿವಾಹ"ದ ಸಂತಾಲಿ

ರೂಪಾಂತರವೇ ಇದೆಂದು ಹೇಳಬಹುದು. ಸಂತಾಲಿಗಳು ಇದನ್ನು "ಇತುತ್" ಎಂದು ಕರೆಯುತ್ತಾರೆ. "ಸಾಹಸೇ ಶ್ರೀರ್ನಿವಸತಿ"—ಸಾಹಸದಿಂದಲೇ ಸಿರಿಯು ಸಂಪಾದನೆ — ಎಂಬ ಗಾದೆಯನ್ನು ಸಂತಾಲರ ಮಟ್ಟಿಗೆ "ಸಾಹಸೇ ಸ್ತ್ರೀ ನಿವಸತಿ" ಎಂಬುದಾಗಿ ಪರಿವರ್ತಿಸಲು ಅಡ್ಡಿಯಿಲ್ಲ!

ಅಪಹಾರದ ಬಳಿಕ ಅವಳ ತಂದೆತಾಯಂದಿರಿಂದ ಹುಡುಗಿಯ ಶೋಧ ಪ್ರಾರಂಭವಾಗುತ್ತದೆ. ಹುಡುಗಿಯು ಇರುವಸ್ಥಳ ಗೊತ್ತಾದಾಗ ಹಳ್ಳಿಯ ಗೌಡನು ಹಳ್ಳಿಯ ಹಿರಿಯರ ಸಭೆ ಸೇರಿಸಿ "ನೀನು ಆತ್ಮಸಂತೋಷದಿಂದ ಇಲ್ಲಿಗೆ ಬಂದೆಯೊ ಅಥವಾ ನಿನ್ನನ್ನು ಬಲವಂತದಿಂದ ಎಳೆದುತಂದರೋ ?" ಎಂದು ಆ ಹುಡುಗಿಯನ್ನು ಕೇಳುತ್ತಾನೆ. ಅವಳು ಹೂಂ ಎನ್ನಲೂಬಹುದು, ಇಲ್ಲವೆನ್ನಲೂಬಹುದು. ಅವಳ ಉತ್ತರ ಯಾವದೇ ಇರಲಿ, ಗುಡ್ಡಗಾಡು ಜನರ ಸಮಾಜ ನಿಯಮದಂತೆ ಅವಳು ತನ್ನನ್ನು ಹಿಡಿದು ತಂದವನನ್ನು ಲಗ್ನವಾಗಲೇಬೇಕಾಗುವದು. ಬಳಿಕ ತೆರವು ನಿಶ್ಚಯಿಸಲ್ಪಟ್ಟು ಮದುವೆಯ ಮುಹೂರ್ತವನ್ನು ಗೊತ್ತುಪಡಿಸುತ್ತಾರೆ. ಹುಡುಗಿಯನ್ನು ಎಳತಂದವನಿಗೆ ದಂಡ ವಿಧಿಸುತ್ತಾರೆ. ದಂಡದ ಹಣ ಊರ ಹಿರಿಯರ ಭೋಜನ-ಪಾನೀಯುಗಳಿಗಾಗಿ ವಿನಿಯೋಗವಾಗುತ್ತದೆ.

ಇಂಥ ವಿವಾಹಗಳು ಅವರಲ್ಲಿ ಸಿಂಧುವಾಗುತ್ತವೆ. ಹುಡುಗಿಯೇನಾದರೂ ಆ ಹುಡುಗನೊಂದಿಗೆ ಇರಲು ನಿರಾಕರಿಸಿದರೆ ಅವಳು ಇನ್ನೊಬ್ಬನನ್ನು ಲಗ್ನವಾಗುವ ಮೊದಲು ಪದ್ಧತಿಯಂತೆ ವಿವಾಹವಿಚ್ಛೇದನ ಪಡದುಕೊಳ್ಳಬೇಕಾಗುತ್ತದೆ.

ಸಂತಾಲರು ಅನೇಕ ಕಾರಣಗಳಿಗಾಗಿ ಈ ಬಗೆಯ ವಿವಾಹಕ್ಕೆ ಶರಣುಹೋಗುತ್ತಾರೆ. ಕೆಲಸಲ ಸಾರ್ವಜನಿಕರೆದುರು ಹುಡುಗಿಯ ನೀರಿಳಿಸಲು ಅಥವಾ ಅವಳನ್ನು ಲಜ್ಜಿತಳನ್ನಾಗಿ ಮಾಡಲು ತರುಣರು ಈ ಸಾಹಸಕ್ಕುದ್ಯುಕ್ತರಾಗುತ್ತಾರೆ. "ಹುಡುಗಿಯರೇ ಓಡಿರಿ. ಹುಡುಗರು ಕುಂಕುಮವನ್ನು ಹುಡುಕಹತ್ತಿದ್ದಾರೆ''

ಎಂಬರ್ಥದ ಹಾಡೊಂದು ಸಂತಾಲ ಹುಡುಗಿ
ರಲ್ಲಿ ಪ್ರಚಲಿತವಿದೆ.

ತಂದೆ ತಾಯಿಗಳ ವಿರೋಧವಿದ್ದಾಗ ಹು
ಯರು ತಮ್ಮ ಮನಮೆಚ್ಚಿದವನನ್ನು
ವಾಗಲು ಈ ಬಗೆಯ ವಿವಾಹಕ್ಕೆ ಪ್ರೋತ
ವೀಯುತ್ತಾರೆ. ರುಕ್ಮಿಣಿ ಕೃಷ್ಣನಿಗೆ ಮಾಡಿದ

ಕುಂಕುಮ ಅಥವಾ ಕೆಂಪು ಧೂಳನ್ನು
ದೊಡನೆ ಲಗ್ನವಾದಂತೆಯೆ ಆಯಿತು
ದ್ದರೂ ಈ ಮಾರ್ಗ ಅಷ್ಟೇನೂ ಸುಲಭ
ಏಕೆಂದರೆ ಹುಡುಗಿಯನ್ನು ಬಲವಂತದಿ
ಒಯ್ದವನು ಪರಂಪರಾಗತ ಪದ್ಧತಿಯ
ಹೊಡೆಸಿಕೊಳ್ಳಬೇಕಾಗುವದು.

ಹುಡುಗಿಯನ್ನು ಓಡಿಸಿಕೊಂಡು ಹೊ
ಬಳಿಕ ಅವಳ ತಂದೆ ಅಥವಾ ಅಣ್ಣತಮ್ಮ
ಕೋಪದಿಂದ ತಪ್ಪಿಸಿಕೊಳ್ಳಲು ಹುಡು
ಹಳ್ಳಿಯನ್ನು ಬಿಟ್ಟು ಓಡಿಹೋಗುತ್ತಾನೆ.
ಹುಡುಗಿಯ ತಂದೆ ತಾಯಿಗಳು ಹುಡು
ಕುಟುಂಬದವರ ಮೇಲೆ ಸೇಡು ತೀರಿಸಿಕೊಳ್ಳ
ಬಿಲ್ಲು-ಬಾಣ ಕತ್ತಿಗಳನ್ನು ಹಿಡಿದುಕೊ
ಹೊರಡುತ್ತಾರೆ. ಮೊದಲು ಅವರು
ಗೌಡನ ಬಳಿಗೆ ಹೋಗಿ ಸೇಡುತೀರಿಸಿಕೊಳ
ಪ್ರಯತ್ನಕ್ಕೆ ಅವನ ಆಶೀರ್ವಾದ ಕ
ಪಡೆದುಕೊಳ್ಳುತ್ತಾರೆ. ಬಳಿಕ ಆ ಹುಡು
ಮನೆ ಹೊಕ್ಕು ಅವನ ಗಡಿಗೆ ಪಾತ್ರೆಗಳ
ಒಡೆದುಹಾಕುತ್ತಾರೆ. ಅಪರಾಧಿ ಕೈಗೆ ಸಿಕ್ಕಿ
ಅವನಿಗೆ ದೇವರೇ ಗತಿ. ಅವನನ್ನು ಮೈ
ಥಳಿಸಿ ಅಂಗಳದಲ್ಲಿ ಅರೆಜೀವಮಾಡಿ ಕೆ
ತ್ತಾರೆ.

ಅನಂತರ ಅವನ ಹಟ್ಟಿಯಲ್ಲಿರುವ ಒ
ಆಡನ್ನು ಸಿಗಿದು, ಹಂದಿಯೊಂದನ್ನು ಬಾಣದಿ
ಕೊಂದು ಮೂರು ಜತೆ ಆಕಳುಗಳು ಅ
ಎಮ್ಮೆಗಳನ್ನು ವಶಪಡಿಸಿಕೊಳ್ಳುತ್ತಾರೆ.

ಬಳಿಕ ಊರ ಹಿರಿಯರ ಎದುರು ವಿಚಾ
ನಡೆಯುತ್ತದೆ. ಹುಡುಗಿಯ ತಂದೆಗೆ ಪರಿ
ದೊರೆಯುತ್ತದೆ. ಅಪರಾಧಿ ಹುಡುಗನ ಹಳ್ಳಿ
ಗೌಡನು ಹುಡುಗನ ಪ್ರಾಣ ಉಳಿಸಿದ್ದಕ

ಅವನ ತಂದೆಯಿಂದ ದಂಡ ವಸೂಲು ಮಾಡುತ್ತಾನೆ. ಮುಂದೆ ಲಗ್ನ ನೆರವೇರದೆ ಹೋದಲ್ಲಿ ಆ ಹುಡುಗಿ "ಚಾಡಿ್ಗ" (ಸೋಡಚೀಟಿ ಕೊಡಲ್ಪಟ್ಟವಳು) ಎಂದು ಭಾವಿಸಲ್ಪಡುತ್ತಾಳೆ. ಹಿಂದಿನ ಕಾಲದಲ್ಲಿ ಇಂಥ ಸಂದರ್ಭಗಳಲ್ಲಿ ಕೆಲ ಸಲ ಹುಡುಗನನ್ನು ಸಾಯುವ ವರೆಗೂ ಹೊಡೆಯುತ್ತಿದ್ದರಂತೆ.

ಇಂಥ ಪ್ರಸಂಗದಲ್ಲಿ ಹುಡುಗಿಯರ ಮನೋಧರ್ಮವನ್ನು ಒಂದು ಸಂತಾಲ ಲೋಕಗೀತ ಚೆನ್ನಾಗಿ ಬಣ್ಣಿಸುತ್ತದೆ. ತನ್ನನ್ನು ಎಳೆದುಕೊಂಡು ಬಂದವನನ್ನು ಹೊಡೆಯುವುದು ಕಂಡು ಹುಡುಗಿ ಹೇಳುತ್ತಾಳೆ:

**" ಮನೆಯಿಂದ ಹೊರಬಂದು ಬೀದಿಯಲ್ಲಿ ನಿಂತೆ;**
**ಮುರುಮು ಹುಡುಗನೊಬ್ಬ ಪಾಪ,**
**ಮೀನಿನಂತೆ ಚಡಪಡಿಸುತ್ತಿದ್ದ;**
**ಅವರು ಕೊಡಲಿಯಿಂದ ಅವನನ್ನು ಕಡಿಯುತ್ತಿದ್ದರು.**
**ಓ ಕಡಿಯಬೇಡಿ, ಕೊಲ್ಲಬೇಡಿ, ಅವನು ನನ್ನ ಪ್ರಿಯಕರ ''**

ಯಾವಳಾದಳೊಬ್ಬಳನ್ನು ನೋಡಿ ಕ್ಷಣಿಕ ಮೋಹಕ್ಕೊಳಗಾಗಿ ಕುಂಕುಮ ಹಚ್ಚಿ ಹಿಂದುಗಡೆ ಪಶ್ಚಾತ್ತಾಪಪಡುವ ತರುಣರೆಷ್ಟೋ ಇದ್ದಾರೆ. ಯಾರಾದರೊಬ್ಬ ಜುಂಬನನ್ನು ಹಿಡಿಯಲೆಂದು ತಪ್ಪುಲೀಲಾವಿಲಾಸಗಳಿಂದ ಮರಳು ಮಾಡಿ ಕುಂಕುಮ ಹಚ್ಚುವಂತೆ ಪ್ರಲೋಭನಗೊಳಿಸುವ ಚದುರೆಯರು ಇಲ್ಲದೆ ಇಲ್ಲ. ಹೀಗೆ ಅವಸರದಿಂದ ಕುಂಕುಮ ಹಚ್ಚಿದ ಬಳಿಕ ತಾನು "ಇತುತ" ಮಾಡಿಕೊಂಡ ಹುಡುಗಿ ಬಸಿರಿಯೆಂದು ಕಂಡು ಪೆಚ್ಚಾದ ತರುಣನ ಕಥೆಯನ್ನು ಒಂದು ಸಂತಾಲಿ ಗೀತ ಹೇಳುತ್ತದೆ. ಅವಳನ್ನು ಮದುವೆಯಾಗಲು ಹುಡುಗ ನಿರಾಕರಿಸಿದಾಗ ಅವಳು " ಇತುತ " ನಿಯಮದ ಪ್ರಕಾರ ತನ್ನನ್ನು ಮಾಡಿಕೊಳ್ಳಲೇಬೇಕೆಂದು ಪಟ್ಟು ಹಿಡಿಯುತ್ತಾಳೆ. " ಇಲ್ಲದಿದ್ದರೆ ಪಂಚರ ಮುಂದೆ ನಿನ್ನನ್ನು ವಿಚಾರಣೆಗೊಳಪಡಿಸಿ ಕೌಪೀನದ ವರೆಗೆ ನಿನ್ನ ಸೊತ್ತುಗಳನ್ನೆಲ್ಲ ಮಾರಿಸಿ ದಂಡ ವಸೂಲು ಮಾಡುತ್ತೇನೆ" ಎನ್ನುವಳಾ ದಿಟ್ಟೆ!

ಕೆಲವೊಮ್ಮೆ ಮದುವೆಯಾದ ಹುಡುಗಿಗೆ ಗೊತ್ತಿಲ್ಲದೆ ಕುಂಕುಮ ಹಚ್ಚಿ ನಗೆಗೀಡಾಗುವ ಅವಸ್ಥೆ ತರುಣರಿಗೆ ಒದಗುತ್ತದೆ.

ಆದರೂ ಸಂತಾಲರಲ್ಲಿ ಮನ್ನಣೆ ಹೊಂದಿರುವ ಹದಿನಾಲ್ಕು ಬಗೆಯ ವಿವಾಹಗಳಲ್ಲಿ ಇತುತ್ ವಿವಾಹವೇ ಹೆಚ್ಚು ಆಕರ್ಷಕವಾಗಿದೆ. ಏಕೆಂದರೆ ಇಲ್ಲಿ ಪುರುಷನ ಧೈರ್ಯ, ಸಾಹಸ ವೃತ್ತಿಗೆ ಹೆಚ್ಚು ಅವಕಾಶ ದೊರೆಯುತ್ತದೆ. ಇತುತ್ ಪದ್ಧತಿಗೆ ಕೈಹಾಕಿದ ಯುವಕನು ಇತರ ಸಾಮಾನ್ಯರಿಗಿಂತ ಹೆಚ್ಚಿನವ ಎಂದು ಸಿದ್ಧವಾಗುತ್ತದೆ. ಆದ್ದರಿಂದ ಧೀರರಾದ ಸಂತಾಲಿ ಯುವಕರು ಈ ವಿವಾಹ ಪದ್ಧತಿಯನ್ನು ಮೆಚ್ಚುತ್ತಾರೆ. ಅವರ ಹಾಡು ಇದು:

**" ಎಲೆ ನವಿಲುಕಾಡಿನ ನವಿಲೆ, ನಾ ನಿನ್ನ ಹಾರಿಸುವೆ**
**ನಿನ್ನ ಪುಚ್ಚದ ಮೇಲೆ ಹಚ್ಚುವೆ ಬಂಗಾರದಂಥ ಸಿಂದೂರ ''**



## ಅಲ್ಪವಿದ್ಯೆ

**ಅರಿಯದ ಮನುಜನೊಲಿಸಲು ಸುಲಭ,**
**ಕುರಿತರಿತವನನು ಮತ್ತೂ ಸುಲಭ ;**
**ಅಲ್ಪ ಜ್ಞಾನದಿ ಬಹು ಗರ್ವಿತನ**
**ಬ್ರಹ್ಮಗು ತಿಳಿಯದು ಮೆಚ್ಚಿಪ ಹದನ**

— ಭರ್ತೃಹರಿ

ಉಗುರಿನ ಸ್ವರೂಪವು ನಿಮ್ಮ ಆರೋಗ್ಯದ ಹೆಗ್ಗುರುತಾಗಿದೆ

# ನಿಮ್ಮ ಉಗುರು ಹೇಳುವ ಗುಟ್ಟು

ನಿಮ್ಮ ಉಗುರುಗಳು ಬಿರುಸಾಗಿ ಆಗಾಗ ಮುರಿದು ಹೋಗುತ್ತಿವೆಯೆನ್ನೋಣ. ನಿಮಗೆ ಅದರಿಂದ ಅಂಥ ವಿಶೇಷ ತೊಂದರೆಯೇನೂ ಅನಿಸುವುದಿಲ್ಲವಾದ್ದರಿಂದ ಡಾಕ್ಟರರ ಬಳಿಗೆ ಹೋಗಲೂ ನಿಮಗೆ ಸಂಕೋಚವೆನಿಸುತ್ತದೆ. ಆದರೆ ಉಗುರುಗಳು ಮೊದಲಿನಂತಾದರೆ ಒಳ್ಳೆಯದು ಎಂಬ ವಿಚಾರದಿಂದ ನೀವು ಮನಸ್ಸು ಗಟ್ಟಿ ಮಾಡಿ ಡಾಕ್ಟರರ ಹತ್ತಿರ ಹೋಗುತ್ತೀರಿ. ಉಗುರುಗಳಿಗೆ ಹಚ್ಚಲು ಏನಾದರೊಂದು ಔಷಧವನ್ನು ಅವರು ಕೊಟ್ಟಾರೆಂಬ ಕಲ್ಪನೆಯಿಂದ ಅವರನ್ನು ಕೇಳುತ್ತೀರಿ.

ಆದರೆ ಅವರು ಕೇಳತೊಡಗಿದ ಪ್ರಶ್ನೆಗಳಿಂದ ನಿಮಗೆ ಆಶ್ಚರ್ಯವಾಗುವಂತೆ ಗಾಬರಿಯೂ ಆಗುತ್ತದೆ. ನಿಮಗೆ ಅಜೀರ್ಣಬಾಧೆಯಾಗುತ್ತಿದೆಯೇ ? ಮೇಲೆ ಮೇಲೆ ತೇಗು ಬರುತ್ತಿದೆಯೆ ? ಮೊದಲು ನಿಮಗ ಒಗ್ಗಿದ್ದ ಆಹಾರ ಪದಾರ್ಥಗಳು ಈಗ ಅಸಹ್ಯವೆನಿಸುತ್ತಿವೆಯೆ? ಕೈ ಅಥವಾ ಕಾಲುಗಳು ಮರಗಟ್ಟಿದಂತೆ ಅನಿಸುತ್ತಿದೆಯೆ ? ತಲೆನೋವು ಬರುತ್ತದೆಯೆ ? ಅನೇಕ ದಿನಗಳಿಂದ ಸಿಡಿಮಿಡಿ ಸ್ವಭಾವ ಬಂದಿದೆಯೆ ? ಕೆಲಸಕಾರ್ಯಗಳಲ್ಲಿ ಉತ್ಸಾಹವೆನಿಸುತ್ತದೆಯೇ ಇಲ್ಲವೇ? ಹಗಲು ಮಲಗುವ ಮನಸ್ಸಾಗುತ್ತದೆಯೆ? ಎಂದಿನಿಂದ ನಿಮಗೆ ದಣಿವಿನ ಭಾವನೆ ಬರತೊಡಗಿತು? ಎಂದೆಲ್ಲ ಪ್ರಶ್ನೆಗಳನ್ನು ಕೇಳಿ ನೀವು ಹಡೆದು ಆರುತಿಂಗಳಾಯಿತು, ಇಷ್ಟೊತ್ತಿಗೆ ನೀವು ಎಂದಿನಂತೆ ಉತ್ಸಾಹಭರಿತರಾಗಬೇಕಿತ್ತು ಎಂದು ಡಾಕ್ಟರರು ಹೇಳುತ್ತಾರೆ.

ಉಗುರಿನ ವಿಚಾರ ಹೇಳಿದರೆ ಇವೆಲ್ಲ ಪ್ರಶ್ನೆಗಳೇತಕ್ಕೆಂದು ನಿಮಗೆ ಮೊದಲಿಗೆ ಅನಿಸಿದರೂ ಮುಂದೆ ಯಥಾರ್ಥದ ಕಲ್ಪನೆ ಬರುತ್ತದೆ. ಡಾಕ್ಟರರು ಈಗ ಹೇಳಿದ್ದರಿಂದ ನಿಮಗೆ ನಿಮ್ಮ ಕೈಗಳಲ್ಲಿ ಕೆಲ ಕಾಲದಿಂದ ಏನೋ ಒಂದು ಬಗೆಯಾಗಿ ಸ್ಪರ್ಶಜ್ಞಾನ ಕಡಿಮೆಯಾಗುತ್ತಿದೆ ಎಂದು ನೆನಪಿಗೆ ಬರುತ್ತದೆ. ಮಾಡಬೇಕು ಎಂಬ ಸಂಕಟಕ್ಕಾಗಿ ನೀವು ಕೆಲಸ ಮಾಡುತ್ತಿರುವಿರೆಂಬುದೂ ಅರಿವಾಗುತ್ತದೆ. ನೆಲದ ಮೇಲೆ ಕುಳಿತೊಡನೆ ಕಣ್ಣು ಮುಚ್ಚಿಕೊಳ್ಳುತ್ತದೆ; ಆಗಾಗ ಸಣ್ಣಕ್ಕೆ ತಲೆನೋವು ಬರುತ್ತದೆ, ಹೋಗುತ್ತದೆ ; ಮೈಯಲ್ಲಿ ಉತ್ಸಾಹವೇ ಇಲ್ಲ—ಇದೆಲ್ಲವೂ ನಿಮ್ಮ ನೆನಪಿಗೆ ಬರುತ್ತದೆ.

ಡಾಕ್ಟರರು ನಿಮ್ಮನ್ನು ಬಳಿಕ ಅನೇಕ ರೀತಿಯಲ್ಲಿ ಪರೀಕ್ಷಿಸಬಹುದು. ನಿಮ್ಮ ರಕ್ತ, ಪುಪ್ಪುಸ, ಹೃದಯ ಎಲ್ಲವನ್ನೂ ತಪಾಸಿಸಿ ಬಳಿಕ ಅವರು ನಿಮ್ಮ ಉಗುರುಗಳನ್ನು ಜಾಗರೂಕತೆಯಿಂದ ನೋಡಬಹುದು. ಉಗುರುಗಳು ಬಿರುಸಾಗಿಯೂ ತೆಳುವಾಗಿಯೂ ಇದ್ದು ತುದಿಯಲ್ಲಿ ಬಿರುಕು ಬಿಟ್ಟಿರುವುದೂ ಉಗುರಿನ ತಳ ಕೆಂಪಾಗಿರದೆ ಬಿಳಿಯಾಗಿರುವುದೂ ಅವರಿಗೆ ಕಾಣಿಸುತ್ತದೆ.

ಉಗುರುಗಳು ಈ ರೀತಿಯಾಗಲು ನಿಮ್ಮ ಆರೋಗ್ಯದಲ್ಲಿ ಏನೋ ವ್ಯತ್ಯಯವುಂಟಾಗಿರುವುದೇ ಕಾರಣವಾಗಿರುತ್ತದೆ. ಬಹುಶಃ ನಿಮಗೆ ಸೌಮ್ಯಸ್ವರೂಪದ ಪಾಂಡುರೋಗ (ಅನೀಮಿಯಾ) ಆಗಿರಬಹುದು. ದೇಹದಲ್ಲಿ ಕಬ್ಬಿಣದ ಅಂಶ ಕಡಿಮೆಯಾದಾಗ ಪಾಂಡುರೋಗವುದ್ಭವಿ

" ಹೆಲ್ತ್ " ಆಧಾರದಿಂದ

ಸುತ್ತದೆ. ಉಗುರುಗಳ ಯೋಗ್ಯ ಬೆಳವಣಿಗೆ ಮತ್ತು ಆರೋಗ್ಯಕ್ಕೆ ಕಬ್ಬಿಣ ಅಗತ್ಯವಾಗಿದೆ. ಇಂಥ ಸಂದರ್ಭದಲ್ಲಿ ಪಾಂಡುರೋಗಕ್ಕೆ ತಕ್ಕ ಚಿಕಿತ್ಸೆ ಮಾಡಿದಾಗ ನಿಮ್ಮ ಉಗುರುಗಳು ಮೊದಲಿನಂತಾಗುವವು.

ಆದರೆ ಉಗುರಿನ ದೋಷಕ್ಕೆ ಯಾವಾಗಲೂ ಪಾಂಡುರೋಗವೇ ಕಾರಣವಾಗಿರುವುದಿಲ್ಲ. ಸತ್ವಯುತ ಆಹಾರದ ಅಭಾವವೂ ಕಾರಣವಾಗಬಹುದು. 'ಅ' ಜೀವಸತ್ವ ಮತ್ತು 'ಡ' ಜೀವಸತ್ವದ ಕೊರತೆಯು ಉಗುರುಗಳ ಬೆಳವಣಿಗೆಯನ್ನು ಕುಂಠಿತವಾಗಿಸುತ್ತದಲ್ಲದೆ ಅವರ ಬಣ್ಣ-ಗುಣಾದಿಗಳನ್ನೂ ಬದಲಿಸುತ್ತದೆ. ಕ್ಷಯ ರೋಗದಂಥ ಕೆಲವೊಂದು ಪುಪ್ಪುಸ ಮತ್ತು ಹೃದಯರೋಗಗಳಲ್ಲಿ ಉಗುರುಗಳ ಬಣ್ಣ ಬದಲಾಗುವುದು ಮಾತ್ರವಲ್ಲ (ಉಗುರುಗಳ ತಳ ತೇಜೋಹೀನ ಅಥವಾ ನೀಲಿಯಾಗಿರುತ್ತದೆ.) ಉಗುರಿನ ರೂಪ ಕೂಡ ಬದಲಾಗುವುದುಂಟು. ನಿರ್ನಾಳ ಗ್ರಂಥಿಗಳ ಅನಾರೋಗ್ಯದಲ್ಲಿ ಉಗುರುಗಳು ಒಣಗಿ ಬಿರುಸಾಗುತ್ತವೆ. ಉಗುರುಗಳ ಮೇಲೆ ಪರಿಣಾಮ ಮಾಡುವ ಇನ್ನೂ ಎಷ್ಟೋ ರೋಗಗಳಿವೆ.

ಉಗುರುಗಳಿಗೆ ಕೊಡುವ ಬಣ್ಣ, ಸ್ವಚ್ಛ ಮಾಡಲು ಉಪಯೋಗಿಸುವ ಸಾಬೂನು ಮುಂತಾದವುಗಳೂ ಉಗುರುಗಳ ಆರೋಗ್ಯವನ್ನು ಕೆಡಿಸಬಹುದಾಗಿದೆ.

ಉಗುರುಗಳಲ್ಲಿ ಹೊಲಸು ಸೇರಿಕೊಂಡಾಗಲೂ ರೋಗ ಲಕ್ಷಣ ಕಾಣಿಸಿಕೊಳ್ಳಬಹುದು. ಉಗುರು ಸಾವಕಾಶವಾಗಿ ಕೆಡತೊಡಗಿ ಅದರ ತಳಕ್ಕೂ ರೋಗದ ವಿಷ ವ್ಯಾಪಿಸಿ ಉಗುರು ಸಡಿಲಾಗಿ ಬಿಡುವುದುಂಟು. ಉಗುರನ್ನು ತೀರ ಹತ್ತಿರ ಕತ್ತರಿಸುವುದರಿಂದ ರೋಗ ಜಂತುಗಳಿಗೆ ಅದರ ತಳದಲ್ಲಿ ಪ್ರವೇಶಿಸಲು ಸುಲಭವಾಗುತ್ತದೆ.

ಉಗುರುಗಳು ಬೆಳೆಯುವುದು ಬಹು ನಿಧಾನವಾಗಿ. ಬಾಗಿಲಲ್ಲಿ ಅಕಸ್ಮಾತ್ತಾಗಿ ಬೊಟ್ಟು ಸಿಕ್ಕು ಉಗುರಿಗೆ ತೀವ್ರ ಪೆಟ್ಟು ಹತ್ತಿದ್ದರೆ ಅದಕ್ಕೆ ಮೊದಲಿನ ಸ್ವರೂಪ ಬರಲು ತುಂಬ ವೇಳೆ ಹಿಡಿಯುವುದು. ಕೆಲವೊಮ್ಮೆ ಅದು ಉದುರಿ ಹೋಗಬಹುದು. ಮತ್ತು ಹೊಸದಾಗಿ ಬಂದ ಉಗುರಿನಲ್ಲಿಯೂ ಪೆಟ್ಟಿನ ಲಕ್ಷಣ ಇರುವುದುಂಟು. ಉಗುರಿನ ಮೇಲಿಂದಲೇ ಡಾಕ್ಟರರು ಒಂದು ರೋಗದ ಸ್ವರೂಪವನ್ನು ನಿಶ್ಚಯಿಸಲಾರರಾದರೂ ಅದು ಅವರಿಗೆ ರೋಗನಿದಾನಕ್ಕೆ ಒಂದು ಉಪಯುಕ್ತ ಸಾಧನವಾಗಿದೆಯೆನ್ನುವುದು ಸತ್ಯ.



## ಮಾರುವ ಮಾದರಿ

ರೈಲುಬಂಡಿ ಸಾಗುತ್ತಿತ್ತು. ಒಬ್ಬ ಆಜಾನುಬಾಹು ವ್ಯಕ್ತಿ ಬಂದು ತನ್ನ ಕೈಯಲ್ಲಿಯ ಪಿಸ್ತೂಲನ್ನು ಪ್ರವಾಸಿಕರಿಗೆ ತೋರಿಸುತ್ತ, "ನಿಮ್ಮ ಹತ್ತಿರವಿದ್ದ ಹಣವನ್ನು ಮತ್ತು ಅಭರಣಗಳನ್ನು ತೆಗೆದು ಹೊರಗಿಡಿ. ಇಲ್ಲದಿದ್ದರೆ ಗುಂಡಿನೇಟಿಗೆ ಗುರಿಯಾಗಬೇಕಾಗುವದು" ಎಂದನು. ಎಲ್ಲ ಪ್ರವಾಸಿಕರು ಗಾಬರಿಯಾಗಿ ಸಾಮಾನುಗಳನ್ನು ಹೊರಗೆ ತೆಗೆದು ಇಟ್ಟರು.

ಆಗ ಆತನು ನಗುತ್ತ, "ನೋಡಿರಿ, ನೀವು ಸಹ ಸಂಕಟ ಸಮಯದಲ್ಲಿ ಈ ಪಿಸ್ತೂಲನ್ನು ತೋರಿಸಿ ಪಾರಾಗಬಹುದು. ನಾನು ಆಟಗೆ ಪಿಸ್ತೂಲಿನ ಏಜೆಂಟ ಇದ್ದೇನೆ" ಎಂದು ಶಿಫಾರಸು ಮಾಡಿದನು.

ಅವನ ಪಿಸ್ತೂಲಿನ ಪೆಟ್ಟಿಗೆ ಬರಿದಾಯಿತು.

ಬಿ. ಚಾರಿ



# ಗುಲಾಬಿ

ಪ್ರೊ. ವಿ. ಎಸ್. ಯಲವಿಗಿ

ಪುಷ್ಪಗಳ ರಾಣಿಯಾದ ಗುಲಾಬಿ ಯಾರಿಗೆ ತಾನೇ ಸೇರಲಾರಳು! ಜಗತ್ತಿನ ಎಲ್ಲ ಭಾಗಗಳಲ್ಲಿಯೂ ಗೋಚರವಾಗುವ ಈ ಪುಷ್ಪವು ಬಹಳ ಪುರಾತನ ಕಾಲದಿಂದ ಪ್ರಸಿದ್ಧಿ ಪಡೆದಿದೆ. ಕ್ರಿ ಪೂ. ೫೦೦ ರಲ್ಲಿ ಗ್ರೀಸ್ ದೇಶದ ಕವಯಿತ್ರಿಯಾದ ಸಾಫೋ ಗುಲಾಬಿಗೆ ಸರಿದೂಗುವ ಇನ್ನೊಂದು ಪುಷ್ಪವಿಲ್ಲವೆಂದು ಹೇಳಿದ್ದಾಳೆ. ಗತಕಾಲದ ಎಷ್ಟೋ ಲೇಖನಗಳಲ್ಲಿ ಗುಲಾಬಿಯ ಉಲ್ಲೇಖವಿದೆ. ರೋಮ್ ದೇಶದ ಸಿಸೆರೋ, ಹೋರೆಸ, ಲುಕ್ರೆಶಿಯಸ್, ಮಾರ್ಶಿಸ್, ಒವ್ಹಿಡ್ ಮತ್ತು ವ್ಹರ್ಜಿಲ್ ಇವರು ಗುಲಾಬಿಯನ್ನು ಸಮಾರಂಭಗಳಲ್ಲಿ, ಹಬ್ಬದ ದಿನಗಳಲ್ಲಿ ಮತ್ತು ಔಷಧಗಳಲ್ಲಿ ಉಪಯೋಗಿಸುತ್ತಿದ್ದರೆಂದು ಉಲ್ಲೇಖಿಸಿದ್ದಾರೆ. ಕ್ರೌರ್ಯಕ್ಕೆ ಹೆಸರಾಂತ ನೀರೋ ಎಂಬ ರೋಮನ್ ರಾಜನು ಒಂದು ಮೇಜವಾನಿಯಲ್ಲಿ ಬರೇ ಗುಲಾಬಿಯ ಸಲುವಾಗಿ ೩೦,೦೦೦ ಪೌಂಡುಗಳನ್ನು ವೆಚ್ಚ ಮಾಡಿದ್ದನಂತೆ. ೧೧೮೭ರಲ್ಲಿ ಸಲಾದೀನನು ಉಮರನ ಮಸೀದೆಯನ್ನು ಪರಿಶುದ್ಧಗೊಳಿಸಲು ದಮಸ್ಕಸದಿಂದ ೫೦೦ ಒಂಟೆಗಳ ಒಜ್ಜೆಯಷ್ಟು ಗುಲಾಬಿ ಹೂಗಳನ್ನು ತರಿಸಿದ್ದನಂತೆ.

ಗುಲಾಬಿಯ ಪರಿಮಳದ (ಎಣ್ಣೆ) ಬಗ್ಗೆ ಮೊದಲನೆಯ ಶತಮಾನದಲ್ಲಿ ಡಾಯಸ್ಕೊರಿಯೊಡನ ಉಲ್ಲೇಖವಿದೆ. ಯುರೋಪಿನಲ್ಲಿ ಕೂಡ "ಓಲಿಯಮ್ ರೋಜೊರಮ್" ಎಂದು ಕರೆಯಲ್ಪಟ್ಟಿರುವ ಇಂಥ ಪರಿಮಳವನ್ನು ಆಲಿವ್ಹ ಎಣ್ಣೆಯಲ್ಲಿ ಗುಲಾಬಿ ಹೂಗಳನ್ನು ಕುದಿಸಿ ತೆಗೆಯುತ್ತಿದ್ದರು. ಪ್ರಖ್ಯಾತ ಆಂಗ್ಲ ಕವಿ ಶೇಕ್ಸಪಿಯರನು ಕೂಡಾ ಗುಲಾಬಿಯ ಬಗ್ಗೆ ಹೀಗೆ ಹೇಳಿದ್ದಾನೆ: "What is there in a name, Rose with another name smells the same" (ಹೆಸರಿನೊಳಗೇನುಂಟು, ಗುಲಾಬಿಗ ಬೇರೊಂದು ಹೆಸರಿಟ್ಟರೂ ಅದೆ ತಾನೆ ಕಂಪು?). ಗುಲಾಬಿಯು ಬಹಳ ಪುರಾತನ ಕಾಲದಿಂದಲೂ ಘನತೆಯನ್ನು ಪಡೆದ ಪುಷ್ಪವೆಂಬುದು ನಿಸ್ಸಂಶಯವಾಗಿದೆ.

ಭಾರತದಲ್ಲಿ ಮಾತ್ರ ಗುಲಾಬಿಯ ಪರಿಚಯ ಮುಸ್ಲಿಮರ ದಾಳಿಗಳ ನಂತರವೇ ಆಯಿತು. ಅದೂ ಮೊಗಲರ ಆಳಿಕೆಯಲ್ಲಿಯೇ ಗುಲಾಬಿಗೆ ಶ್ರೇಷ್ಠ ಪದವಿ ದೊರೆತದ್ದು. ವಿದೇಶಗಳೊಡನೆ, ಅದೂ ಪರ್ಶಿಯ ಅರಬಸ್ಥಾನ ಮೊದಲಾದ ದೇಶಗಳೊಡನೆ ಮೌರ್ಯರ ಕಾಲದಿಂದಲೂ ನಿಕಟ ಸಂಪರ್ಕವಿದ್ದ ಭಾರತೀಯರಿಗೆ ಈ ಸುಂದರ ಸುಗಂಧಿತ ಪುಷ್ಪದ ನಂಟು ಯಾಕೆ ಬರಲಿಲ್ಲವೋ ಅದು ಆಶ್ಚರ್ಯವಾಗಿದೆ. ಅಂತೂ ಮಧ್ಯ

ಯುಗದ ವರೆಗೂ ಗುಲಾಬಿಯ ಉಲ್ಲೇಖ ಭಾರತೀಯ ಸಾಹಿತ್ಯದಲ್ಲಿ ಬಂದಿಲ್ಲವೆಂಬುದು ನಿಜ. ವಿದೇಶೀಯವೆಂಬುದೆಲ್ಲದರ ಮೇಲೆ ಭಾರತೀಯರಲ್ಲಿ ಬೆಳೆದುಬಂದ ಅಸಡ್ಡೆ ಇದಕ್ಕೆ ಕಾರಣವಾಗಿರಲೂ ಬಹುದು.

ಮಹಮದೀಯ ಅರಸರ ಕಾಲದಲ್ಲಿ ಗುಲಾಬಿಗೆ ಹೂಗಳ ರಾಣಿಯ ಪದವಿ ಲಭ್ಯವಾಯಿತು. ಅವರು ಗುಲಾಬಿಯ ಬಗ್ಗೆ ಎಷ್ಟೊಂದು ಮೋಹಿತರಾಗಿದ್ದರೆಂಬುದು ಭಾರತದಲ್ಲಿ ಅವರು ನಿರ್ಮಿಸಿದ ತೋಟಗಳಿಂದಲೇ ಕಂಡುಬರುವದು. ೧೩೫೧–೫೮ರಲ್ಲಿ ಫಿರೋಜಶಾಹನು ಸುಮಾರು ಒಂದು ನೂರು ಗುಲಾಬಿ ತೋಟಗಳನ್ನು ದಿಲ್ಲಿ ಮತ್ತು ಸುತ್ತುಮುತ್ತಲಿನ ಪ್ರದೇಶಗಳಲ್ಲಿ ನಿರ್ಮಿಸಿದನಂತೆ. ಗುಲಾಬಿಯ ವ್ಯವಸಾಯ ೧೫೨೬ರಲ್ಲಿ, ಅಂದರೆ ಬಾಬರನ ಕಾಲದಲ್ಲಿ ತುಂಬಾ ಮುಂದಕ್ಕೆ ಬಂತು. ಆಗ್ರಾದ ಹತ್ತಿರ ಯಮುನೆಯ ತೀರದಲ್ಲಿ "ಚಾರ-ಬಾಗ" ಎಂಬ ವಿಖ್ಯಾತಿ ಪಡೆದ ಗುಲಾಬಿ ತೋಟವು ಬಾಬರನ ಕಾಲದಲ್ಲಿ ನಿರ್ಮಿತವಾದದ್ದು. ಬಾಬರನ ಕಳೇಬರವನ್ನು ಕಾಬೂಲದ "ಬಾಗೇ-ಷಾಹಾಕ್ಕೆ" ಒಯ್ಯುವದಕ್ಕಿಂತ ಮೊದಲು ಇದೇ ತೋಟದಲ್ಲಿ ಅದು ಇಡಲ್ಪಟ್ಟಿತ್ತು.

ಗುಲಾಬಿ ಎಣ್ಣೆಯ ಕಥೆಯೂ ಕ್ರಿಸ್ತಶಕಾದಿಯಷ್ಟೆ ಹಳೆಯದು. ಹೂಗಳಿಂದ ಪರಿಮಳ ತೈಲವನ್ನು ತೆಗೆಯುವ ವಿದ್ಯೆ ಎಲ್ಲರಿಗಿಂತ ಮುಂಚೆ ಭಾರತೀಯರಿಗೆ ಗೊತ್ತಿತ್ತೆಂದು ಬಲ್ಗೇರಿಯದ ತೋಡೋರ ಬ್ಲಿಸನ್‌ಕಾಫನು ಸಂಸ್ಕೃತ ಸಾಹಿತ್ಯದ ಆಧಾರದಿಂದ ತೋರಿಸಿಕೊಟ್ಟಿದ್ದಾನೆ. ರಾವಣಾಚಾರ್ಯನ "ಅರ್ಕಪ್ರಕಾಶ"ದಲ್ಲಿ ಹೂಗಳ ಎಣ್ಣೆಯ ಗುಣದ ಉಲ್ಲೇಖವಿದೆ. ೯ ನೇ ಶತಕದ ನಾಗಾರ್ಜುನನು "ಊರ್ಧ್ವ ಪಾತನ" ಕ್ರಿಯೆಯ (Distillation) ಮೂಲಕ ಹೂವಿನ ಎಣ್ಣೆಯನ್ನು ತೆಗೆಯುವ ವಿಧಾನವನ್ನು ಹೇಳಿದ್ದಾನೆ.

ಗುಲಾಬಿ ಪರಿಮಳವೂ ಅನೇಕ ಶತಮಾನಗಳಿಂದ ಶ್ರೀಮಂತರ ಭೋಗದ ವಸ್ತುವಾಗಿದೆ. ಪ್ರಾಚೀನ ಪರ್ಶಿಯ, ಗ್ರೀಸ್, ರೋಮಗಳಲ್ಲಿ ಹಬ್ಬದ ದಿನಗಳಲ್ಲಿ ಗುಲಾಬಿಯ ಪರಿಮಳವನ್ನು ಗೋರಿಗಳ ಮೇಲೆ ತಿಕ್ಕುತ್ತಿದ್ದರಂತೆ. ಕ್ರಿ.ಶ. ೮೦೦–೮೨೦ರ ಅವಧಿಯಲ್ಲಿ ಬಗದಾದದ ಖಲೀಫರ ಬೊಕ್ಕಸಕ್ಕೆ ೩,೦೦೦ ಬಾಟಲಿ ಗುಲಾಬಿ ಪರಿಮಳ ಕಪ್ಪವಾಗಿ ಫಾರಿಸ್ತಾನದಿಂದ ಬರುತ್ತಿತ್ತೆಂದು ಅರಬಿ ಇತಿಹಾಸಕಾರ ಖಲಾದೂನನು ಹೇಳಿದ್ದಾನೆ.

ಗುಲಾಬಿ ಪರಿಮಳದ ಮೇಲೆ ತೇಲುವ ಬೆಣ್ಣೆಯಂಥ ಪದಾರ್ಥವು ಪರ್ಶಿಯದಲ್ಲಿ 'ಇತ್ರ ಜಿಲ್' ಎಂದು ಕರೆಯಲ್ಪಡುತ್ತಿತ್ತು. 'ಇತ್ರ ಜಿಲ್'ನ ಬೆಲೆ ಬಂಗಾರದ್ದಕ್ಕಿಂತ ಹೆಚ್ಚಾಗಿತ್ತೆಂದು ಗೊತ್ತಾಗಿದೆ. ಭಾರತಕ್ಕೆ ಗುಲಾಬಿಯಂತೆ ಗುಲಾಬಿ ಪರಿಮಳವೂ ಪರ್ಶಿಯ, ಅರಬಸ್ತಾನಗಳಿಂದಲೇ ಬಂದಿರಬೇಕು.

ಗುಲಾಬಿಯಿಂದ ಹೊರಡುವ "ಅತ್ತರ"–ಉರ್ದು ಭಾಷೆಯಲ್ಲಿಯ "ಇತ್ರ" ಅನ್ನು ಜಹಾಂಗೀರನ ಕಾಲದಲ್ಲಿ ಅವನ ಅತ್ತೆಯಾದ ಸಲೀಮಾ ಸುಲ್ತಾನ ಬೇಗಮಳು ಶೋಧಿಸಿದ್ದಳೆಂದು ಪ್ರತೀತಿಯಿದೆ. ಇದಕ್ಕಾಗಿ ಜಹಾಂಗೀರನು ಆಕೆಗೆ ಒಂದು ಬೆಲೆಯುಳ್ಳ ಮುತ್ತಿನ ಹಾರವನ್ನು ಇನಾಮು ಕೊಟ್ಟಿದ್ದನು. ಸಲೀಮಾ ಸುಲ್ತಾನಳು ಗುಲಾಬಿ ಪುಷ್ಪಗಳನ್ನು ಹಾಕಿ ಕುದಿಸಿದ ನೀರನ್ನು ನೂರಜಹಾನಳ ಸ್ನಾನಕ್ಕಾಗಿ ತೆಗೆಯುವಾಗ್ಗೆ ಅದರ ಮೇಲೆ ತೇಲುವ ಬೆಣ್ಣೆಯಂತಹ ಪದಾರ್ಥವನ್ನು ಕೂಡಿಸಿಟ್ಟಿದ್ದಳು. ಇದೇ "ಇತ್ರ-ಇ-ಜಹಾಂಗೀರ" ಎಂಬ ಅತ್ತರ. ಇದರ ಒಂದು ಹನಿಯನ್ನು ಕೈಗೆ ಹಚ್ಚಿ ತಿಕ್ಕಿಕೊಂಡರೆ ಸಾವಿರಾರು ಅದೇ ಅರಳಿದ ಗುಲಾಬಿ ಮೊಗ್ಗುಗಳು ಬೀರುವಷ್ಟು ಸುಗಂಧವನ್ನು ಬೀರುತ್ತಿತ್ತಂತೆ.

ಭಾರತಕ್ಕೆ ದಮಸ್ಕಸ್ ಗುಲಾಬಿ ಪರ್ಶಿಯಾ ದೇಶದಿಂದಲೇ ಬಂದಿರಬೇಕು. ಭಾರತದಲ್ಲಿ ಅತಿ ಹೆಚ್ಚು ಗುಲಾಬಿಯನ್ನು ವ್ಯವಸಾಯಕ್ಕೆಂದು ಬೆಳೆಯುವ ಪ್ರದೇಶಗಳೆಂದರೆ—ಉತ್ತರ

ಪ್ರದೇಶದ—ಗಾಜೀಪೂರ, ಕನೋಜ, ಕಾನ-ಪುರ, ಸಿಕಂದರಪುರ ಮತ್ತು ಲಕ್ನೋ ಮುಂತಾದ ಪಟ್ಟಣಗಳು. ಸುಮಾರು ೧೫೦೦ ಎಕರೆ ಭೂಮಿಯು ಗುಲಾಬಿ ಬೆಳೆಯಲ್ಲಿದೆ. ದಿನಾಲು ಸುಮಾರು ೫೦ ಕೋಟಿ ಹೂಗಳು ಹೊರಡುತ್ತವೆ. ಒಂದು ಗುಲಾಬಿಯ ಬೆಳೆಯು ಸುಮಾರು ೨ ಲಕ್ಷ ರೂಪಾಯಿ ಬೆಲೆಬಾಳಬಹುದು. ಬಿಹಾರದಲ್ಲಿ ದೇವಗಡ, ಮಧುಪುರ; ಮದ್ರಾಸಿನಲ್ಲಿ ಚಂಗಲಪೇಟೆ, ತಂಜಾವೂರು, ಮನ್ನಾರಗುಡಿ, ಕುಂಭಕೋಣ; ಕೇರಳದಲ್ಲಿ ತಿರುಚಿರಪಳ್ಳಿ, ಮಧುರಾ; ಮೈಸೂರಿನಲ್ಲಿ ಕೊಳ್ಳೆಗಾಲ, ಚೆನ್ನ-ಪಟ್ಟಣ, ನಂಜನಗೂಡು ಮತ್ತು ಬೆಂಗಳೂರು ಇವೇ ಗುಲಾಬಿಯನ್ನು ಬೆಳೆಯುವ ಮುಖ್ಯ ಪ್ರದೇಶಗಳು.

ಬೇರೆ ಬೇರೆ ಪ್ರಾಂತಗಳಲ್ಲಿ ಗುಲಾಬಿಯ ಬೆಳೆಯು ಬೇರೆ ಬೇರೆ ಋತುಗಳಲ್ಲಿ ಬರುವದು. ಗುಲಾಬಿಯ ಮುಖ್ಯ ಉದ್ದಿಮೆಯೆಂದರೆ ಗುಲಾಬಿಯ ಪರಿಮಳ ತಯಾರಿಸುವದು. ಇದಕ್ಕೆ ದಮುಸ್ಕಸ ಜಾತಿಯದೇ ಅತಿ ಉತ್ತಮವಾದದ್ದು.

ಗುಲಾಬಿಯಲ್ಲಿ ಸಾವಿರಾರು ಜಾತಿಗಳಿವೆ. ಸುಮಾರು ೮೦೦ ಜಾತಿಯ ಗುಲಾಬಿ ಗಿಡಗಳನ್ನು ಹರ್ಬೆರಿಯಮ್ ರೂಪದಲ್ಲಿ ಶಿವಪುರದ ( ಕಲಕತ್ತಾ) ಇಂಡಿಯನ್ ಬಾಟನಿಕ್ ಗಾರ್ಡನ್‌ದಲ್ಲಿ ಇಟ್ಟಿದ್ದಾರೆ. ರೋಜಾ (Rosa) ಎಂಬುದೇ ಈ ಸಾವಿರಾರು ಜಾತಿಯ ಮೂಲ ವೃಕ್ಷವೆಂದು ಹೇಳಬಹುದು. ರೋಜಾ-ಡಮುಸ್ಕಸ್, ರೊ—ರುಗೋಜಾ, ರೊ–ಚಾಯನೆನ್ಸಿಸ್, ರೋ–ಗ್ಯಾಲಿಕಾ ಎಂಬುವೇ ಮುಖ್ಯವಾದವು. ನಮ್ಮ ಕಣ್ಣಿಗೆ ಬೀಳುವ ತರತರಹದ ಗುಲಾಬಿಗಳು ಮೇಲೆ ವಿವರಿಸಿದ ಜಾತಿಯ ಗಿಡಗಳ ಸಂಕರದಿಂದ ( Hybrid roses ) ಹೊರಟಿವೆ. ಇಂಥ ಹಾಯಬ್ರಿಡ್ ಗುಲಾಬಿಗಳಿಂದ ಮತ್ತೆ ಎಷ್ಟೋ ಜಾತಿಯವು ಉದ್ಭವಿಸಿವೆ. ಇವುಗಳ ಹೆಸರುಗಳು ದೇಶ ದೇಶಗಳಲ್ಲಿ ಬೇರೆ ಬೇರೆಯಾಗಿವೆ. ಇಂಥ ಹಾಯಬ್ರಿಡ್ ಗುಲಾಬಿಗಳಲ್ಲಿ ಅತೀ ಹೆಚ್ಚಾಗಿ ಕಂಡುಬರುವವೆಂದರೆ—

ಲಾ ಫ್ರಾನ್ಸ, ಪಾಲ್ ನಿರೋನ್, ಇಟೆಯೊ-ಡಿ-ಹಾಲಂಡ, ಬ್ಲಾಕ್ ಪ್ರಿನ್ಸ, ಫ್ರೌ ಕಾರ್ಲ ಡ್ರುಶ್ಕ, ಗೋಲ್ಡನ್ ಡಾನ್ ಇತ್ಯಾದಿ.

ಒಳ್ಳೇ ಜಾತಿಯ ಗುಲಾಬಿ ಗಿಡಗಳನ್ನು ಬೆಳೆಯಿಸಬೇಕಾದರೆ ಇವಕ್ಕೆ ಉತ್ತಮವಾದ ಮಡಿಗಳನ್ನು ಮಾಡಬೇಕು. ಇತರ ಯಾವ ಗಿಡಗಳನ್ನೂ ಈ ತೋಟದಲ್ಲಿ ಬೆಳೆಯಿಸಬಾರದು. ಅಂದರೆ ಗುಲಾಬಿ ತೋಟದ ಅಂದವು ಹೆಚ್ಚುವುದು. ತೋಟದ ಸುತ್ತುಮುತ್ತಲಿನ ಪ್ರದೇಶವನ್ನು ಹುಲ್ಲುಗಾವಲಿನಿಂದ ( Lawns ) ಹಚ್ಚ ಹಸಿರಾಗಿಟ್ಟರೆ ಅದರ ವರ್ಣನೆ ಮಾಡುವುದುಂಟೇ ?

ಮಡಿಗಳನ್ನು ಸುಮಾರು ೨–೨॥ ಫೂಟಿನ ವರೆಗೆ ಅಗೆಯಬೇಕು. ಮೊದಲು ಒಂದು ಫೂಟು ಸೆಗಣಿಯ ಗೊಬ್ಬರವನ್ನು ಹಾಕಿ ಅದರ ಮೇಲೆ ಒಳ್ಳೇ ಸೂಸು ಮಣ್ಣನ್ನು ತುಂಬಬೇಕು. ಒಂದು ಮಡಿಯಿಂದ ಮತ್ತೊಂದು ಮಡಿಗೆ ೨-೩ ಫೂ. ವರೆಗೆ ಅಂತರವಿಡಬೇಕು. ಇದಲ್ಲದೆ ಮಡಿಗಳಿಗೆ ಹಸಿಯಾಗುವಷ್ಟೇ ನೀರುಣ್ಣಿಸಬೇಕು. ನೀರು ಮಡಿಯಲ್ಲಿ ನಿಂತರೆ ಗಿಡಗಳು ಕೊಳೆತು ನಾಶ ಹೊಂದುವವು. ಗಿಡವು ಬೆಳೆದು ಸ್ವಲ್ಪ ದೊಡ್ಡದಾದ ಮೇಲೆ ಅಮೋನಿಯಮ್ ಸಲ್ಫೇಟ ಹಾಗೂ ಸೂಪರಫಾಸ್ಫೇಟ - ಹಾಕಬೇಕು. - ಅಂದರೆ ಹೂಗಳು ದೊಡ್ಡವಾಗುವವಲ್ಲದೆ, ಹೆಚ್ಚು ಹೂಗಳು ಬರುವವು. ಗುಲಾಬಿಯ ಬಗ್ಗೆ ಇನ್ನೊಂದು ಲಕ್ಷ್ಯದಲ್ಲಿ ಇಡುವ ಸಂಗತಿಯೆಂದರೆ ಪ್ರತಿ ವರುಷ ಅಕ್ಟೋಬರ-ಡಿಸೆಂಬರ ತಿಂಗಳುಗಳಲ್ಲಿ ಗಿಡಗಳನ್ನು ಕತ್ತರಿಸಿ (Pruning) ಸ್ವಚ್ಛ ಮಾಡುವದು. ಕತ್ತರಿಸುವದು ಒಂದು ಜಾಣತನದ ವಿದ್ಯೆಯೇ ಸರಿ. ಚಿಕ್ಕ ಚಿಕ್ಕ ಟೊಂಗೆಗಳನ್ನು ಕತ್ತರಿಸಿ ಗಿಡವು ಆದಷ್ಟು ಪಸರಿಸುವ ಹಾಗೆ ಮೊಗ್ಗೆಗಳನ್ನು ಬಿಡಬೇಕು.

ಗುಲಾಬಿಗೆ ತಗಲುವ ರೋಗಗಳಲ್ಲಿ ಕೆಂಪು ನುಸಿ, ಬುಳುಸು ಬರುವದು ಇವೇ ಹೆಚ್ಚು. ಆದ್ದರಿಂದ ಗಿಡಗಳಿಗೆ ಕ್ರಿಮಿನಾಶಕ ದ್ರವ್ಯಗ

ಳನ್ನು ಮೇಲಿಂದ ಮೇಲೆ ಸಿಂಪಡಿಸಬೇಕು.

ಗುಲಾಬಿಯ ವ್ಯವಸಾಯ ಭಾರತದಲ್ಲಿ ಸಾವಿರಾರು ಜನರಿಗೆ ಉದ್ಯೋಗವನ್ನು ಒದಗಿಸಿದೆ. ಗುಲಾಬಿಯಿಂದ ತೆಗೆಯುವ ಪರಿಮಳವಂತೂ ಸರಿಯೇ ಸರಿ. ಇದಲ್ಲದೆ ಪನ್ನೀರು (Rosewater), ಅತ್ತರ, ಗುಲಕಂದ, ಗುಲರೋಘನ (ಹೇರ್ ಆಯಿಲ್) ಮತ್ತು ಪಾನಕುರಿ (ಒಣಗಿದ ಪಕಳೆಗಳು) ಇತ್ಯಾದಿಗಳನ್ನು ಮಾಡುವರು. ಪಾನಕುರಿಯನ್ನು ಉತ್ತರ ಭಾರತದಲ್ಲಿ ತಂಪಾದ ಪಾನೀಯಗಳಲ್ಲಿ ಉಪಯೋಗಿಸುವರು. ಒಂದು ಮಣ ಪಾನಕುರಿಯ ಬೆಲೆ ಸುಮಾರು ರೂ. ೨೦೦ ಆಗುವದು.

ಗುಲಾಬಿಯ ಪರಿಮಳವನ್ನು ಸಾಬೂನು, ಹೇರ್ ಆಯಿಲ್ ಇತ್ಯಾದಿ ವಸ್ತುಗಳನ್ನು ತಯಾರಿಸುವದರಲ್ಲಿಯೂ ಉಪಯೋಗಿಸುತ್ತಾರೆ. ಆದ್ದರಿಂದ ಗುಲಾಬಿಯು ಕಲೋಪಾಸಕರಿಗೆ ಪುಷ್ಪಗಳ ರಾಣಿಯಾದರೆ, ಉದ್ದಿಮೆದಾರರಿಗೆ ಹಣ ತರುವ ಒಂದು ಮುಖ್ಯ ಆಧಾರವಾಗಿದೆ











ಹೂವಿನಂತೆ...

## ನಿಮ್ಮ ಸೌಂದರ್ಯ **ರೆಕ್ಸೋನದ** ಉಪಯೋಗದಿಂದ ಅರಳುತ್ತದೆ

ರೆಕ್ಸೋನ ಸೋಪಿನಲ್ಲಿರುವ ಕ್ಯಾಡಿಲ್–ಎಣ್ಣೆಗಳ ಒಂದು ವಿಶಿಷ್ಟ ಮಿಶ್ರಣ–ಚರ್ಮಕ್ಕೆ ಪೋಷಣೆಯನ್ನು ಕೊಟ್ಟು ನಿಮ್ಮ ಸ್ವಾಭಾವಿಕ ಸೌಂದರ್ಯವನ್ನು ಹೊರಗೆಡಹುವುದಕ್ಕೆ ಸಹಾಯ ಮಾಡುತ್ತದೆ.








ಕ್ಯಾಡಿಲ್ ಇರುವ ಒಂದೇ ಟಾಯಿಲೆಟ್ ಸೋಪು

ಹಿಂದುಸ್ಥಾನ್ ಲೀವರ್ ಲಿಮಿಟೆಡ್ ಅವರಿಂದ ರೆಕ್ಸೋನ ಪ್ರೊಪ್ರೈಟರಿ ಲಿಮಿಟೆಡ್ ಅವರಿಗಾಗಿ ಭಾರತದಲ್ಲಿ ತಯಾರಿಸಲ್ಪಟ್ಟಿದೆ.

RP. 151-50 KN

**ಅವಳು ಹೋದಲ್ಲೆಲ್ಲ ವಿಷಮ
ಜ್ವರವನ್ನು ಹಬ್ಬಿಸುತ್ತಿದ್ದಳು !**

# "ಟೈಫಾಯ್ಡ್ ಮೇರಿ"ಯ ವಿಚಿತ್ರ ವೃತ್ತಾಂತ

ರೋಗಜಂತುಗಳನ್ನು ಹಬ್ಬಿಸುವ ಸೊಳ್ಳೆ, ನೊಣ ಮೊದಲಾದ ಜೀವಿಗಳಿಗೆ ಆ ಜಂತುಗಳು ಏನೂ ಮಾಡುವುದಿಲ್ಲವೆ? ಬಹುತರವಾಗಿ ಏನೂ ಮಾಡುವುದಿಲ್ಲ. ತಮ್ಮಲ್ಲಿ ಸೇರಿದ ರೋಗಾಣುಗಳಿಂದ ತಾವು ಅಬಾಧಿತವಾಗಿ ಉಳಿದು ಅವು ಇತರ ಪ್ರಾಣಿಗಳಿಗೂ ಮನುಷ್ಯರಿಗೂ ರೋಗವನ್ನು ಹಬ್ಬಿಸುತ್ತವೆ. ಆದರೆ ಮನುಷ್ಯರಲ್ಲಿ ಕೂಡ ಕೆಲವರು ರೋಗದ ಜಂತುಗಳನ್ನು ಹೊತ್ತುಕೊಂಡು ಇತರರಿಗೆ ಅದನ್ನು ಹಬ್ಬಿಸಿ ತಾವು ಸ್ವತಃ ರೋಗದಿಂದ ಬಳಲದೆ ಉಳಿಯಬಲ್ಲರೆಂಬುದು ಈ ಶತಮಾನದ ಆರಂಭದಲ್ಲಿ "ಟೈಫಾಯ್ಡ್ ಮೇರಿಯು" ನಿದರ್ಶನದಿಂದ ಜಗತ್ತಿಗೆ ಮೊದಲನೆ ಬಾರಿ ಪ್ರತೀತಿಗೆ ಬಂದು ಆಘಾತವಾಯಿತು.

ಟೈಫಾಯ್ಡ್ ಮೇರಿ ಹೋದಲ್ಲೆಲ್ಲ ವಿಷಮಜ್ವರ ಹಬ್ಬುತ್ತಿತ್ತು. ಸಾವು ತಾಂಡವವಾಡುತ್ತಿತ್ತು. ಅವಳ ವಿಷಯದಲ್ಲಿ ಬಹುದೊಡ್ಡ ನ್ಯಾಯಚರ್ಚೆಯೆದ್ದಿತ್ತು. ಅವಳನ್ನು ವಿಚಾರಣೆಯಿಲ್ಲದೆ ಸೆರೆಮನೆಯಲ್ಲಿಡಬೇಕಾಗಿ ಬಂದಿತ್ತು.

ಅವಳ ನಿಜವಾದ ಹೆಸರು ಮೇರಿ ಮೆಲನ್ ಎಂದು. ಬಹಳ ಕಾಲ ಅವಳು ಟೈಫಾಯ್ಡ್ ರೋಗಾಣುಗಳ ವಾಹಕಳೆಂದು ಯಾರೂ ಸಂಶಯಪಟ್ಟಿರಲಿಲ್ಲ. ಆರೋಗ್ಯಶಾಸ್ತ್ರ ತಜ್ಞರಾದ ಡಾ. ಜಾರ್ಜ ಸೋಪರರ ಶೋಧವಲ್ಲದಿದ್ದರೆ ಮೇರಿ ಮೆಲನ್ನಳು ಸ್ವತಂತ್ರವಾಗಿದ್ದು ಎಷ್ಟು ಜನರ ಸಾವಿಗೆ ಕಾರಣಳಾಗುತ್ತಿದ್ದಳೋ ಏನೋ?

೧೯೦೬, ಜನವರಿ ತಿಂಗಳಲ್ಲಿ ಅಮೇರಿಕದ ಒಯಿಸ್ಟರ ಬೇ ದಲ್ಲಿಯ ಒಂದು ಮನೆಯವರಿಂದ ಡಾ. ಸೋಪರರಿಗೆ ಕರೆ ಬಂತು. ಆ ಬೇಸಿಗೆಯಲ್ಲಿ ಆ ಮನೆಯಲ್ಲಿ ಆರು ಜನ ವಿಷಮಜ್ವರದಿಂದ ನಿಧನಹೊಂದಿದ್ದರು. ಆದರೆ ವಿಚಿತ್ರವೆಂದರೆ, ಆ ಊರಿನಲ್ಲಿ ಮತ್ತಾರಿಗೂ ವಿಷಮಜ್ವರ ಬಂದಿರಲಿಲ್ಲ.

ಡಾ. ಸೋಪರರು ನಡೆಸಿದ ಸೂಕ್ಷ್ಮ ಪರೀಕ್ಷೆಯಿಂದ ಮನೆಯಲ್ಲಿಯ ಯಾವುದೇ ವಸ್ತುವಿನಿಂದ ಅಥವಾ ಹೊರಗಿನಿಂದ ತಂದ ಆಹಾರ, ಹಾಲು ಅಥವಾ ನೀರಿನಿಂದ ವಿಷಮಜ್ವರದ ಜಂತುಗಳು ಬಂದಿರಲಿಲ್ಲವೆಂದು ಗೊತ್ತಾಯಿತು. ವಿಷಮಜ್ವರ ಪೀಡಿತರ ಬಳಿಗೂ ಮನೆಯಲ್ಲಿಯ ಯಾರೂ ಹೋಗಿರಲಿಲ್ಲ. ವಿಷಮಜ್ವರದ ಸೋಂಕು ಹರಡುವ ಬಗೆಗಳಲ್ಲಿ ಒಂದೂ ಈ ಮನೆಯ ಜನರ ಬೇನೆಗೆ ಕಾರಣವಾಗಿರಲಿಲ್ಲವೆಂದು ಸ್ಪಷ್ಟವಾದಾಗ ಡಾ. ಸೋಪರರು ದಿಙ್ಮೂಢರಾದರು.

ಅವರು ಇದನ್ನೇ ಯೋಚಿಸುತ್ತ ಕುಳಿತಾಗ ವಿಷಮಜ್ವರದ ರೋಗ ಜಂತುಗಳನ್ನು ಸ್ವತಃ ವಿಷಮಜ್ವರ ಪೀಡಿತರಾಗಿರದಿದ್ದ ಜನರು ಹಬ್ಬಿಸಬಲ್ಲರು ಎಂದು ಜರ್ಮನ್ ವಿಜ್ಞಾನಿ ರಾಬರ್ಟ ಕೌಚ್ ರು ಒಂದು ಭಾಷಣದಲ್ಲಿ ಹೇಳಿದ್ದು ಅವರ ಜ್ಞಾಪಕಕ್ಕೆ ಬಂತು.

ಹಾಗಾದರೆ ಮನುಷ್ಯರೇ ಈ ಮನೆಯಲ್ಲಿ ರೋಗ ಜಂತುಗಳನ್ನು ತಂದಿರಬಹುದೇ ? ಆ ಮನೆಯಲ್ಲಿ ಆ ಕಾಲದಲ್ಲಿ ಇದ್ದವರ ಹೆಸರುಗಳನ್ನೆಲ್ಲ ಅವರು

ನಿರುಕಿಸಿದರು. ಆ ಯಾದಿಯಲ್ಲಿ ಅಡಿಗೆಯವಳಾಗಿದ್ದ ಮೇರಿ ಮೆಲನ್ನಳ ಹೆಸರಿತ್ತು. ಅವಳಿಗೆ ಮಾತ್ರ ವಿಷಮಜ್ವರವಾಗಿರಲಿಲ್ಲ. ಅವಳೀಗ ಅಲ್ಲಿ ಕೆಲಸದಲ್ಲಿರಲಿಲ್ಲ.

ಡಾ. ಸೋಪರರು ಅವಳ ಪೂರ್ವಚರಿತ್ರೆಯ ಶೋಧದಲ್ಲಿ ತೊಡಗಿದರು. ಮೇರಿ ಮೆಲನ್ನಳು ಎಲ್ಲೆಲ್ಲಿ ಕೆಲಸ ಮಾಡಿದ್ದಳು ಎಂಬ ವಿವರವನ್ನು ಕಲೆಹಾಕಿದರು. ೧೯೦೦ರಲ್ಲಿ ಮೇರಿ ಮೆಲನ್ನಳನ್ನು ಕೆಲಸಕ್ಕಿಟ್ಟುಕೊಂಡಿದ್ದ ಒಂದು ಮನೆಗೆ ಮೊದಲು ಡಾ. ಸೋಪರರು ಹೋದರು.

ಆ ಮನೆಯ ಯಜಮಾನಿ ಮೇರಿ ಮೆಲನ್ನಳು ತಮ್ಮಲ್ಲಿ ಕೆಲಸಕ್ಕಿದ್ದದ್ದನ್ನು ಮರೆತಿರಲಿಲ್ಲ. ಅವಳು ಬಂದ ಕೆಲ ದಿನಗಳಲ್ಲಿಯೇ ಮನೆಯಲ್ಲಿ ವಿಷಮ ಜ್ವರದ ಹಾವಳಿಯೆದ್ದಿತ್ತು. ಮೇರಿ ಮೆಲನ್ನಳು ಕೆಲಸ ಬಿಟ್ಟು ಹೋಗಿದ್ದಳು.

ಡಾ. ಸೋಪರರು ಆತುರದಿಂದ ಮುಂದಿನ ಮನೆಗೆ — ಡ್ರೇಟನ್ ಎಂಬ ವಕೀಲನಲ್ಲಿಗೆ ಹೋದರು.

೧೯೦೨ ರ ಭೀಕರ ಬೇಸಿಗೆ ಡ್ರೇಟನ್ನರಿಗೆ ಚೆನ್ನಾಗಿ ನೆನಪಿತ್ತು. ಆಗ ಅವರ ಮನೆಯಲ್ಲಿ ಅವರೊಬ್ಬರನ್ನು ಬಿಟ್ಟು ಮತ್ತೆಲ್ಲರಿಗೆ ವಿಷಮ ಜ್ವರ ಬಂದಿತ್ತು. “ಮೇರಿ ಇಲ್ಲದಿದ್ದರೆ ನನ್ನ ಪಾಡು ಏನಾಗುತ್ತಿತ್ತೋ ಹೇಳಲಾರೆ. ಅವಳು ಬೇನೆ ಬಿದ್ದವರ ಆರೈಕೆಯಲ್ಲಿ ನನ್ನೊಂದಿಗೆ ಹಗಲಿಗೆ ಹಗಲು ಹಚ್ಚಿ ದುಡಿದಳು. ಅವಳ ನಿಷ್ಠೆಯಿಂದ ಪ್ರೀತನಾದ ನಾನು ಅವಳಿಗೆ ೫೦ ಡಾಲರುಗಳನ್ನು ಬಹುಮಾನವಾಗಿ ಕೊಟ್ಟೆ,” ಎಂದರವರು.

ಡಾ. ಸೋಪರರು ಇನ್ನೂ ಹತ್ತಾರು ಮನೆಗಳಿಗೆ ಭೆಟ್ಟಿಯಿತ್ತರು. ಒಂದೊಂದು ಮನೆಯಲ್ಲೂ ಅವರ ಸಂಶಯ ದೃಢವಾಗುತ್ತ ಹೋ-ದಂತೆ ಅವರ ಮೈಮೇಲೆ ಮುಳ್ಳುಗಳೇಳತೊಡಗಿದವು. ಮೇರಿ ಮೆಲನ್ ಕೆಲಸ ಮಾಡಿದ ಪ್ರತಿಯೊಂದು ಮನೆಯಲ್ಲೂ ಜನರಿಗೆ ವಿಷಮಜ್ವರವಾಗಿ ಸತ್ತಿದ್ದರು. ಸಂದೇಹಕ್ಕವಕಾಶವೇ ಇರಲಿಲ್ಲ.

ಡಾ ಸೋಪರರು ಮೇರಿ ಮೆಲನ್ನಳ ಶೋಧ ನಡೆಸಿದರು. ಬಹು ಪ್ರಯತ್ನದ ನಂತರ ಅವರಿಗೆ ಅವಳು ನ್ಯೂಯಾರ್ಕದ ಪಾರ್ಕ ಅವೆನ್ಯೂದಲ್ಲಿ ಒಂದು ಮನೆಯಲ್ಲಿ ಕೆಲಸಮಾಡುತ್ತಿರುವುದು ಗೊತ್ತಾಯಿತು.

ಆ ಮನೆಯವರಿಗೆ ಎಚ್ಚರಿಕೆ ಕೊಡಲೆಂದು ಡಾ. ಸೋಪರರು ಧಾವಿಸಿದರು. ಆದರೆ ಮಾತು ಮಿಂಚಿಹೋಗಿತ್ತು. ಆ ಮನೆಯಲ್ಲಿ ಒಂದು ಮಗು ಆಗಲೆ ವಿಷಮ ಜ್ವರಕ್ಕೆ ತುತ್ತಾಗಿ ಮೃತ್ಯು ಮುಖದಲ್ಲಿತ್ತು.

ಡಾ. ಸೋಪರರು ನೆಟ್ಟಗೆ ಅಡಿಗೆ ಮನೆಯನ್ನು ಹೊಕ್ಕರು. ಒಲೆಯ ಹತ್ತರ ಮೇರಿ ಮೆಲನ್ ನಿಂತಿದ್ದಳು.

ಒಂದು ನಿಮಿಷ ತಮ್ಮ ನಂಬಿಗೆಯಲ್ಲಿ ಡಾ. ಸೋಪರರಿಗೆ ಸಂದೇಹ ಉಂಟಾಯಿತು. ಈ ಸದೃಢ ಹೆಂಗಸಿನಲ್ಲಿ ಸಾವನ್ನು ಜೊತೆಗೊಯ್ಯುವ ಶಕ್ತಿ ಇತ್ತು ಎಂದು ನಂಬುವುದು ಕಠಿಣವಾಗಿತ್ತು. ಅವರು ಮೆಲ್ಲನೆ ಮಾತಿಗಾರಂಭಿಸಿದರು.

ಮೇರಿ ಮೆಲನ್ ಭಯದಿಂದ ಕಂಪಿಸಿದಳು. ಈ ಮನುಷ್ಯ ಹೇಳುತ್ತಿದ್ದುದೆಲ್ಲ ಒಂದು ದುಃಸ್ವಪ್ನದಂತಿತ್ತು. ವಿಷಮಜ್ವರ! ತಾನದನ್ನು ಮನೆ-ಮನೆಗೆ ಒಯ್ಯುತ್ತಿದ್ದೇನೆ! ತಾನು ಹೋದಲ್ಲೆಲ್ಲ ವಿಷಮಜ್ವರವಾಗಿರಲಿಲ್ಲವೇ ?

ಛೆ! ಛೆ! ಬಾಲ್ಯದಿಂದಲೂ ತಾನು ಹೊಟ್ಟೆ ಪಾಡಿಗಾಗಿ ದುಡಿಯುತ್ತ ಬಂದಿದ್ದೇನೆ. ಚೆನ್ನಾಗಿ ಅಡಿಗೆ ಮಾಡುವವಳೆಂದು ಎಲ್ಲರೂ ಹೊಗಳುತ್ತಾರೆ. ಆದರೆ...ಈಗ ಈ ಮನುಷ್ಯ ಈ ಭಯಂ-ಕರ ಆರೋಪವನ್ನು ಹೊರಿಸುತ್ತಾನೆ, ಎಂದರೆ!

“ಇಲ್ಲ. ನಾನು ಯಾರಿಗೂ ಬೇನೆಯನ್ನುಂಟು ಮಾಡಿಲ್ಲ,” ಮೇರಿ ಮೆಲನ್ ದೃಢ ಸ್ವರದಲ್ಲಿ ಹೇಳಿದಳು.

ಆದರೆ ಡಾ. ಸೋಪರ ಅವಳಿಗೆ ಹಿಂದಿನ ಘಟನೆಗಳನ್ನೆಲ್ಲ ಒಂದೊಂದಾಗಿ ನೆನಪಿಗೆ ತಂದು ಕೊಟ್ಟರು. ಮೇರಿ ಮೆಲನ್ ಕೋಪದಿಂದ ಸೌಟನ್ನೇ ಎತ್ತಿದಳು. ಡಾ. ಸೋಪರರು ಹೊರಗೋಡಿದರು.

ಡಾ. ಸೋಪರರು ಈಗ ಎರಡನೆಯವರ ಸಹಾಯ ಪಡೆಯಲೇಬೇಕಾಯಿತು. ನ್ಯೂಯಾರ್ಕ

ಆರೋಗ್ಯ ಶಾಖೆಯವರು ಮೊದಮೊದಲು ಅವರ ಮಾತನ್ನು ಸಂದೇಹದಿಂದಲೇ ಕೇಳಿಕೊಂಡರು. ಬರಬರುತ್ತ ಅವರಿಗೂ ಸೋಪರರ ಮಾತಿನಲ್ಲಿ ವಿಶ್ವಾಸ ಹುಟ್ಟಿತು. ಅವಳನ್ನು ಬಂಧಿಸಬೇಕೆಂದು ಡಾಕ್ಟರರು ಒತ್ತಾಯಪಡಿಸಿದರು. ಯಾವ ಆರೋಪವೂ ಇಲ್ಲದೆ ನಾಗರಿಕಳೊಬ್ಬಳನ್ನು ಬಂಧಿಸಲು ಮೊದಲು ಅನುಮಾನಿಸಿದರೂ ಕೊನೆಗೆ ಕಮಿಶನರರು ಡಾ. ಸೋಪರರ ಭೀಕರ ತರ್ಕಕ್ಕೆ ತಲೆವಾಗಬೇಕಾಯಿತು.

ಪೋಲೀಸರು ಬಂದು ಮೇರಿಯನ್ನು ಬಂಧಿಸಿದರು. ಡಾಕ್ಟರರು ಅವಳನ್ನು ಪರೀಕ್ಷಿಸಿ ನೋಡಿದಾಗ ಸೋಪರರ ಊಹೆ ಸತ್ಯವೆಂದು ಗೊತ್ತಾಯಿತು. ಅವಳ ಕೈಗಳ ಮೇಲೆ ಅಸಂಖ್ಯವಾಗಿದ್ದ ವಿಷಮಜ್ವರದ ಜಂತುಗಳು ಅವಳು ಮುಟ್ಟಿದ್ದನ್ನೆಲ್ಲ ದೂಷಿತವನ್ನಾಗಿ ಮಾಡುತ್ತಿದ್ದವು.

ಒಬ್ಬರಲ್ಲ, ಹತ್ತಾರು, ನೂರಾರು ಡಾಕ್ಟರರು ಅವಳನ್ನು ಪರೀಕ್ಷಿಸಿದರು. ಪ್ರಯೋಗ ಮಾಡಿ ನೋಡಿದರು. ಸುದ್ದಿಗಾರರು ಅವಳ ಜೀವನ ಚರಿತ್ರೆಯನ್ನು ಕೇಳಿಕೊಳ್ಳಲೆಂದು ಬಂದರು.

ಸಮುದ್ರದ ಮಳಲಿನ ರಾಶಿಯಲ್ಲಿ ಒಂದು ಕಣದಂತೆ ಇದ್ದ ಮೇರಿ ಮೆಲನ್ ಒಮ್ಮಿಂದೊಮ್ಮೆ ಕುಪ್ರಖ್ಯಾತಳಾಗಿಬಿಟ್ಟಳು, ವಾದಗ್ರಸ್ತ ವಿಷಯವಾಗಿ ಬಿಟ್ಟಳು. ಆರೋಗ್ಯ ಶಾಖೆಯವರು ಈ ರೀತಿ ಅವಳನ್ನು ಬಂಧಿಸಬಲ್ಲರೇ ? ಪತ್ರಿಕೆಗಳಲ್ಲಿ ಕೂಗೆದ್ದಿತು. ವಕೀಲರು ಕಾಯದೆಯ ವಿಚಾರವನ್ನು ಚರ್ಚಿಸತೊಡಗಿದರು.

ಈ ಬಂಧನದಿಂದ ಮೇರಿಯಷ್ಟೇ ಸಂತಪ್ತರಾಗಿದ್ದ ಜಾರ್ಜ ಫ್ರಾನ್ಸಿಸ್ ಓನೆಲ್ ಎಂಬ ವಕೀಲರು ವರಿಷ್ಠ ನ್ಯಾಯಾಲಯದ ವರೆಗೂ ಮೇರಿಯ ಪ್ರಕರಣವನ್ನು ಒಯ್ದರು. "ಸಮಾಜದ ಕಲ್ಯಾಣಕ್ಕೆ ಪ್ರಥಮ ಪ್ರಾಶಸ್ತ್ಯವಿರಬೇಕು. ಇದು ವಿಚಿತ್ರ ಪ್ರಕರಣವೇನೊ ಹೌದು. ಈ ಕ್ರಮ ಕೈಕೊಳ್ಳುವದು ವಿಷಾದದ ಮಾತು ಎಂಬುದೂ ನಿಜ. ಆದರೆ ಸಾರ್ವಜನಿಕರಿಗೆ ಗಂಡಾಂತರಪ್ರಾಯಳಾಗಿರುವ ಮೇರಿ ಮೆಲನ್ನಳನ್ನು ಬಂಧನದಲ್ಲಿಡುವುದು ಯೋಗ್ಯ" ಎಂದು ವರಿಷ್ಠ ನ್ಯಾಯಾಲಯವು ತೀರ್ಪನ್ನಿತ್ತಿತು.

ಮೇರಿಯ ದೇಹದಲ್ಲಿಯ ಪಿತ್ತಕೋಶವೇ ವಿಷಮಜ್ವರ ಜಂತುಗಳ ಮನೆಯಾಗಿದೆ ಎಂದು ಡಾಕ್ಟರರು ಕಂಡುಹಿಡಿದಿದ್ದರು. ಅದನ್ನು ಕತ್ತರಿಸಿ ಹಾಕಲು ಮೇರಿ ಮೆಲನ್ನಳು ಒಪ್ಪಿದರೆ ಬಹುಶಃ ಅವಳು ಎಲ್ಲರಂತೆ ನಿರುಪದ್ರವಿ ಜೀವಿಯಾಗಬಹುದು ಎಂದು ಅವರ ಅಭಿಪ್ರಾಯವಿತ್ತು. ಆದರೆ ಎಷ್ಟು ಹೇಳಿದರೂ ಮೇರಿ ಶಸ್ತ್ರ ಚಿಕಿತ್ಸೆಗೆ ಒಪ್ಪಲಿಲ್ಲ.

ಬಳಿಕ ಮೇರಿಯನ್ನು ಒಂದು ಆಸ್ಪತ್ರೆಯಲ್ಲಿಟ್ಟರು. ಅಲ್ಲಿ ಒಂದು ಬಂಗಲೆಯಲ್ಲಿ ಅವಳು ಏಕಾಂಗಿಯಾಗಿ ಇರತೊಡಗಿದಳು. ಊಟ ತರುತ್ತಿದ್ದ ದಾಯಿಯೊಂದಿಗೂ ಅವಳು ಮಾತಾಡುತ್ತಿರಲಿಲ್ಲ. ತಾನು ಸಾವಿನ ದೂತಳು ಎಂಬ ಮಾತಿನಲ್ಲಿ ಇನ್ನೂ ಅವಳಿಗೆ ನಂಬಿಗೆಯಾಗಿರಲಿಲ್ಲ.

ಮುಂದೆ ಆರೋಗ್ಯ ಶಾಖೆಯ ಆಡಳಿತ ವರ್ಗ ಬದಲಾದಾಗ ಅವಳಿಗೆ ಅನುಕೂಲರಾದ ಜನರು ಅದರಲ್ಲಿ ಬಂದರು. "ನಿನ್ನನ್ನು ಬಿಡುಗಡೆ ಮಾಡಿದರೆ ನೀನು ಅಡಿಗೆಯ ಕೆಲಸವನ್ನು ಮಾಡುವದಿಲ್ಲ ಮತ್ತು ಕಾಲಕಾಲಕ್ಕೆ ಅಧಿಕಾರಿಗಳಿಗೆ ವರದಿ ಕೊಡುವೆನೆಂದು ಮಾತು ಕೊಡುವಿಯಾ?" ಎಂದು ಅವರು ಮೇರಿಯನ್ನು ಕೇಳಿದರು.

ಮೇರಿ ಹಾಗೆಯೆ ನಡೆದುಕೊಳ್ಳುವುದಾಗಿ ವಚನವಿತ್ತು ಬಿಡುಗಡೆ ಹೊಂದಿದಳು. ಆದರೆ ವಚನವನ್ನು ಪಾಲಿಸಲಿಲ್ಲ. ತಾನು ರೋಗವಾಹಕಳೆಂಬುದನ್ನು ಅವಳು ನಂಬಲೇ ಇಲ್ಲ. ಅವಳು ಪಲಾಯನ ಮಾಡಿದಳು. ಹೆಸರು ಬದಲಿಸಿಕೊಂಡು ಎಲ್ಲೆಲ್ಲೋ ಕೆಲಸ ಮಾಡಿದಳು. ಅಡಿಗೆಯೊಂದನ್ನು ಬಿಟ್ಟು ಬೇರೆ ಏನೇನೋ ಕೆಲಸ ಮಾಡಿದಳು.

ಆದರೆ ಅಧಿಕಾರಿಗಳೆಲ್ಲಿ ತನ್ನನ್ನು ಪತ್ತೆ ಹಚ್ಚುವರೋ ಎಂಬ ಭಯ ಅವಳನ್ನು ಪೀಡಿಸುತ್ತಿತ್ತು. ಪೋಲೀಸರ ದೃಷ್ಟಿಗೆ ಬಿದ್ದಾಗಲೆಲ್ಲ ಅವಳು ನಡುಗುತ್ತಿದ್ದಳು. ಅವಳು ಒಂದು ಕಡೆಯೂ ಬಹಳ ಕಾಲ ನಿಲ್ಲದೆ ಪದೇಪದೇ ಕೆಲಸದ ಸ್ಥಳಗಳನ್ನು ಬದಲಾಯಿಸಿದಳು. ಪ್ರತಿ ಸಲವೂ ಹೆಸರು ಬದಲಾಯಿಸಿಕೊಂಡಳು. ಒಮ್ಮೆ ಕೈಗ

ಗಾಯವಾಗಿ ನಂಜಾದಾಗ ಡಾಕ್ಟರರ ಕಡೆಗೆ ಹೋಗಲು ಕೂಡ ಅಂಜಿ ಅವಳು ಮನೆಯಲ್ಲೇ ಅನೇಕ ದಿನಗಳ ವರೆಗೆ ನರಳುತ್ತ ಬಿದ್ದುಕೊಂಡಿದ್ದಳು.

ಐದು:ವರ್ಷಗಳ ವರೆಗೆ ಅವಳು ಈ ರೀತಿ ಭಯಪೀಡಿತ ಜೀವನವನ್ನು ಸಾಗಿಸಿದಳು. ಕೆಲವೆಡೆ ಅಡಿಗೆ ಮಾಡಿದಳು. ಯಾರಿಗೂ ವಿಷಮಜ್ವರ ತಾಗಲಿಲ್ಲ. ಅನಂತರ ಮತೆ ಮೊದಲಿನದೇ ಪಲ್ಲವಿ. ಬ್ರಾಡವೇ ಹಾಟೆಲ್ಲೊಂದರಲ್ಲಿ ಅವಳು ಕೆಲಸ ಮಾಡತೊಡಗಿ ಎರಡು.ವಾರ ಕಳೆದಾಗ ಅಲ್ಲಿ ವಿಷಮಜ್ವರ ಕಾಣಿಸಿಕೊಂಡಿತು. ಮೇರಿ ಪಲಾಯನ ಮಾಡಿದಳು. ಆದರೆ ಪತ್ರಿಕೆಗಳಲ್ಲಿ ಒಬ್ಬ ಅಡಿಗೆಯವಳಿಂದಲೇ ರೋಗ ಬಂದಿರಬೇಕು ಎಂಬ ಸುದ್ದಿ ಬಂತು. ಆ ಅಡಿಗೆಯವಳ ಚಹರೆ ಪಟ್ಟಿಯ ಮೇಲಿಂದ ಬಹುದಿನಗಳಿಂದ ಕಾಣೆಯಾಗಿದ್ದ ಟೈಫಾಯ್ಡ್ ಮೇರಿಯೇ ಅವಳಾಗಿರಬೇಕು ಎಂದು ಊಹಿಸಲ್ಪಟ್ಟಿತು. ಜನರು ಹೌಹಾರಿದರು.

ಎಲ್ಲಿಯೂ ಕೆಲಸಕ್ಕೆ ಸೇರುವ ಧೈರ್ಯವಾಗದೆ ಮೇರಿ ಬೀದಿಬೀದಿ ಅಲೆದಳು. ಮುಂದೆ ಅವಳು ಒಂದು ಜಾಹೀರಾತು ಓದಿದಳು. ಹಂ! ಈ ಸ್ಥಳದಲ್ಲಿ ಆದರೆ ಯಾರೂ ಸಂದೇಹಗೊಳ್ಳರು ಎಂದು ಅವಳಿಗನಿಸಿ ಅಲ್ಲಿ ಕೆಲಸ ಸಂಪಾದಿಸಿದಳು.

ಕೆಲವಾರಗಳ ನಂತರ ಸ್ಲೊವಾನ್ ಸ್ತ್ರೀಯರ ಆಸ್ಪತ್ರೆಯ ಡಾ. ಎಡ್ವರ್ಡ ಕ್ರೆಗಿನ್ನರಿಂದ ಡಾ. ಸೋಪರರಿಗೆ ಫೋನು ಬಂತು. "ನಮ್ಮಲ್ಲಿ ವಿಷಮಜ್ವರದ ಪಿಡುಗು ಬಂದಿದೆ" ಎಂದರು ಡಾ. ಎಡ್ವರ್ಡ್.

"ಟೈಫಾಯ್ಡ್ ಮೇರಿಯ ಪ್ರತಾಪವೇನು?" ಡಾ. ಸೋಪರರು ಕೇಳಿದರು.

"ಇರಬಹುದು. ನಮ್ಮಲ್ಲಿ ಒಬ್ಬಳು ಅಡಿಗೆಗಿದ್ದಾಳೆ. ಮೇರಿ ಮೆಲನ್ನಳ ಗುರುತನ್ನು ನೀವು ಹಿಡಿಯಬಲ್ಲಿರಾ ?"

ಹೌದೆಂದು ಡಾ. ಸೋಪರರು ಅಲ್ಲಿಗೆ ಹೋದರು. ಈ ಸಲ ಮೇರಿ ಮೆಲನ್ ಪ್ರತಿಭಟಿಸದೆ ಅಧಿಕಾರಿಗಳ ಕೈವಶವಾದಳು.

ಮತ್ತೆ ಅವಳನ್ನು ಮೊದಲಿಟ್ಟಿದ್ದ ಆಸ್ಪತ್ರೆಯಲ್ಲಿಯೆ ಇಡಲಾಯಿತು. ಅವಳೀಗ ಅದೃಷ್ಟಕ್ಕೆ ತಲೆವಾಗಿ ಜೀವನ ನಡೆಸತೊಡಗಿದಳು. ೧೯೩೮ರಲ್ಲಿ ಸಾಯುವ ವರೆಗೂ ಅವಳು ಹೀಗೆಯೇ ಬಾಳಿದಳು.

ಮುಂದೆ ಡಾಕ್ಟರರು ವಿಷಮಜ್ವರದ ವಿಚಾರದಲ್ಲಿ ಹೆಚ್ಚೆಚ್ಚು ಜ್ಞಾನ ಸಂಪಾದಿಸಿದರು. ವಿಷಮಜ್ವರದ ಜಂತುಗಳನ್ನು ದೇಹದಲ್ಲಿ ಧಾರಣ ಮಾಡಿ ಹಬ್ಬಿಸುವ ಜನರನ್ನು ಬಂಧಿಸುವ ಬದಲು ಅಂಥವರಿಗೆ ಯೋಗ್ಯ ಮಾರ್ಗದರ್ಶನ ಮಾಡಿ ಅವರು ನಿರುಪದ್ರವಿಗಳಾಗುವಂತೆ ಮಾಡಲು ಸಾಧ್ಯವಾಯಿತು. ಇಂಥವರು ಅಡಿಗೆಗೆ ಕೈಹಾಕದೆ, ಮಕ್ಕಳೊಂದಿಗೆ ವ್ಯವಹರಿಸದೆ, ಬೇನೆ ಬಂದವರನ್ನು ಉಪಚರಿಸದೆ, ಆಗಾಗ ವೈದ್ಯಕೀಯ ಪರೀಕ್ಷೆಗೆ ಒಳಗಾಗುತ್ತ ಇದ್ದರೆ ಗಂಡಾಂತರವನ್ನು ತಪ್ಪಿಸಿಕೊಳ್ಳಬಹುದು. ಈಗ ಇಂಥ ಜನರು ಮೇರಿ ಮೆಲನ್ನಳಂತೆ ಅಧಿಕಾರಿಗಳೊಂದಿಗೆ ಕಾದಾಡುವುದಿಲ್ಲ. ತಮ್ಮ ದೇಹದಲ್ಲಿರುವ ಅನಾಹುತದ ಪ್ರಜ್ಞೆಯಿಂದ ಅಧಿಕಾರಿಗಳೊಂದಿಗೆ ಸಹಕರಿಸಿ ಸಂಭವಿಸಬಹುದಾದ ಅಪಾಯವನ್ನು ತಡೆಗಟ್ಟುತ್ತಾರೆ. ಮೇರಿ ಮೆಲನ್ನಳ ನೆನಪು ಅವರನ್ನು ಸದಾ ಜಾಗ್ರತರನ್ನಾಗಿಡುತ್ತದೆ.

---

## ನಿದ್ದೆ–ಕನಸು

ಕನಸು ಹೆಂಡತಿ—ಅವಳಿಗೆಂದೂ
ಬಾಯಿ ಮುಚ್ಚಿಯೆ ಗೊತ್ತಿಲ್ಲ ;
ನಿದ್ದೆಯೆಂದರೆ ಗಂಡ—ಪಾಪ !
ಮೌನದಲಿ ಸಹಿಸುವನೆಲ್ಲ !

—ರವೀಂದ್ರನಾಥ

ಇದರ ಉಪಯೋಗ ಅನೇಕವಾಗಿದೆ.

# ಕಸ್ತೂರಿ

ಬಿ. ಎಸ್. ನರಹರಿರಾವ್



ಸೂರ್ಯನ ಪ್ರಚಂಡ ಕಿರಣಗಳು ಆ ಭೂಪ್ರದೇಶವನ್ನು ಮತ್ತಷ್ಟು ಭಯಂಕರವಾಗಿಮಾಡಿವೆ. ಮರುಭೂಮಿಯೆಂದರೆ ಸಾಕು, ನಮಗೆ ಅಲ್ಲಿಯ ಪರಿಸ್ಥಿತಿಯ ಅರಿವಾಗುತ್ತದೆ. ರಾಜ್ಯಭ್ರಷ್ಟನಾದ ಚಕ್ರವರ್ತಿ ಪತ್ನೀಸಮೇತ ಪ್ರಯಾಣ ಬೆಳೆಸುತ್ತಿದ್ದಾನೆ. ಪ್ರಕೃತಿ ರಾಜನ ಮೇಲೆ ಸೇಡುತೀರಿಸುತ್ತಿರುವಂತೆ ಅಲ್ಲಿನ ಸನ್ನಿವೇಶ. ರಾಣಿಯೋ ಗರ್ಭಿಣಿ; ಮರಳುಗಾಡಿನ ಬೇಸಿಗೆ ಆ ಕೋಮಲ ದೇಹವನ್ನು ತೀವ್ರಸಂಕಟಕ್ಕೊಳಮಾಡಿದೆ. ಕತ್ತಲೆಯ ನಂತರ ಅರುಣೋದಯದಂತೆ ಅವರ ಜೀವನವನ್ನು ಬೆಳಗಲಿರುವ ಪುತ್ರಜನನ ಈ ಪರಿಸ್ಥಿತಿಯಲ್ಲೇ ಆಗಬೇಕೆ? ರಾಜ ತನ್ನ ಪರಿವಾರದವರಿಗೆ ಬಹುಮಾನ ನೀಡಬೇಕೆಂದರೆ ಅವನ ಬಳಿ ಏನೂ ಉಳಿದಿಲ್ಲ. ವ್ಯಥೆಪಟ್ಟು ಆತ ಪುಟ್ಟ ಕರಂಡಕದಲ್ಲಡಗಿದ್ದ ಕಸ್ತೂರಿಯನ್ನೇ ಹಂಚಿದನಂತೆ. ಮೊಗಲ್ ಚಕ್ರವರ್ತಿ ಅಕ್ಬರನ ಜನನ ಈ ರೀತಿ ಮರಳುಗಾಡಿನಲ್ಲಾಯಿತು. ಕಸ್ತೂರಿಯಷ್ಟೇ ಪ್ರಖ್ಯಾತಿ ಪಡೆದು ವಿಶ್ವವ್ಯಾಪಿಯಾಗಿ ಆಚಂದ್ರಾರ್ಕವಾಗಿ ಸ್ಮೃತಿಪಟಲದಲ್ಲಿ ಈತನ ಹೆಸರು ಉಳಿದಿದೆ.

ಜಗತ್ಪ್ರಸಿದ್ಧವಾದ ಕಸ್ತೂರಿಯ ಪರಿಮಳವನ್ನು ತಮ್ಮ ಜೀವಮಾನದಲ್ಲಿ ಒಮ್ಮೆಯಾದರೂ ಅನುಭವಿಸದವರು ಬಹು ವಿರಳ. ಭಾರತದಲ್ಲಿ ಕಸ್ತೂರಿ ಶಿಶುಗಳ ಬೆಳವಣಿಗೆಯಲ್ಲಿ ಬಹು ಮುಖ್ಯ ಪಾತ್ರವಹಿಸಿದೆ ಆದುದರಿಂದ ನಮ್ಮೆಲ್ಲ

ರಿಗೂ ಪರಿಚಿತವಾಗಿದೆ.

ಕಸ್ತೂರೀ ಮೃಗವೆಂಬ ಗಂಡು ಜಾತಿಯ ಜಿಂಕೆಯೊಂದರಲ್ಲಿ ಈ ಪರಿಮಳದ ಗ್ರಂಥಿಗಳು ಅಡಗಿವೆ. ಮಧ್ಯ ಏಷ್ಯ, ಕಾಶ್ಮೀರ, ನೇಪಾಳ ದೇಶಗಳಲ್ಲಿ ಕ್ರಮಕ್ರಮವಾಗಿ ಈ ಜಿಂಕೆಗಳ ಗುಂಪು ನಶಿಸಿ ಹೋಗುತ್ತಿದೆ. ಮೂರ್ತಿ ಚಿಕ್ಕದಾದರೂ ಕೀರ್ತಿ ದೊಡ್ಡದೆನ್ನುವ ನಾಣ್ಣುಡಿಯಂತೆ ಕಸ್ತೂರಿ ಜಿಂಕೆಯು ಸುಮಾರು ಎರಡು ಅಡಿ ಎತ್ತರ ಮೂರು ಅಡಿ ಉದ್ದವಾಗಿರುತ್ತದೆ. ಕೇವಲ ಇಪ್ಪತ್ತು ಪೌಂಡು ತೂಗುವ ಈ ಪ್ರಾಣಿ ಚರ್ಮದ ಮೇಲೆ ಮಚ್ಚೆಗಳನ್ನು ಹೊಂದಿದೆ. ಈ ಜಿಂಕೆಯ ಮಾಂಸ ರುಚಿಯಾಗಿರುತ್ತದೆಯೆಂದು ಪ್ರತೀತಿ ಪಡೆದಿದೆ.

ಅತಿ ಚಿಕ್ಕ ವಯಸ್ಸಿನಿಂದ ಭಾರಿ ಪ್ರಮಾಣದಲ್ಲಿ ಈ ಜಿಂಕೆ ಸಂತಾನಾಭಿವೃದ್ಧಿ ಕಾರ್ಯದಲ್ಲಿ ತೊಡಗುತ್ತದೆ. ಈ ಸಂದರ್ಭ ಹೆಚ್ಚಿದಷ್ಟೂ ಈ ಪ್ರಾಣಿಗೆ ವಿನಾಶಕಾಲ ಹತ್ತಿರಹತ್ತಿರ ಸರಿಯುತ್ತದೆ. ಹೆಣ್ಣಿನೊಡನೆ ಸಮಾಗಮಹೊಂಗುವ ಈ ಋತುವಿನಲ್ಲೇ ಗಂಡು ಜಿಂಕೆಯಲ್ಲಿ ಹೆಣ್ಣನ್ನು ಆಕರ್ಷಿಸುವ ಸಲುವಾಗಿ ಗುಂಡಾಗಿ ಅಥವಾ ಮೊಟ್ಟೆಯಾಕಾರದಲ್ಲಿರುವ ಕಸ್ತೂರೀ ಗ್ರಂಥಿ ಅಥವಾ ಕೋಶ ಪೂರ್ಣ ಬೆಳವಣಿಗೆಯ ಅವಸ್ಥೆಯನ್ನು ಮುಟ್ಟುತ್ತದೆ. ಈ ವೇಳೆಯಲ್ಲಿ ಇಂತಹ ಪ್ರಾಣಿಗಳನ್ನು ಬೇಟೆಯಾಡಿ, ನಂತರ ಅವುಗಳನ್ನು ಕೊಂದು ಗ್ರಂಥಿಗಳಿಂದ ಸುಮಾರು ಎರಡು ಔನ್ಸ್ ಕಸ್ತೂರಿ ದ್ರವ ಪಡೆಯುತ್ತಾರೆ. ಅತ್ಯುತ್ತಮ ದರ್ಜೆಯ ಕಸ್ತೂರಿ ದೊರೆಯಲು ಪ್ರಾಣಿಗಳ ಸಂಭೋಗಕಾಲ ಉತ್ತಮ ಸನ್ನಿವೇಶವಾಗಿರುತ್ತದೆ. ಒಂದೊಂದು ವೇಳೆ ತನ್ನ ಗೊರಸಿನಿಂದ ಗಂಡು ಜಿಂಕೆ ಗ್ರಂಥಿಗಳನ್ನು ಒಡೆದು ದ್ರವ ಸುರಿಸುತ್ತದೆ.

ಗ್ರಂಥಿ ('ಪಾಡ್ಸ್')ಗಳಿಂದ ದ್ರವವನ್ನು ಬೇರ್ಪಡಿಸಿ ಅಥವಾ ಸಂಗ್ರಹಿಸಿ, ಎಣ್ಣೆಯಲ್ಲಿ ಅದ್ದಿ, ಒಣಗಿಸಿದಾಗ ಅತ್ಯುತ್ತಮ ದರ್ಜೆಯ ಕಸ್ತೂರಿ ದೊರೆಯುತ್ತದೆ. ಸೂರ್ಯರಶ್ಮಿಯ ಸಹಾಯದಿಂದ ಈ ಕಾರ್ಯ ನೆರವೇರಿಸಬಹುದು.

ಕಪ್ಪು ಬಣ್ಣ ಅಥವಾ ಕೆಂಪು ಮಿಶ್ರಿತ ವರ್ಣವುಳ್ಳ ಕಸ್ತೂರಿ ನೀರಿನೊಡನೆ ಸಂಪರ್ಕಹೊಂದಿದಾಗ ಪರಿಮಳಪೂರಿತ ದ್ರವವನ್ನು ಉತ್ಪತ್ತಿ ಮಾಡುತ್ತದೆ. ಕುದಿಯುವ ನೀರಿನಲ್ಲಿ ಕಸ್ತೂರಿ ಕರಗುತ್ತದೆ. ಕೊಂಚ ಕಹಿಯಾಗಿರುವ ಕಸ್ತೂರಿಯಲ್ಲಿ ಕೊಬ್ಬಿನ ಮತ್ತು ಅಂಟಿನ ಅಂಶಗಳಿವೆ. ಸುವಾಸನೆ ನೀಡುವ ರಾಸಾಯನಿಕ ವಸ್ತು ಕೇವಲ ಸೇಕಡ ೧.೫ ರಿಂದ ೨ ಭಾಗ ಇದರಲ್ಲಿದೆ. ಶಾಶ್ವತವಾದ ಪರಿಮಳವುಳ್ಳ ಕಸ್ತೂರಿ ಮೂಗಿನ ನರಗಳಿಗೆ ಅತಿ ಶೀಘ್ರವಾಗಿ ದಣಿವುಂಟುಮಾಡುತ್ತದೆ. ಕಸ್ತೂರಿ ಅತ್ಯಲ್ಪ ಪ್ರಮಾಣದಲ್ಲಿ (೩೦೦೦ ದಲ್ಲಿ ಒಂದಂಶದಷ್ಟು ಕೂಡ) ಇತರ ವಸ್ತುವಿನೊಡನೆ ಬೆರಕೆಯಾಗಿದ್ದರೂ ಇದರ ಸುವಾಸನೆ ಜನಗಳನ್ನು ಆಕರ್ಷಿಸುವ ಶಕ್ತಿ ಹೊಂದಿದೆ.

ಜಗತ್ತಿನಲ್ಲಿರುವ ಕಸ್ತೂರಿಮೃಗಜಾತಿಗಳ ಪೈಕಿ ' ಟಾರ್ಕ್ವಿನ್ ' ಎಂಬುದು ಅತ್ಯಂತ ಪ್ರಭಾವಶಾಲಿ ಹಾಗೂ ಅತ್ಯುತ್ತಮ ದರ್ಜೆಯದಾಗಿದೆ. ಭಾರತದಲ್ಲಿ ದೊರಕುವ ಕಾಮರೂಪ ಅಥವಾ ಅಸ್ಸಾಂ ರಾಜ್ಯದ ಕಸ್ತೂರಿ ನಮ್ಮ ದೇಶದಲ್ಲಿ ಉತ್ತಮ ಜಾತಿಯದೆಂದು ಪರಿಗಣಿಸಲ್ಪಟ್ಟಿದೆ.

ಪ್ರಾಯಶಃ ಶುದ್ಧವಾದ ಯಾವ ಇಂತಹ ವಸ್ತುವೂ ಬೆರಕೆಯಿಲ್ಲದೆ ದೊರೆಯಲಾರದೆಂಬ ಭೀತಿ ಅನೇಕ ಜನರಲ್ಲಿರುವುದು ಸಹಜ. ಕಸ್ತೂರಿ ಈ ಭೀತಿಯಿಂದ ದೂರವಾಗಿಲ್ಲ.

ಒಣಗಿದ ರಕ್ತ, ಮಾಂಸ, ಅಡಕೆ ಚೂರು, ಸಸ್ಯಗಳ ಬೀಜಗಳು ಕಸ್ತೂರಿಯೊಡನೆ ಬೆರಕೆ ಹೊಂದುತ್ತಿವೆ. ಶುದ್ಧವಾದ ಕಸ್ತೂರಿಯನ್ನು ಗುರುತಿಸುವ ಕಾರ್ಯ ಸುಲಭವಾದುದಲ್ಲ. ಕೆಲವು ಪರಿಚಿತವಾಗಿರುವ ಪರೀಕ್ಷಾವಿಧಾನಗಳನ್ನು ಇಲ್ಲಿ ಕೊಡಲಾಗಿದೆ.

ಸ್ಪರ್ಶಕ್ಕೆ ಮೃದುವಾಗಿರುವ, ನೀರಿನ ಮೇಲೆ ತೇಲುವ ಕೆಂಡದ ಮೇಲಿಟ್ಟಾಗ ದುರ್ವಾಸನೆ ಬರದಿರುವ ಕಸ್ತೂರಿ ಶುದ್ಧವಾದುದು. ಪಂಜಾಬ ರಾಜ್ಯದಲ್ಲಿ ಜನಪ್ರಿಯವಾದ ಕುತೂಹಲಕಾರಿಯಾದ ಪ್ರಯೋಗವೊಂದಿದೆ. ಇಂಗಿನ ಮೂಲಕ ದಾರವೊಂದನ್ನು ಹಾಯಿಸಿ ನಂತರ ಕಸ್ತೂರಿಯ

ಮೂಲಕ ಆ ರೀತಿ ಮಾಡಿದಾಗ ಕಸ್ತೂರಿಯ ವಾಸನೆ ದ್ರಾವಣದಲ್ಲಿ ಶುದ್ಧವಾಗಿದ್ದರೆ ಕಸ್ತೂರಿ ಬೆರಕೆಯಿಂದ ದೂರವಾಗಿದೆಯೆಂದು ಅವರು ಪರಿಗಣಿಸುತ್ತಾರೆ.

ಆಯುರ್ವೇದ ಮತ್ತು ಯೂನಾನಿ ವೈದ್ಯ ಪದ್ಧತಿಗಳಲ್ಲಿ ಕಸ್ತೂರಿ ನಮ್ಮ ದೇಶದಲ್ಲಿ ಹಲವಾರು ರೂಪಗಳಲ್ಲಿ ಬಹುಕಾಲದಿಂದ ಉಪಯೋಗವಾಗುತ್ತಿದೆ. ಕಸ್ತೂರಿ ಮಾತ್ರೆ ಬಹುಶಃ ಎಲ್ಲರ ಮನೆಯಲ್ಲಿರುತ್ತದೆ. ಸಣ್ಣಮಕ್ಕಳಿರುವ ಮನೆಯಲ್ಲಿ ಇದು ಅತ್ಯಾವಶ್ಯಕವಾದುದು. ಕಫ, ವಾತ, ವಿಷ, ನೆಗಡಿ, ಕೆಮ್ಮು, ರಕ್ತಪಿತ್ತ ನಿವಾರಣೆಗೆ ಕಸ್ತೂರಿ ಉಪಯುಕ್ತವಾಗಿದೆ. ಬಾಯಿಯ ದುರ್ವಾಸನೆಯನ್ನು ಕಸ್ತೂರಿ ನಾಶಮಾಡುತ್ತದೆ. ಇದರಂತೆ ಪಾರ್ಶ್ವವಾಯುವಿಗೆ ಇದು ದಿವ್ಯೌಷಧವಾಗಬಲ್ಲದೆಂದು ತಿಳಿದು ಬಂದಿದೆ. ಮಕ್ಕಳಿಗೆ ವಾಯು ಬಂದಾಗ ನರಗಳನ್ನು ಉತ್ತೇಜನಗೊಳಿಸಲು ಮನೆಮಟ್ಟದಲ್ಲಿ ಕಸ್ತೂರಿ ಬಳಸುತ್ತಿರುವುದು ಎಲ್ಲರಿಗೂ ತಿಳಿದಿದೆ. ತಮಿಳು ದೇಶದ ವೈದ್ಯರು ಇದರೊಡನೆ ಅಫೀಮು ಬೆರಸಿ ಉಪಯೋಗಿಸುತ್ತಾರೆ. ಆಧುನಿಕ ವೈದ್ಯಕೀಯ ಚಿಕಿತ್ಸಕರು ಕಸ್ತೂರಿಯನ್ನು ಇದೇ ಪರಿಣಾಮವುಂಟುಮಾಡಲು ಉಪಯೋಗಿಸಿರುವ ಸಂದರ್ಭಗಳು ಕಂಡುಬಂದಿವೆ.

ಸಾಬೂನಿನ ತಯಾರಿಕೆಯಲ್ಲಿ, ಉಣ್ಣೆ, ಫೆಲ್ಟ್, ಫರ್ಸ್ ಮತ್ತು ಪಕ್ಷಿಗಳ ಗರಿಗಳನ್ನು ರಕ್ಷಿಸಲು, ಸೊಳ್ಳೆ ಮತ್ತು ಕ್ರಿಮಿಕೀಟಕಗಳನ್ನು ನಾಶಮಾಡಲು ಕಸ್ತೂರಿ ಬಳಸಬಹುದು. ಭಾರತದಲ್ಲಿ ಆಯುರ್ವೇದದ ಔಷಧಿಗಳ ತಯಾರಿಕೆಯಲ್ಲಿ ಇದು ಹಿರಿಯ ಪಾತ್ರ ವಹಿಸಿದೆ.

ಬಹು ಬೆಲೆಯುಳ್ಳ ಈ ವಸ್ತುವನ್ನು ಕೃತಕ ರೀತಿಯಲ್ಲಿ ತಯಾರಿಸಲು ಪ್ರಯತ್ನಗಳು ಸತತವಾಗಿ ನಡೆಯುತ್ತಿವೆ. 'ಬಿಂತ್' ಎಂಬ ವಿಜ್ಞಾನಿ ಕ್ರಿ. ಶ. ೧೮೮೮ ರಲ್ಲಿ ಪ್ರಥಮತಃ ಕಸ್ತೂರಿಯಂತಹ ವಸ್ತುವನ್ನು ಪ್ರಯೋಗಶಾಲೆಯಲ್ಲಿ ತಯಾರು ಮಾಡಿದನು. ಇತ್ತೀಚಿಗೆ 'ಎಕ್ಸಾಲ್ಟೋಲೀಸ್' ಎಂಬ ಕೃತಕ ವಸ್ತು ನಿರ್ಮಾಣವಾಗಿದೆ. ಇಂಗಾಲವನ್ನು ಆಧಾರವಾಗುಳ್ಳ ಹಲವಾರು ಇಂತಹ ಕೃತಕ ವಸ್ತುಗಳು ಬೆಳಕಿಗೆ ಬಂದಿವೆ. ಕಸ್ತೂರಿ ವಾಸನೆಯುಳ್ಳ ಸಸ್ಯಗಳು ಸಹ ಕೆಲವಿವೆ.



# ನಿಮ್ಮ ಸೌಂದರ್ಯವೂ
# ಸಿನೆಮ ತಾರೆಯರ
# ಸೌಂದರ್ಯದಂತೆ ಆಕರ್ಷಕವಾಗಲಿ!

ನೀವು ಸಿನೆಮ ತಾರೆಯಾಗಿರುತ್ತಿದ್ದರೆ—ಚಲಚ್ಚಿತ್ರದಲ್ಲಿ ಅಥವಾ ಹೊರಗೆ ಪ್ರತಿದಿನವೂ ಯಾವ ಹೊತ್ತಿನಲ್ಲಿಯೂ ನಿಮ್ಮ ಚರ್ಮ ನಯ, ಮೃದು ಹಾಗೂ ಆಕರ್ಷಕವಾಗಿರಬೇಕಾಗಿದ್ದರೆ — ನೀವೂ ಸುಂದರಿ ಸಾವಿತ್ರಿಯಂತೆ ಮಾಡುತ್ತಿದ್ದಿರಿ. "ನನ್ನ ಚರ್ಮವನ್ನು ನಯ ಹಾಗೂ ಮೃದುವಾಗಿಡುವುದಕ್ಕೆ ನಾನು **ಲಕ್ಸ್ ಟಾಯಿಲೆಟ್** ಸೋಪಿನ ಸಮೃದ್ಧವಾದ, **ಸುವಾಸಿತ**ವಾದ ನೊರೆಯ ಮೇಲೆ ಭರವಸೆಯಿಡುತ್ತೇನೆ. ಅದು ನನ್ನ ನಿತ್ಯದ ಸೌಂದರ್ಯ.ಸಾಧನ" ಎಂದು ಅವಳು ಹೇಳುತ್ತಾಳೆ. ಸುಂದರಿ ಸಾವಿತ್ರಿಯಂತೆ ನೀವೂ ಲಕ್ಸ್ ಟಾಯಿಲೆಟ್ ಸೋಪನ್ನು ನಿಮ್ಮ ಸೌಂದರ್ಯಕ್ಕಾಗಿ ಆರಿಸಿರಿ.



ಸಾವಿತ್ರಿ
ಆರ್.ಆರ್
ಪಿಕ್ಚರ್ಸ್ ಅವರ
'ಶತ್ರುವರಾಯನ್'
ಚಿತ್ರದ
ಆಕರ್ಷಕ ತಾರೆ




ಶುದ್ಧವಾದ, ಬೆಳ್ಳಗಿನ

## ಲಕ್ಸ್ ಟಾಯಿಲೆಟ್ ಸೋಪು

ಸಿನೆಮ ತಾರೆಯರ ಸೌಂದರ್ಯದ ಸೋಪು

ಹಿಂದುಸ್ಥಾನ್ ಲೀವರ್ ಲಿಮಿಟೆಡ್, ಅವರಿಂದ ತಯಾರಿಸಲ್ಪಟ್ಟದ್ದು

LTS. 564-50 KN

# ನಿಮ್ಮ ಶಬ್ದ ಭಾಂಡಾರ ಬೆಳೆಯಲಿ

## ಶಬ್ದಭಾಂಡಾರವು ಹಣದ ಭಾಂಡಾರಕ್ಕಿಂತಲೂ ಅನಮೂಲ್ಯವಾಗಿದೆ

ಇಲ್ಲಿ ಪ್ರತಿ ತಿಂಗಳು ಕೆಲವು ಶಬ್ದಗಳನ್ನು ಪರಿಚಯ ಮಾಡಿ ಕೊಡಲಾಗುವದು. ಆಯಾ ಶಬ್ದದ ಮುಂದೆ ನಾಲ್ಕು ಅರ್ಥಗಳನ್ನು ಕೊಟ್ಟಿದ್ದು, ಅವುಗಳಲ್ಲಿ ಒಂದು ಮಾತ್ರ ಸರಿಯಾಗಿರುತ್ತದೆ. ನಿಮಗೆ ಸರಿಯೆನಿಸಿದ ಅರ್ಥವನ್ನು ಮೊದಲು ಆರಿಸಿಕೊಳ್ಳಿರಿ. ಆಮೇಲೆ ಇದರ ಬೆನ್ನಿನ ಪುಟ ನೋಡಿರಿ. ಅಲ್ಲಿ ಸರಿಯಾದ ಅರ್ಥಗಳನ್ನು ವಿವರಿಸಿದೆ.

೧. ಪ್ರಪತ್ತಿ
(ಅ) ಶರಣುಹೋಗುವಿಕೆ (ಆ) ಬೀಳುವುದು (ಇ) ಕಾಲಾಳು (ಈ) ಎಲೆ

೨. ನಿರವಿಸು
(ಅ) ಕೊನೆಗೊಳಿಸು (ಆ) ಕೂಗಾಡು (ಇ) ಹೇಳು (ಈ) ಉಪಚಾರ ಮಾಡು

೩. ದಂದುಗ
(ಅ) ಸಿಕ್ಕಾಬಟ್ಟೆ ವೆಚ್ಚ ಮಾಡುವವ (ಆ) ತೊಡಕು (ಇ) ಪೆಟ್ಟಿಗೆ (ಈ) ದುರ್ಬುದ್ಧಿ

೪. ನಿವೇದನೆ
(ಅ) ನೋವು (ಆ) ಊಟ (ಇ) ಅರಿಕೆ (ಈ) ಕ್ರೂರತನ

೫. ಪಿಪಾಸೆ
(ಅ) ನೀರು ತುಂಬುವ ಗುಡಾಣ (ಆ) ತೊದಲು ನುಡಿ (ಇ) ಬಯಕೆ (ಈ) ನೀರಡಿಕೆ

೬. ಅಂಬರ
(ಅ) ನೀರು (ಆ) ಆಕಾಶ (ಇ) ಬಾಣ (ಈ) ದೇವತೆ

೭. ಪರಿಣಯ
(ಅ) ಮದುವೆ (ಆ) ಒಲಿಸಿಕೊಳ್ಳುವಿಕೆ (ಇ) ಅಪಹಾರ (ಈ) ಸುತ್ತಾಡುವಿಕೆ

೮. ವಿಭ್ರಮ
(ಅ) ಹುಚ್ಚು (ಆ) ಓಟ (ಇ) ವಿಲಾಸ (ಈ) ಶೌರ್ಯ

೯. ವೈಮನಸ್ಯ
(ಅ) ಮೋಸ (ಆ) ಮೂಗಿನ ರೋಗ (ಇ) ವಿರಕ್ತಿ (ಈ) ದ್ವೇಷ

೧೦. ಕಳಲೆ
(ಅ) ಕದಿಯುವವಳು (ಆ) ಕುಸ್ತಿಯ ರಂಗ (ಇ) ಬಿದಿರಿನ ಎಳೆ ಕುಡಿ (ಈ) ಭತ್ತದ ಸಸಿ

೧೧. ಭರ್ತ್ಸನೆ
(ಅ) ಹೆಂಡತಿ (ಆ) ಜರೆಯುವುದು (ಇ) ತುಂಬಿಸುವಿಕೆ (ಈ) ಕಾಪಾಡುವವಳು

೧೨. ಇಲಾಜು
(ಅ) ಪರಿಹಾರೋಪಾಯ (ಆ) ನಾಚಿಕೆಗೇಡಿ (ಇ) ಭೂಮಿ (ಈ) ಪರೀಕ್ಷೆ



# 'ಶಬ್ದಭಾಂಡಾರ' ದ ಸರಿಯಾದ ಅರ್ಥಗಳು

೧. **ಪ್ರಪತ್ತಿ** (ಅ) ಶರಣು ಹೋಗುವಿಕೆ, ಆಶ್ರಯಿಸುವಿಕೆ, ಮರೆ ಹೋಗುವಿಕೆ (ವಿಶೇಷವಾಗಿ ದೇವರಲ್ಲಿ). **ಪ್ರಪನ್ನ** ಎಂದರೆ ನೀನೇ ಗತಿಯೆಂದು (ದೇವರಿಗೆ) ಶರಣುಹೋದವ; ಸೇರಿದವ. [ಸಂ.- ಪ್ರ = ವಿಶೇಷವಾಗಿ, ಪದ್ = ಹೋಗು.]

೨. **ನಿರವಿಸು** (ಇ) ಹೇಳು, ನಿರೂಪಿಸು, ವಿವರಿಸು; ಅಪ್ಪಣೆ ಮಾಡು; ಅರ್ಥ ವಿವರಣೆ ಮಾಡು; ತಿಳಿಸು. [ನಿರೂಪಿಸು— ಇದರ ತದ್ಭವ]

೩. **ದಂದುಗ** (ಅ) ತೊಡಕು; ತೊಂದರೆ, ಕ್ಲೇಶ, ಕಷ್ಟ; ಮುಂಗಾಣದಂಥ ಪರಿಸ್ಥಿತಿ. ಉದಾ. ಸಂಸಾರವೆಂಬುದು ದಂದುಗದ ನೆಲೆವೀಡು; ಅವನು ಅನೇಕ ದಂದುಗಗಳಿಗೆ ಒಳಗಾಗಿ ಸೋತನು. [ಕನ್ನಡ]

೪. **ನಿವೇದನೆ** (ಇ) ಅರಿಕೆ, ತಿಳಿಸುವಿಕೆ, ವಿಜ್ಞಾಪನೆ, (ಉದಾ. - ನಾನು ಮಾಡಿಕೊಂಡ ನಿವೇದನೆಯಿಂದ ಅವರಿಗೆ ಸಮಾಧಾನವಾಯಿತು); ಅಪ್ಪಣೆ; ಒಪ್ಪಿಸಿಕೊಳ್ಳುವಿಕೆ (ವಿಶೇಷವಾಗಿ ದೇವರಿಗೆ). [ಸಂ. ನಿ + ವಿದ್ ಎಂಬುದರಿಂದ]

೫. **ಪಿಪಾಸೆ** (ಈ) ನೀರಡಿಕೆ, ಕುಡಿಯುವ ಇಚ್ಛೆ. **ಪಿಪಾಸಿತ** = ನೀರಡಿಸಿದವ. **ಧನ ಪಿಪಾಸೆ** = ಹಣದ (ಮಿತಿ ಮೀರಿದ) ಆಸೆ. [ಸಂ.- ಪಿಪಾಸಾ = ಕುಡಿಯುವ ಇಚ್ಛೆ]

೬. **ಅಂಬರ** (ಅ) ಆಕಾಶ, ಬಾನು; ಅರಳೆ; ಬಟ್ಟೆ, ವಸ್ತ್ರ. **ಅಂಬರಗಾಮಿ** = ಆಕಾಶದಲ್ಲಿ ಹೋಗುವ. **ದಿಗಂಬರ** = ಬತ್ತಲೆಯಾದ (ದಿಕ್ಕೇ ಅಂಬರ ಅಂದರೆ ವಸ್ತ್ರವಾಗುಳ್ಳವ ಅರ್ಥಾತ್ ವಸ್ತ್ರವೇ ಇಲ್ಲದವ) [ಸಂಸ್ಕೃತ].

೭. **ಪರಿಣಯ** (ಅ) ಮದುವೆ, ವಿವಾಹ. **ಪರಿಣೀತೆ** = ಮದುವೆಯಾದವಳು [ಸಂ. - ಪರಿ = ಸುತ್ತಲೂ, . ನಯ = ಒಯ್ಯುವಿಕೆ- ವಧುವನ್ನು ಅಗ್ನಿಯ ಸುತ್ತ ವರನು ಕರೆದೊಯ್ಯುವುದರಿಂದ ಮದುವೆ ಎಂದರ್ಥ]

೮. **ವಿಭ್ರಮ** (ಇ) ಸ್ತ್ರೀಯರ ವಿಲಾಸ, ಒಯ್ಯಾರ (ಉದಾ.– ಸ್ತ್ರೀಯರು ಪ್ರಿಯಕರರಲ್ಲಿ ಆಡುವ ಮೊದಲ ಪ್ರೀತಿಯ ಮಾತೆಂದರೆ ವಿಭ್ರಮವೇ- ಕಾಳಿದಾಸ) [ಸಂ.]

೯. **ವೈಮನಸ್ಯ** (ಈ) ದ್ವೇಷ, ವೈರ, ಮನಃಕಷಾಯ; ವಿಷಾದ, ಚಿತ್ತವಿಕಲತೆ. (ಉದಾ. - ಅವರೊಳಗಿನ ವೈಮನಸ್ಯ ಹೆಚ್ಚಾಗಿತ್ತು ಅಂದರೆ ದ್ವೇಷ ಹೆಚ್ಚಾಗಿತ್ತು). [ಸಂ. - ವಿ + ಮನಸ್]

೧೦. **ಕಳಲೆ** (ಇ) ಬಿದಿರಿನ ಎಳೆಯ ಕುಡಿ. (ಇದನ್ನು ಪಲ್ಯ, ಉಪ್ಪಿನ ಕಾಯಿಗಳಿಗೆ ಉಪಯೋಗಿಸುತ್ತಾರೆ) **ಕಳಿಲೆ** ಎಂದೂ ಪ್ರಯೋಗ ಇದೆ. [ಕನ್ನಡ]

೧೧. **ಭರ್ತ್ಸನೆ** (ಅ) ಜರೆಯುವಿಕೆ, ನಿಂದೆ, ಬಯ್ಯುವಿಕೆ; ಬೆದರಿಕೆ ಹಾಕುವುದು. [ಸಂ.]

೧೨. **ಇಲಾಜು** (ಅ) ರೋಗದ ಪರಿಹಾರೋಪಾಯ, ಚಿಕಿತ್ಸೆ [ಹಿಂದುಸ್ತಾನಿ].

---

### ನಿಮ್ಮ ಶಬ್ದ ಶಕ್ತಿಯ ತರಗತಿ

ನೀವು ಎಷ್ಟು ಶಬ್ದಗಳಿಗೆ ಅರ್ಥ ಅರಿಸಿದ್ದು ಸರಿಯಾಗಿದೆಯೆಂದು ಎಣಿಸಿ ಕೆಳಗಿನಂತೆ ನಿಮ್ಮ ಶಬ್ದ ಶಕ್ತಿಯ ತರಗತಿಗಳನ್ನು ಅರಿಯಿರಿ.

| | | |
|---|---|---|
| ೬—೮ ಸರಿಯಿದ್ದರೆ | | ...ಸಾಧಾರಣ |
| ೯—೧೦ | ,, | ...ಉತ್ತಮ |
| ೧೧—೧೨ | ,, | ....ಅತ್ಯುತ್ತಮ |

ಅವಳೇನಾದಳೆಂದು ಇಂದಿಗೂ
ಪತ್ತೆಯಿಲ್ಲ.

# ಶಾಂತ ಸಾಗರವನ್ನು ಹಾರಲೆಳಸಿದಳಾಕೆ!

ರಾಬರ್ಟ್ ಡಿ ಲಾ ಕ್ರೌಸರ
ಗ್ರಂಥದ ಆಧಾರದಿಂದ

ವಿಮಾನದಿಂದ ಶಾಂತ ಸಾಗರವನ್ನು ದಾಟಿದ ಮೊದಲನೆಯ ಸ್ತ್ರೀಯಾಗಬೇಕು ಎಂಬುದು ಅವಳ ಮಹತ್ವಾಕಾಂಕ್ಷೆಯಾಗಿತ್ತು. ಇಂಥ ಸಾಹಸಕ್ಕುದ್ಯುಕ್ತಳಾದ ಎಮಿಲಿಯಾ ಇಯರ್ ಹಾರ್ಟ ಸುಶಿತ ವಿಮಾನ ಸಾರಥಿಯಾಗಿದ್ದಳು. ೧೯೩೨ ರಲ್ಲಿ ಅವಳು ಅಟ್ಲಾಂಟಿಕ್ ಸಾಗರವನ್ನು ವಿಮಾನದಲ್ಲಿ ದಾಟಿದ್ದಳು. ಅದಕ್ಕೂ ಕೆಲ ತಿಂಗಳ ಮುಂಚೆ ಅವಳು ಶಾಂತಸಾಗರದಲ್ಲಿ ಸಾನ್‌ಫ್ರಾನ್ಸಿಸ್ಕೊದಿಂದ ಹೊನೊಲುಲು ವರೆಗೆ ವಿಮಾನವನ್ನು ಹಾರಿಸಿದ್ದಳು.

೧೯೩೭, ಜುಲೈ ೧ರಂದು ನ್ಯೂಗಿನಿಯ ಲಾಯೆ ಎಂಬಲ್ಲಿಂದ ಅವಳು ಉಡ್ಡಾಣ ಮಾಡಲಿದ್ದಳು. ಅಂದು ಅವಳ ವಿಮಾನ ಪ್ರಯಾಣ ಸನ್ನದ್ಧವಾಗಿತ್ತು. ಆದರೆ ಆಕಾಶದಲ್ಲಿ ಕಪ್ಪು ಮೋಡಗಳು ಕವಿದು ಹವೆ ಪ್ರತಿಕೂಲವಾದ್ದರಿಂದ ಅವಳು ಅಂದು ಹೊರಡಲಾಗಲಿಲ್ಲ. ಜುಲೈ ೨ ರಂದು ಮುಂಜಾನೆ ಅವಳ ವಿಮಾನ ಉಡ್ಡಾಣ ಮಾಡಿತು.

ಈ ಸಲ ಹಸನ್ಮುಖದ ಗಂಡೆದೆಯ ಈ ಚೆಲುವೆ ತರುಣಿ ಜಗತ್ತಿನ ಪ್ರದಕ್ಷಿಣೆಯನ್ನು ವಿಮಾನ ಮೂಲಕ ಮಾಡಲೆಂದು ಸಂಕಲ್ಪಿಸಿ ಆಗಲೆ ೨೩,೦೦೦ ಮೈಲು ಹಾರಿದ್ದಳು. ನಾತಾಳ, ಡಕಾರ, ಏಡನ್, ಕರಾಚಿ, ಪೋರ್ಟಡಾರ್ವಿನ್ ಮಾರ್ಗವಾಗಿ ಬಂದಿದ್ದ ಅವಳು ಜುಲೈ ೨ರಂದು ನ್ಯೂಗಿನಿಯಿಂದ ೨,೬೦೦ ಮೈಲು ಹಾರಿ ಶಾಂತ ಸಾಗರದಲ್ಲಿಯ ಹೌಲ್ಯಾಂಡ ನಡುಗಡ್ಡೆಯಲ್ಲಿ ಇಳಿಯತಕ್ಕವಳಿದ್ದಳು.

ಕೇವಲ ಎರಡೂವರೆ ಮೈಲು ಉದ್ದ, ಎರಡು ಮೈಲು ಅಗಲವಾದ ಚಿಕ್ಕ ನಡುಗಡ್ಡೆಯಾಗಿತ್ತು ಹೌಲ್ಯಾಂಡ. ಅಮೇರಿಕೆ ೧೯೩೭ರಲ್ಲಿ ಹೌಲ್ಯಾಂಡದಲ್ಲಿ ಒಂದು ವಿಮಾನ ನಿಲ್ದಾಣವನ್ನು ಕಟ್ಟಿತ್ತು.

ಜುಲೈ ೨ ರಂದು ಹೌಲ್ಯಾಂಡ ಮಂಜಿನಿಂದ ಮುಚ್ಚಿಹೋಗಿತ್ತು. ವಿಮಾನ ನಿಲ್ದಾಣದಲ್ಲಿಯ ವಾಯರ್‌ಲೆಸ್ ಜನರು ತಂತಮ್ಮ ಯಂತ್ರಗಳ ಎದುರಿಗೆ ಎಮಿಲಿಯಾಳ ವಿಮಾನದಿಂದ ಬರುವ ಸಂದೇಶಗಳನ್ನು ಕೇಳಲು ಆತುರರಾಗಿ ಕುಳಿತಿದ್ದರು.

ಎಮಿಲಿಯಾ ಇಂಥ ಸಾಹಸಕ್ಕುದ್ಯುಕ್ತವಾಗುವುದು ಅಮೇರಿಕನ್ ಸರಕಾರಕ್ಕೇನೂ ಇಷ್ಟವಿರಲಿಲ್ಲ. ಆದರೆ ಅವಳು "ಈ ಉಡ್ಡಾಣದಲ್ಲಿಯ ಗಂಡಾಂತರಗಳನ್ನೆಲ್ಲ ನಾನು ಬಲ್ಲೆ. ಈ ಉಡ್ಡಾಣ ಮಾಡಬೇಕೆಂಬ ನನ್ನ ಆಕಾಂಕ್ಷೆಯಂತೆ ನಾನು ಉಡ್ಡಾಣ ಮಾಡುತ್ತಿದ್ದೇನೆ. ಗಂಡಸರಷ್ಟೇ ಸಾಹಸಗಳನ್ನು ಹೆಂಗಸರೂ ಮಾಡಬೇಕು. ಅವರು ಅಯಶಸ್ವಿಗಳಾದರೆ ಅವರ ಅಪಯಶಸ್ಸು ಇತರರಿಗೆ ಯಶಸ್ಸು ಸಂಪಾದಿಸಲು ಉತ್ತೇಜನವಾಗಬೇಕು," ಎಂದು ಹೇಳಿ ತನ್ನ ನಿರ್ಧಾರದಿಂದ ಕದಲಿದ್ದಿಲ್ಲ.

ಅವರ ಚಿಂತೆಗೆ ಕಾರಣವಿತ್ತು. ಶಾಂತ ಸಾಗರದ ಈ ಪ್ರದೇಶ ಶತಮಾನಗಳಿಂದ ರಹಸ್ಯಗಳ

ತವರೂರು. ಅದು ಬಲಿಗೊಂಡ ನಾವಿಕರಿಗೆ ಲೆಕ್ಕ ವಿರಲಿಲ್ಲ. ಅಲ್ಲಿನ ಸಮುದ್ರದ ವರ್ತನೆ ವಿಚಿತ್ರ ವಾಗಿತ್ತು. ಅಲ್ಲಿನ ದ್ವೀಪಗಳಲ್ಲಿ ನರಭಕ್ಷಕರು ವಾಸಿಸುತ್ತಿದ್ದಾರೆ. ಇಂಥ ದುರ್ಗಮ ಪ್ರದೇಶ ವನ್ನು ದಾಟುವೆನೆಂದು ಹೆಣ್ಣು ಹೆಂಗಸು, ಒಬ್ಬನೇ ಜತೆಗಾರ ವಿಮಾನ ಮಾರ್ಗದರ್ಶಕನೊಡನೆ ಹೊರಟಿದ್ದಳು.

ಜುಲೈ ೨ರಂದು ಮುಂಜಾನೆ ಹತ್ತು ಗಂಟೆಗೆ ಲಾಯೆದಿಂದ ಎಮಿಲಿಯಾ ಇಯರ್‌ಹಾರ್ಟಳ ವಿಮಾನ ಗಗನಕ್ಕೇರಿ ಪೂರ್ವಾಭಿಮುಖವಾಗಿ ಹೊರಟಿತು. ಸಂಜೆ ಆರು ಗಂಟೆಯ ಹೊತ್ತಿಗೆ ಹೌಲ್ಯಾಂಡನ್ನು ಮುಸುಕಿದ ಮಂಜು ಇನ್ನಿಷ್ಟು ದಟ್ಟವಾಗತೊಡಗಿತು ಇಯರ್‌ಫೋನ್ ಹಚ್ಚಿ ಕೊಂಡು ಕುಳಿತಿದ್ದ ಅಲ್ಲಿಯ ನಿಲ್ದಾಣದ ಆಪರೇಟರರು ಚಿಂತಾತುರರಾಗಿದ್ದರು.

ಒಮ್ಮೆಂದೊಮ್ಮೆ ವಾಯರಲೆಸ್ ಆಪರೇಟರ "ಹಾ! ಅವಳು ಮಾತಾಡುತ್ತಿದ್ದಾಳೆ" ಎಂದು ಸರಸರನೆ ಸಂದೇಶವನ್ನು ಬರೆದುಕೊಂಡ. ಚಿಕ್ಕದಾಗಿದ್ದ ಆ ಸಂದೇಶ ಕಳವಳದಾಯಕ ವಾಗಿತ್ತು:

"ಮಂಜಿನಲ್ಲಿ ಈಗ ತಾಸುಗಟ್ಟಲೆ ನಾನು ದಿಕ್ಕುಗಾಣದೆ ಹಾರುತ್ತಿದ್ದೇನೆ. ಇನ್ನೊಂದು ಅರ್ಧ ತಾಸು ಸಾಲುವಷ್ಟು ಪೆಟ್ರೋಲು ಮಾತ್ರ ವಿಮಾನದಲ್ಲಿದೆ. ಎಲ್ಲಿಯೂ ನೆಲ ಕಾಣಿಸುವು ದಿಲ್ಲ. ಆದರೆ ನಾನು ಹೌಲ್ಯಾಂಡಿನಿಂದ ನೂರು ಮೈಲಿಗಿಂತ ಹೆಚ್ಚು ದೂರದಲ್ಲಿರಲಿಕ್ಕಿಲ್ಲ."

ಆಗ ಸಂಜೆ ಏಳು ಹೊಡೆದು ಹನ್ನೆರಡು ಮಿನಿ ಟುಗಳಾಗಿದ್ದವು. ಎಮಿಲಿಯಾ ಇಯರ್‌ಹಾರ್ಟ ಅರ್ಧ ಗಂಟೆಯೊಳಗೇ ಮಂಜಿನ ಮಧ್ಯೆ ಹೌಲ್ಯಾಂಡನ್ನು ಹುಡುಕಿಕೊಳ್ಳಬೇಕಾಗಿತ್ತು. ಅರ್ಧ ತಾಸು ಮುಗಿದೊಡನೆ ಮಂಜು ಮುಸು ಕಿದ್ದ ಆ ನಡುಗಡ್ಡೆಯ ಮೇಲೆ ಇಳಿಯಬೇಕು. ಇಲ್ಲವಾದರೆ ವಿಮಾನವು ಸಮುದ್ರದಲ್ಲಿ ಬೀಳು ವದು. ಆಗ ಅದೇನಾದರೂ ತೇಲಿದರೆ ಮಾತ್ರ ಅವಳು ಬದುಕುಳಿಯಬಹುದು. ಇಲ್ಲವಾದರೆ....

ಹೌಲ್ಯಾಂಡಿನ ವಿಮಾನ ನಿಲ್ದಾಣದಲ್ಲಿ ಉರಿ ಗಳನ್ನು ಹಚ್ಚಿದರು. ಸರ್ಚ್‌ಲಾಯಿಟ ಪ್ರಕಾಶ ಆಕಾಶಕ್ಕೆ ತೂರಿತು.

"ನಾವು ನಿಮ್ಮ ಹಾದಿ ಕಾಯುತ್ತಿದ್ದೇವೆ, ದಯವಿಟ್ಟು ಉತ್ತರ ಕೊಡಿ" ಆಪರೇಟರ ಸಂದೇಶ ಕಳಿಸಿದ.

ಅದಕ್ಕೆ ಉತ್ತರ ಬರಲಿಲ್ಲ. ಹದಿನೈದು ಮಿನಿಟುಗಳು ಕಳೆದವು.

ಆಪರೇಟರರು ವಿಮಾನದ ಎಂಜಿನ ಸಪ್ಪಳ ವನ್ನು ಕೇಳಲೆಂದು ಕಿವಿಗಳನ್ನು ನಿಮಿರಿಸಿ ಕುಳಿ ತರು. ಮತ್ತೂ ಹತ್ತು ಮಿನಿಟುಗಳು ಗತಿಸಿದವು. ಮಂಜು ಕರಗತೊಡಗಿತ್ತು. ಮೋಡಗಳು ಮೇಲ ಕ್ಕೇರತೊಡಗಿದ್ದವು. ಇನ್ನು ವಿಮಾನದಲ್ಲಿರುವ ವರು ನಡುಗಡ್ಡೆಯನ್ನು ಕಾಣಬಹುದು ಎಂದು ಕೊಂಡರು.

ಮತ್ತೂ ಐದು ಮಿನಿಟುಗಳು ಜಾರಿದವು.

ಮಂಜು ತ್ವರಿತವಾಗಿ ಕರಗುತ್ತಿತ್ತು. ಗುರುತಿ ಗಾಗಿ ಹಚ್ಚಿದ್ದ ಉರಿಗಳನ್ನು ದೊಡ್ಡದು ಮಾಡ ಲಾಯಿತು. ಈ ಉರಿಗಳ ಮೇಲೆಯೇ ಎಮಿಲಿ ಯಾಳ ಜೀವನ-ಮರಣದ ನಿರ್ಣಯ ಅವಲಂಬಿ ಸಿದ್ದಿರಲೂಬಹುದು.

ಗಾಳಿ ಇನ್ನಿಷ್ಟು ಬಲವಾಯಿತು. ಅದು ಮಂಜನ್ನು ತೂರುತ್ತಿತ್ತು. ಎಲ್ಲವೂ ಸ್ಪಷ್ಟವಾಗ ತೊಡಗಿತ್ತು.

ಎಮಿಲಿಯಾಳ ಹೇಳಿಕೆಯಂತೆ ವಿಮಾನ ಇನ್ನು ಒಂದು ಮಿನಿಟಿನ ವರೆಗೆ ಹಾರುವಷ್ಟು ಮಾತ್ರ ಪೆಟ್ರೋಲನ್ನು ಹೊಂದಿತ್ತು. ಯಾವ ಕ್ಷಣದಲ್ಲಿಯಾದರೂ ಅದು ಕೆಳಗಿಳಿಯಬಹುದು ಎಂದು ಆಪರೇಟರರು ಭಾವಿಸಿಕೊಂಡರು.

ಆದರೆ ಎಂಟು ಗಂಟೆಯಾದರೂ ವಿಮಾನ ಕಾಣಿಸಲಿಲ್ಲ. ಅವಳ ಎಣ್ಣೆ ತೀರಿ ಅರ್ಧಗಂಟೆ ಯಾಗಿರಬೇಕು.

ಮತ್ತೆ ಮಂಜು ಕವಿಯತೊಡಗಿತು. ಹೌಲ್ಯಾಂಡ ನಡುಗಡ್ಡೆ ಮತ್ತೆ ಮೊದಲಿನಂತೆ ಅದರಲ್ಲಿ ಹುಗಿದುಹೋಯಿತು.

ಅಂದು ಮತ್ತೇನೂ ಸುದ್ದಿ ಬರಲಿಲ್ಲ. ಒಂದು ವಿಮಾನ, ನಿಲ್ದಾಣದಿಂದ ಶೋಧಕ್ಕಾಗಿ ಹೊರಟು ನಡುಗಡ್ಡೆಯಿಂದ ೯೦ ಮೈಲು ಅಂತರದ ವರೆಗೆ ಸುತ್ತುಹಾಕಿ ಬಂದಿತು. ಆದರೆ ಅದಕ್ಕೆ ಏನೂ

ಕಾಣಿಸಲಿಲ್ಲ.

ಹಾಲ್ಯಾಂಡಿನಲ್ಲಿದ್ದವರು ನಿರಾಶರಾದರು. ಆದರೂ ಅವರು ಸಾವಧರಾಗಿಯೆ ಇದ್ದರು. ಕೊನೆಗೆ ಅವರಿಗೊಂದು ಸಂದೇಶ ಬಂತು. ಅದು ಎಮಿಲಿಯಾಳಿಂದ ಬಂದಿರಲಿಲ್ಲ. 'ಅಚಿಲಿಸ್' ಎಂಬ ಬ್ರಿಟಿಶ್ ಹಡಗದಿಂದ ಬಂದಿತ್ತು. ಅದರಲ್ಲಿಯ ಆಪರೇಟರರು ತಮಗೊಂದು ಅವಸರದ ಸಹಾಯ ಯಾಚನೆಯ ಸಂದೇಶ ಬಂದಿದೆಯೆಂದೂ ಅದು ಎಮಿಲಿಯಾಳಿಂದಲೇ ಬಂದಿರಬೇಕೆಂದು ತಮ್ಮ ಕ್ಯಾಪ್ಟನ್ನರಿಗೆ ಅನಿಸಿದೆಯೆಂದೂ ಹೇಳಿದರು.

ಸಂದೇಶ ಬಂದಿರಬಹುದೆಂಬುದು ಇವರೂ ಒಪ್ಪಿದರು. ಆದರೆ ಅವಳು ಈಗ ಎಲ್ಲಿರಬಹುದೆಂಬುದು ಮಾತ್ರ ಅದರಲ್ಲಿರಲಿಲ್ಲ. ಬಹಳ ಹೊತ್ತಿನಿಂದ ದಾರಿ ತಪ್ಪಿದ ಅವಳು ತನ್ನ ಸ್ಥಾನವನ್ನು ಹೇಗೆ ತಾನೆ ನಿರ್ದೇಶಿಸಬಲ್ಲಳು? ವಿಮಾನ ಎಂದೋ ಸಮುದ್ರ ಕಂಡಿರಬೇಕು. ಆದರೆ ಒಂದು ಆಶೆ ಮಾತ್ರ ಇತ್ತು. ಎಮಿಲಿಯಾ ನುರಿತ ವೈಮಾನಿಕಳಾಗಿದ್ದುದರಿಂದಲೂ ಎಣ್ಣೆ ತೀರಿ ವಿಮಾನ ಹಗುರವಾಗಿದ್ದರಿಂದಲೂ ಸಮುದ್ರಕ್ಕೆ ಬಿದ್ದರೂ ಅದು ತೇಲುತ್ತಿರುವ ಸಂಭವವಿತ್ತು.

ಅಮೇರಿಕನ್ ಸರಕಾರ ಈ ಸಾಹಸಕ್ಕೆ ಪ್ರೋತ್ಸಾಹವಿತ್ತಿರದಿದ್ದರೂ ಈಗ ಎಮಿಲಿಯಾ ಗಂಡಾಂತರದಲ್ಲಿದ್ದುದರಿಂದ ಅವಳ ಶೋಧಕ್ಕೆ ಮುಂದೆ ಬಂತು. ಅಮೇರಿಕನ್ ನೌಕಾಪಡೆ ಶೋಧಕ್ಕೆ ತೊಡಗಿತು.

ಜುಲೈ ೪ರಂದು ಹಡಗಗಳು ಹೊರಟವು. ಒಂದು ಹಡಗದಲ್ಲಿ ವಿಮಾನಗಳೂ ಇದ್ದವು.

ವಿಚಿತ್ರವೆಂದರೆ ಎಮಿಲಿಯಾಳ ಶೋಧ ಇನ್ನೂ ಹತ್ತಿರದಿದ್ದರೂ ಅವಳ ಸಂದೇಶಗಳು ಕೇಳಿಬರುತ್ತಿದ್ದವು!

ಹಾಲ್ಯಾಂಡ, ಹೊನೊಲುಲು, ಸಾನ್‌ಫ್ರಾನ್ಸಿಸ್ಕೊ, ಆಸ್ಟ್ರೇಲಿಯ, ನ್ಯೂಝೀಲಂಡಗಳಲ್ಲಿ ವಾಯರಲೆಸ್ ಆಪರೇಟರರು ಇಪ್ಪತ್ತುನಾಲ್ಕು ತಾಸೂ ಸಾವಧರಾಗಿ ಸಂದೇಶವೇನಾದರೂ ಸಿಗುವದೇ ಎಂದು ಕಾದಿದ್ದರು.

ಜುಲೈ ೪ ರಂದು ಹಾಲ್ಯಾಂಡ ಮತ್ತು ಇಟಾಸ್ಕಾ ಎಂಬ ಹಡಗಿನ ಆಪರೇಟರರಿಗೆ ಗಂಡಾಂತರ ಸೂಚಕ ಸಂದೇಶಗಳು ಸಿಕ್ಕವು ಅವಳ ವಿಮಾನದ ಸೂಚಿ ಅಕ್ಷರಗಳಾದ ಕೆ ಎಚ್ ಎ ಕ್ಯೂ ಎಂಬ ಅಕ್ಷರಗಳು ಅವರಿಗೆ ಸ್ಪಷ್ಟವಾಗಿ ಕೇಳಿಸಿದವು. ಇದರಿಂದ ಎಮಿಲಿಯಾ ಮತ್ತು ಅವಳ ಜೊತೆಗಾರ ನೂನನ್ ಇಬ್ಬರೂ ಇನ್ನೂ ಬದುಕಿದ್ದಾರೆ ಎಂದು ಸಿದ್ಧವಾಯಿತು. ಅವರಿಬ್ಬರ ಧ್ವನಿಗಳೂ ಕೇಳಿಬಂದವು. ಕೆಲವು ಆಪರೇಟರರು "ನಾವು ಒಂದು ನಡುಗಡ್ಡೆಯ ಮೇಲಿದ್ದೇವೆ" ಎಂದು ಕೇಳಿಸಿತು ಎಂದರೆ ಇನ್ನು ಕೆಲವರು "ನಮ್ಮ ವಿಮಾನ ತುಫಾನು ಎದ್ದಿರುವ ಸಮುದ್ರದಲ್ಲಿ ತೇಲುತ್ತಿದೆ" ಎಂದು ಕೇಳಿಸಿತು ಎಂದು ಹೇಳಿದರು. ಮುಂದೆ ಬರಬರುತ್ತ ಧ್ವನಿ ಕೇಳಿಸದಂತಾಯಿತು.

ಆಶೆ, ನಿರಾಶೆ, ಆಶೆಗಳ ತೆರೆಗಳು ಎದ್ದವು. ಕೇಳಿಬಂದವೆಂದು ಹೇಳಲಾದ ಎಲ್ಲ ಸಂದೇಶಗಳನ್ನು ವಿಚಾರಿಸಿ ಹಡಗುಗಳು ಮತ್ತು ವಿಮಾನಗಳು ಶೋಧ ನಡೆಸಿದವು. ಎಲ್ಲಿಯೂ ಬಿದ್ದ ವಿಮಾನದ ಪತ್ತೆ ಹತ್ತಲಿಲ್ಲ. ಆದರೂ ಎಮಿಲಿಯಾಳ ಸಂದೇಶಗಳು ಬರುತ್ತಲೇ ಇದ್ದವು. ಜುಲೈ ೫ನೆಯ ತಾರೀಖೂ ಕಳೆದುಹೋಯಿತು.

ಒಂದು ವಾರದಿಂದಲೂ ಎಮಿಲಿಯಾಳ ಶೋಧಕ್ಕಾಗಿ ಅಲೆಯುತ್ತಿದ್ದ ಇಟಾಸ್ಕಾ ಹಡಗದ ಕಪ್ತಾನನಿಗೆ ಎಮಿಲಿಯಾ ಬದುಕಿದ್ದಾಳೆಂದು ನಂಬಿಕೆಯಿತ್ತು. ಅಂದು ಮುಂಜಾನೆ ಅವರಿಗೆ ಕಿತ್ತಳೆ ಬಣ್ಣದ ಆಕಾಶಬಾಣಗಳು ಸಮುದ್ರದಿಂದ ಮೇಲಕ್ಕೆ ಹಾರುತ್ತಿರುವದು ಕಾಣಿಸಿತ್ತು. ಸಮೀಪದಲ್ಲಿ ಆಗ ಯಾವ ಹಡಗೂ ಇರಲಿಲ್ಲ. ಅದರಿಂದ ಆಕಾಶಬಾಣಗಳು ಎಮಿಲಿಯಳ ವಿಮಾನದಿಂದಲೇ ಹಾರಿಸಲ್ಪಟ್ಟಿರಬೇಕು ಎಂದು ತಿಳಿದು ಅವರು ಧೈರ್ಯದ ಸಂದೇಶವನ್ನು ಅವಳಿಗೆ ಬಿತ್ತರಿಸಿ ಆಕಾಶಬಾಣಗಳು ಹಾರುತ್ತಿರುವ ಕಡೆಗೆ ಸಾಗಿದರು.

ಸ್ವಲ್ಪ ಮೊದಲಿನವರೆಗೆ ಹಾರುತ್ತಿದ್ದ ಆಕಾಶಬಾಣಗಳು ಈಗ ಮಾಯವಾಗಿಬಿಟ್ಟಿದ್ದವು. ಒಂದು ತಾಸಿನ ನಂತರ ಮತ್ತೆ ದೂರದಲ್ಲಿ ಆಕಾಶಬಾಣ

ಗಳು ಕಾಣಿಸುತ್ತಿವೆಯೆಂದು ಅವರು ವರದಿ ಮಾಡಿದರು.

ಆದರೆ ತಮ್ಮ ಪ್ರಯತ್ನ ವ್ಯರ್ಥವೆಂದು ಅವರಿಗೆ ಖಚಿತವಾಗಲು ಬಹಳ ಕಾಲ ಹಿಡಿಯಲಿಲ್ಲ. ಶಾಂತ ಸಾಗರದ ವಿಚಿತ್ರ ಲೀಲೆಗಳಲ್ಲಿ ಇದೂ ಒಂದಾಗಿರಬೇಕು. ವಾತಾವರಣದ ವಿಷಮ ದಾರ್ಢ್ಯದ ಕಾರಣದಿಂದ ಒಂದು ಬಗೆಯ ಸಮುದ್ರ ಮೃಗಜಲ ಉತ್ಪನ್ನವಾಗಿ ಸುಮ್ಮನೆ ಆಕಾಶ ಬಾಣಗಳು ಹಾರುವಂತೆ ಭಾಸವಾಗಿರಬೇಕೆಂದು ಅವರು ಕೈಚೆಲ್ಲಿ ಕುಳಿತರು.

ವೃತ್ತಪತ್ರಿಕೆಗಳಲ್ಲಿ ಈಗಾಗಲೇ ಎಮಿಲಿಯಾಳ ನಿಧನವಾಗಿರಬೇಕೆಂದು ಸುದ್ದಿ ಬರತೊಡಗಿತ್ತು. ಮೂವತ್ತೊಂಬತ್ತು ವರ್ಷದ ಆಕೆ ವಿಮಾನೋಡ್ಡಾಣದಲ್ಲಿ ಅದೃಶ್ಯಳಾಗಿಬಿಟ್ಟಿದ್ದಳು.

ವಿಮಾನ ನಡೆಸುವ ಶಿಕ್ಷಣ ಪಡೆಯಲೆಂದು ಅವಳು ಪಟ್ಟ ಶ್ರಮ, ಅವಳು ಅದಕ್ಕಾಗಿ ಕೈಕೊಂಡ ಬೇರೆ ಬೇರೆ ಬಗೆಯ ಉದ್ಯೋಗ ಎಲ್ಲವೂ ವರ್ಣಿಸಲ್ಪಡತೊಡಗಿದ್ದವು.

"ಅವಳಲ್ಲಿ ಒಂದೇ ಒಂದು ನ್ಯೂನತೆಯಿತ್ತು. ಅದೆಂದರೆ ಅಭಿಮಾನ. ಹೆಂಗಸು ಕೂಡ ಸಾಹಸದ ಕಾರ್ಯ ಮಾಡಬಲ್ಲಳು ಎಂದು ಸಿದ್ಧಪಡಿಸಬೇಕೆಂಬುದೇ ಅವಳ ಮಹತ್ವಾಕಾಂಕ್ಷೆಯಾಗಿತ್ತು. ಅಟ್ಲಾಂಟಿಕ್ ಸಾಗರದ ಉಡ್ಡಾಣ ಮಾಡಿದ ಮೊದಲನೆಯ ಮಹಿಳೆಯೇ ಅವಳು," ಎಂದು ಪತ್ರಿಕೆಗಳು ಬರೆದಿದ್ದವು.

ಜುಲೈ ೧೦ರಂದು ಎಮಿಲಿಯಾ ಶೋಧ ಕಾರ್ಯದಲ್ಲಿ ತೊಡಗಿದ ಲ್ಯಾಂಬ್ರೆಚ್ಟ್ ಎಂಬವನು ಫಿನಿಕ್ಸ ನಡುಗಡ್ಡೆಯ ಬಳಿ ವಿಮಾನದಿಂದ ಸಮುದ್ರದಲ್ಲಿಳಿದನು. ರಬ್ಬರ ದೋಣಿಯಲ್ಲಿ ಆತ ನಡುಗಡ್ಡೆಗೆ ಹೋದ. ಅಲ್ಲೇನಾದರೂ ಗುರುತು ಸಿಕ್ಕೀತು ಎಂದು ಆತನಿಗೆ ಆಶೆಯಿತ್ತು. ದೋಣಿಯಲ್ಲಿದ್ದಾಗ ದಂಡೆಯಲ್ಲಿ ಅಲ್ಲಿಯ ಮೂಲ ನಿವಾಸಿಗಳ ಜೊತೆಯಲ್ಲಿ ಬಿಳಿಯನೊಬ್ಬ ಮಾತಾಡುತ್ತಿರುವುದು ಅವನಿಗೆ ಕಾಣಿಸಿತು. ಆತನ ಬಳಿ ಸ್ತ್ರೀಯೇನಾದರೂ ಕಾಣಿಸುವಳೋ ಎಂದಾತ ಉತ್ಸುಕತೆಯಿಂದ ನೋಡಿದ. ಇಲ್ಲ. ಆದರೆ ಆ ಜನರ ಗುಂಪಿನಲ್ಲಿ ಇನ್ನೂ ಮೂವರು ಬಿಳಿಯರಿದ್ದರು.

ದಂಡೆಯನ್ನು ತಲುಪಿ ಆ ನಾಲ್ವರು ಬಿಳಿಯರನ್ನು ಕೇಳಿದಾಗ ಅವರು ಯಾವದೋ ಒಂದು ಮುಳುಗಿದ ಹಡಗದಿಂದ ಬದುಕುಳಿದು ತಾವಿಲ್ಲಿಗೆ ಬಂದಿರುವದಾಗಿ ಹೇಳಿದರು. ಆದರೆ ಅವರು ಮುಳುಗಿದ ಹಡಗದ ಹೆಸರು ಹೇಳಲು ನಿರಾಕರಿಸಿದರಲ್ಲದೆ "ನಾವಿಲ್ಲಿ ಸುಖವಾಗಿದ್ದೇವೆ. ನಮಗೇನೂ ಬೇಡ. ನಾವಿಲ್ಲಿಂದ ಹೊರಡಲಿಚ್ಛಿಸುವದಿಲ್ಲ," ಎಂದು ಹೇಳಿ ಮುಂದೆ ಏನನ್ನು ಕೇಳಿದರೂ ಮಾತಾಡಲಿಲ್ಲ.

ನಿರುಪಾಯನಾಗಿ ಲ್ಯಾಂಬ್ರೆಚ್ಟ್ ಹಿಂದಿರುಗಿದ. ಆದರೆ ಆ ನಡುಗಡ್ಡೆಯನ್ನು ಬಿಟ್ಟು ಹೊರಡುವ ಮೊದಲು ಆತ ಅನೇಕ ಸಲ ವಿಮಾನದಲ್ಲಿ ಅದಕ್ಕೆ ಪ್ರದಕ್ಷಿಣೆ ಹಾಕಿದ. ಅಲ್ಲಿಂದ ದೂರ ಹೋಗುತ್ತಿರುವಾಗಲೂ ಆತ ಅದೆಷ್ಟೋ ಸಲ ತಿರುಗಿ ನೋಡಿದ.

ಎಮಿಲಿಯಾ ಇಯರ್ ಹಾರ್ಟಳ ಗತಿ ಏನಾಯಿತು ಎಂಬುದು ಶಾಂತಮಹಾಸಾಗರದ ರಹಸ್ಯವಾಗಿಯೇ ಉಳಿಯಿತು.

ಅವಳ ಶೋಧಕ್ಕಾಗಿ, ಅವಳ ರಕ್ಷಣೆಗಾಗಿ ಅಮೇರಿಕದ ಸರಕಾರಕ್ಕೆ ಒಂದು ವಾರದ ವರೆಗೆ ದಿನಕ್ಕೆ ಹತ್ತು ಲಕ್ಷ ರೂಪಾಯಿ ವೆಚ್ಚವಾಗಿತ್ತು. ಎಲ್ಲವೂ ನೀರಲ್ಲಿ ಹೋಮ !



ಗಂಡಸರಿಗಿಂತ ಹೆಂಗಸರು ಗಟ್ಟಿ ಎಂಬ ಮಾತಿನಲ್ಲಿ ನಿಮಗೆ ನಂಬಿಕೆಯಾಗುವದಿಲ್ಲವಾದರೆ ಹೆಂಗಸರು ಸಾಮಾನು ಕೊಳ್ಳಲೆಂದು ಪೇಟೆಗೆ ಬಂದಾಗ ಅವರ ಸಂಗಡ ಸುತ್ತಾಡಿ ನೋಡಿ.

# ನಮ್ಮ ಸೊಸೆ-ಕಮಲು

ನನ್ನ ಅಣ್ಣನ ಮಗಳು ಕಮಲೂ ಸ್ಕೂಲಿಗೆ ರಜಾ ಸಿಕ್ಕಿ ನಮ್ಮೊಡನೆ ಕೆಲವು ದಿನಗಳನ್ನು ಕಳೆಯಲು ನಮ್ಮಲ್ಲಿಗೆ ಬಂದಂದಿನಿಂದ ನಮ್ಮ ಮನೆಯಲ್ಲಿ ಎಷ್ಟೋ ಬದಲಾವಣೆಗಳಾದುವು. ಮೊದಲು ನನಗೆ ಒಂದಲ್ಲ ಒಂದು ಕೆಲಸ ತಪ್ಪುತ್ತಲೇ ಇರ್ಲಿಲ್ಲ, ಆದರೆ ಈಗ ಕಮಲೂ ಇರೋದ್ರಿಂದ ಏನು ಕೆಲಸವಿದ್ರೂ ಒಂದು ಕ್ಷಣದಲ್ಲಿ ಆಗಿ ಬಿಡುತ್ತೆ.

ಬಟ್ಟೆಗಳನ್ನು ಒಗೆಯುವ ಕೆಲಸವನ್ನೇ ತೆಗೆದುಕೊಳ್ಳೋಣ. ಅದೇನೋ ಸಾಮಾನ್ಯ ಕೆಲಸಾಂತ ನಾನು ತಿಳಿದಿರೋದು. ಆದರೆ ಬಟ್ಟೆ ಒಗೆಯುವ ಸಾಬೂನು ಶುದ್ಧವಾಗಿರಬೇಕೆಂದು ಆಕೆ ಹೇಳಿದಾಗ ನನ್ನ ಆಶ್ಚರ್ಯಕ್ಕೆ ಮಿತಿಯಿರಲಿಲ್ಲ.

"ಶುದ್ಧವಾದ ಸಾಬೂನು ಬಟ್ಟೆಗಳನ್ನು ಬಹಳ ಚೆನ್ನಾಗಿ ಒಗೆಯುತ್ತದೆ ಮತ್ತು ಬಟ್ಟೆಗಳಿಗೂ ಕೈಗಳಿಗೂ ಹಾನಿಯನ್ನುಂಟುಮಾಡದಂತಹ, ಸಮೃದ್ಧವಾದ ನೊರೆಯನ್ನು ಕೊಡುತ್ತೆ" ಅಂದಳು ಕಮಲೂ.

ಅವಳು ಸನ್‌ಲೈಟ್ ಸೋಪನ್ನು ತಂದು ಅದು ಬಟ್ಟೆಗಳನ್ನು ಹೇಗೆ ಒಗೆಯುತ್ತದೆಂಬುದನ್ನು ನನಗೆ ತೋರಿಸಿದಳು. ಸ್ವಲ್ಪ ತಿಕ್ಕಿದಾಗ ಎಷ್ಟು ತುಂಬಾ ನೊರೆ ಬಂದು ಬಿಟ್ಟಿತು! ಅದನ್ನು ನೋಡಿ ನನಗೆ ಬಹಳ ಆನಂದವಾಯ್ತು. ಬಟ್ಟೆ ಒಗೆಯಲು ದೊಣ್ಣೆಯನ್ನು ಕಮಲೂಗೆ ಕೊಡೋದಕ್ಕೆ ಹೋದಾಗ ಆಕೆ ನಗುತ್ತ "ಇದು ಬೇಡ ಅತ್ತೆ, ಸನ್‌ಲೈಟ್‌ನಿಂದ ಒಗೆಯುವಾಗ ಬಟ್ಟೆಗಳನ್ನು





ಇಲ್ಲಿ ಹುಡುಗರು ಕರ್ನಾಟಕಕ್ಕೆ, ಹುಡುಗಿಯರು ಮಹಾರಾಷ್ಟ್ರಕ್ಕೆ ಮುಖಮಾಡಿ ನಿಂತಿದ್ದಾರೆ

# ಕಾ ರ ವಾ ರ

ಸುರೇಶ ವೇರ್ಣೇಕರ

ಸುಂದರಿಯೊರ್ವಳ ವರ್ಣನೆಯನ್ನು ಮಾಡುತ್ತಾ ಕೆ. ಎ. ಅಬ್ಬಾಸರು ತಮ್ಮ 'ಜಿಸಕೊ ಕಹತೇ ಹೈ ಇಸ್ಕ' ಕಾದಂಬರಿಯಲ್ಲಿ ಮುಂಬೈ ಮೀನುಗಾರ್ತಿಯರ ಕಣ್ಣುಗಳ ಚಂಚಲತೆಯನ್ನು ಕುರಿತು ಹೇಳುತ್ತಾರೆ. ಅವರನ್ನು ಎಂದಾದರೂ ನೀವು ನೋಡಿದ್ದೀರಾ? ಇಲ್ಲವಾದರೆ ನೀವು ಮುಂಬೈಗೆ ಹೋದಾಗ್ಗ ಮೀನದ ಮಾರ್ಕೆಟಿನಲ್ಲಿ ನಿಂತಿರುವ ಮೀನುಗಾರ ಚೆಲುವೆಯರನ್ನು ನೋಡಬೇಕು. ಅವರು ಮೈಗೆ ಗಟ್ಟಿಯಾಗಿ ಸುತ್ತಿಕೊಂಡಿರುವ ಸೀರೆ, ಕೈಗಳಲ್ಲಿ ಹಾಕಿಕೊಂಡಿರುವ ಬಂಗಾರದ ಬಳೆಗಳು ಮತ್ತು ಮುಡಿಯಲ್ಲಿ ಧರಿಸಿರುವ ಆ ಕೆಂಪು ಹೂಗಳನ್ನು ಕಂಡು ಮುಗ್ಧರಾಗಿ ಹೋದೀರಿ. ಆ ಹೂವನ್ನು ಕೊಂಕಣಿಯಲ್ಲಿ 'ಆಬೋಲಿ' ಎಂದು ಕರೆಯುತ್ತಾರೆ. ಅದು ಮುಂಬೈಯದಲ್ಲ; ಹಡಗಿನ ಮೇಲೇರಿ ಕಾರವಾರದಿಂದ ಬಂದದ್ದು; ಕನ್ನಡದಲ್ಲಿ ಅದನ್ನು ಅಬ್ಬಲ್ಲಿಗೆ ಎನ್ನುತ್ತಾರೆ.

ಪರ್ವತ ಸಮುದ್ರವನ್ನು ಮುಟ್ಟಲು ಯತ್ನಿಸುತ್ತಿದೆ; ನಂತರ ಸಮುದ್ರ ಪರ್ವತವನ್ನು ಮುಟ್ಟಲು ಹೊರಬಂದಿದೆ. ಇವುಗಳ ಮುಟ್ಟಾಟವನ್ನು ಮಧ್ಯದಲ್ಲಿ ನಿಂತು ಬೆರಗಿನಿಂದ ನೋಡುತ್ತಿದೆ ಕಾರವಾರ. ಪರ್ವತಾವಳಿ, ಅದಕ್ಕೆ

ಹೊಂದಿಕೊಂಡಿರುವ ಸಮುದ್ರ ಮತ್ತು ದಡದಲ್ಲಿ ನಿಂತಿರುವ ತೆಂಗಿನ ಮರಗಳು ಕಾರವಾರಕ್ಕೆ ನಿಸರ್ಗ ನೀಡಿದ ಸೌಂದರ್ಯದ ವರ್ಣಚಿತ್ರಗಳೆನ್ನಬೇಕು. ಸಂಜೆಯ ಹೊತ್ತಿನಲ್ಲಿ ನುಣ್ಣನೆಯ ಮಳಲಿನ ಮೇಲೆ ಕುಳಿತು ಭೋರ್ಗರೆದು ದಡಕ್ಕೆ ಚಾಚಿ ಮರಳುವ ಅಲೆಗಳನ್ನು ಕಂಡು, ಸಮುದ್ರ ಮಧ್ಯದಲ್ಲಿರುವ ದೇವಗಡದಿಂದ ಮಿಂಚುತ್ತಿರುವ ದೀಪವನ್ನು ನೋಡಿ ಯಾವ ರಸಿಕ ಮುಗ್ಧನಾಗಿ ಹೋಗಲಿಲ್ಲ? ಕಾರವಾರದಲ್ಲಿ ಕಲಕತ್ತೆಯಂಥ ದೊಡ್ಡ ದೊಡ್ಡ ಕಟ್ಟಡಗಳಿಲ್ಲ. ಭವ್ಯವಾದ ಮಿಲ್ಲುಗಳಿಲ್ಲ ಮತ್ತು ಹಾದಿಯಲ್ಲಿ ವಾಹನಗಳ ಓಡಾಟವಿಲ್ಲ. ಆದರೂ ಇದು ರವೀಂದ್ರರನ್ನು ತಣಿಸಿತು ಎಂಬುದನ್ನು ಮರೆಯಲಾದೀತೇ? ಅವರು ಇಲ್ಲಿ ಪ್ರಶಾಂತ ಸಮುದ್ರದ ಮೇಲೆ ಚಿಕ್ಕ ದೋಣಿಯೊಂದರಲ್ಲಿ ಬೆಳುದಿಂಗಳಲ್ಲಿ ತೇಲುತ್ತಲೇ ತಮ್ಮ "ಸಂನ್ಯಾಸಿ" ನಾಟಕವನ್ನು ಬರೆದರು.

ಕಾರವಾರವು ಬೈತಖೋಲ, ಕಾಜುಬಾಗ, ಕೋಡಿಬಾಗ, ಬಾಡ, ನಂದನಗದ್ದೆ ಮುಂತಾದವುಗಳಿಂದ ಕೂಡಿದ ಒಂದು ಪಟ್ಟಣ. ಊರು ಬೆಡಗಿನಿಂದ ಕೂಡಿಲ್ಲವಾದರೂ ಪ್ರಶಾಂತವಾಗಿದೆ. ಹುಬ್ಬಳ್ಳಿಯಿಂದ ಕಾರವಾರವನ್ನು ಪ್ರವೇಶಿಸುವಾಗ ಮೊದಲು ಹತ್ತುವದೇ ಬೈತಖೋಲ (ಈಗ ಬಂದರವಾಗಲಿರುವ ಪ್ರದೇಶ). ಈ ಸ್ಥಳವು ಮೊದಲಿನಿಂದಲೂ ಅರಬರ ವ್ಯಾಪಾರ ಕೇಂದ್ರವಾಗಿತ್ತು. ಅವಕ್ಕೇ ಅವರ ಸಂಸ್ಕೃತಿಯ ರೂಪವಾಗಿ ಆ ಹೆಸರು. (ಬೈತಖೋಲ = ಬೈತ + ಎಲ್ + ಖೋಲ = ಸುಗಮ ಬಂದರ.) ಉಳಿದುಕೊಂಡಿದೆ. ಬೈತಖೋಲವನ್ನು ದಾಟಿದ ನಂತರ ನಾವು ಪೇಟೆಯನ್ನು ಪ್ರವೇಶಿಸುತ್ತೇವೆ. ರಸ್ತೆಗಳು ಡಾಂಬರಿನವಿದ್ದು ಇಬ್ಬದಿಗಳು ಮಳಲಿನಿಂದ ಕೂಡಿ ಯಾವಾಗಲೂ ಸ್ವಚ್ಛವಾಗಿರುತ್ತವೆ. ದಾರಿಗೆ ಹತ್ತಿಕೊಂಡು ಮನೆಗಳು, ಪ್ರತಿಯೊಂದು ಮನೆಗೂ ತೆಂಗಿನ ಗಿಡಗಳಿಂದ ಕೂಡಿದ ತೋಟ ನಮಗೆ ಆನಂದವನ್ನುಂಟು ಮಾಡುತ್ತವೆ; ಒಂದಲ್ಲ ಇನ್ನೊಂದು ಬಾರಿ ಅಡ್ಡಾಡೋಣ ಎಂದು ಹೇಳುವಂತಿವೆ.

ಕಾರವಾರಕ್ಕೆ ಬಹು ಪುರಾತನವೆನ್ನಬಹುದಾದ ಇತಿಹಾಸವೂ ಕೂಡ ಉಂಟು. ಮೊದಲು 'ಕಡವಾಡ' ಎಂಬ ಹಳ್ಳಿಯಲ್ಲಿ ಇಂಗ್ಲೀಷರು ತಮ್ಮ ಫ್ಯಾಕ್ಟರಿಯನ್ನು ಆರಂಭಿಸಿದರು. ಅವರೇ ಈ 'ಕಾರವಾರ' ಎಂಬ ಹೆಸರನ್ನು 'ಡ' ಬದಲಾಗಿ 'ರ' ಸೇರಿಸಿ ಮಾಡಿದರು. ಇದು ಹದಿನೇಳನೇ ಶತಮಾನದಲ್ಲಿ ವಿಜಾಪುರದ ವಶದಲ್ಲಿದ್ದ ಬಂದರವಾಗಿತ್ತು. ಜಾನ ಫ್ರಾನ್ಸಿಕೋ ಎಂಬ ಪೋರ್ತುಗೀಜ ಸರದಾರನು ತನ್ನ ಹಡಗವೊಂದನ್ನು ಕೊಟ್ಟು ಫ್ಯಾಕ್ಟರಿಗಾಗಿ ಈ ಸ್ಥಳವನ್ನು ಆರಿಸಿಕೊಂಡ. ೧೬೩೮ ರಲ್ಲಿ ಇಂಗ್ಲೀಷರು ಇಲ್ಲಿ ಮೆಣಸಿನ ವ್ಯಾಪಾರವನ್ನು ಮಾಡಿದರೂ ೧೬೬೫ ರಲ್ಲಿ ಶಿವಾಜಿಯು ಇವರಿಂದ ಕರವನ್ನು ವಸೂಲು ಮಾಡಿದ. ೧೮೬೨ ರ ನಂತರ ಮುಂಬೈ ಸೇರಿದ ಕಾರವಾರವು ಜಿಲ್ಲಾ ಮುಖ್ಯ ಸ್ಥಳವಾಯಿತು. ಕನ್ನಡ ಅರಸರಾದ ವಿಜಯನಗರ, ಚಾಲುಕ್ಯ ಮತ್ತು ರಾಷ್ಟ್ರಕೂಟರೂ ಇದನ್ನು ಆಳಿದ ಬಗ್ಗೆ ಇತಿಹಾಸದ ಉಲ್ಲೇಖವುಂಟೆಂದು ಹೇಳಿದರೆ ನಿಮಗೆ ಬೆರಗಾದೀತು. ಅದು ಮಾತ್ರ ನಿಜ. ವಿಜಯನಗರದವರು ಕಾರವಾರವನ್ನು ತಮ್ಮ ವಶದಲ್ಲಿ ಇನ್ನೂರು ವರುಷಗಳ ವರೆಗೆ ಇಟ್ಟುಕೊಂಡಿದ್ದರು.

ಶೈಕ್ಷಣಿಕ ದೃಷ್ಟಿಯಿಂದ ಕಾರವಾರವು ಯಾವ ಕಾರಣದಿಂದಲೂ ಹಿಂದೆ ಬಿದ್ದಿಲ್ಲ. ಇಲ್ಲಿ ಪ್ರಸಿದ್ಧವಾದ ಎರಡು ಹಾಯಸ್ಕೂಲುಗಳುಂಟು. ಒಂದು ಹಿಂದೂ ಹಾಯಸ್ಕೂಲು; ಮೊದಲು ಸಣ್ಣ ಕಟ್ಟಡದಲ್ಲಿ ಪ್ರಾರಂಭವಾದದ್ದು ಈಗ ಭವ್ಯವಾದ ಸ್ವಂತ ಕಟ್ಟಡವನ್ನು ಕಾಣುತ್ತಿದೆ. ಇನ್ನೊಂದು ಸರಕಾರೀ ಹಾಯಸ್ಕೂಲು. ಈ ಹಾಯಸ್ಕೂಲ ಎದುರಿಗೇ ಕಲ್ಲಿನ ಕಟ್ಟಡದ ಚರ್ಚದೆ. ಇದರಲ್ಲಿಯ ಮೇರಿಯ ಮೂರ್ತಿ ನೋಡುವಂಥದು. ಈ ಸರಕಾರೀ ಹಾಯಸ್ಕೂಲಿನ ಬಳಿಯಲ್ಲೇ ಹುಚ್ಚರ ಆಸ್ಪತ್ರೆಯಿದೆ. ಅದನ್ನು ಸರಕಾರದವರು ಅಲ್ಲಿಯೇ ಏಕೆ ಕಟ್ಟಿದ್ದಾರೆಂಬುದು ಗೊತ್ತಿಲ್ಲ. ಒಟ್ಟಿನ ಮೇಲೆ ಅದು ಅಲ್ಲಿದೆ. ಅದೇ ಬೀದಿಯಿಂದ ಮುಂದೆ ಸಾಗಿದಾಗ ಸಿವ್ಹಿಲ್ ಆಸ್ಪತ್ರೆ

ಕಂಡುಬಂದು, ಕ್ಲೋರೋಫಾರ್ಮ ವಾಸನೆ ದಟ್ಟ ವಾಗಿ ಮೂಗಿಗೆ ಬಡಿದು ಹಿಂದೆ ಸರಿ ಎಂದು ಹೇಳುತ್ತದೆ. ಆಗ ನಮಗೆ ಹೊಸದಾಗಿ ಕಟ್ಟು ತ್ತಿರುವ ಟೆಕ್ನಿಕಲ್ ಹಾಯಸ್ಕೂಲು ಕಾಣು ತ್ತದೆ. ಭವ್ಯವಾಗಿ ಕಟ್ಟಿರುವ ಈ ಕಟ್ಟಡ ಕಾರವಾರದ ಶೋಭೆಯನ್ನು ಬೆಳಸಿದೆ.

ಕೋಡಿಬಾಗದ ಹತ್ತಿರ ಕಾಳೀ ನದಿಯು ಹಾವಿನಂತೆ ಸಹ್ಯಾದ್ರಿಯ ಪರ್ವತಾವಳಿಗಳಿಂದ ಹಾಯ್ದುಬಂದು ಮುಂದಕ್ಕೆ ಹೋಗಿ ಸಮುದ್ರ ವನ್ನು ಕೂಡಿದೆ. ಆ ನದಿ ಸಮುದ್ರವನ್ನು ಕೂಡುವ ದೃಶ್ಯ ರಮಣೀಯವಾದುದು. ಕಾಕಾ ಕಾಲೇಲಕರರು ಆ ದೃಶ್ಯಕ್ಕೆ ಮೋಹಿತರಾಗಿ ತಮ್ಮ ಹಲವು ಲೇಖಗಳಲ್ಲಿ ಅದನ್ನು ಪ್ರಸ್ತಾಪಿ ಸಿದ್ದಾರೆ. ಸಮುದ್ರತೀರದ ಚಬುಕಿನ ವನಗಳನ್ನು ಹಾದು ಸಾಗುತ್ತಿರುವಾಗ ಒಮ್ಮೆಲೇ ಈ ರಮ ಣೀಯ ಸಂಗಮ ನಮಗೆದುರಾಗಿ ಚಕಿತಗೊಳಿ ಸುತ್ತದೆಂದು ಅವರೆನ್ನುತ್ತಾರೆ. ಹುಣ್ಣಿಮೆಯ ದಿನ ಸೂರ್ಯಾಸ್ತ ಕಾಲಕ್ಕೆ ಕಾಳೀ ನದಿಯ ಸಂಗ ಮದಲ್ಲಿ ನಿಂತರೆ ಒಂದೆಡೆ ಸಮುದ್ರದಲ್ಲಿ ಇಳಿಯು ತ್ತಿರುವ ಸೂರ್ಯನ, ಇನ್ನೊಂದೆಡೆ ಮೂಡುತ್ತಿರುವ ಚಂದ್ರನ ಏಕಕಾಲದ ಸಪ್ರತಿಬಿಂಬವಾದ ದೃಶ್ಯ ವನ್ನು ಕಾಣುತ್ತೇವೆ. ಕಾಳೀ ನದಿಯ ಆಚೆಯ ದಂಡೆಗೆ ಸದಾಶಿವಗಡ ಎಂಬ ಊರಿದೆ. ಅದು ಮೊದಲು ಶಿವಾಜಿಯ ಕಾಲದ ಕೋಟೆಯಾಗಿದ್ದು ಭವಾನಿಯ ಮಂದಿರವಿತ್ತಂತೆ. ಕೋಡಿಬಾಗ ಮತ್ತು ಸದಾಶಿವಗಡದ ನಡುವೆ ಲಾಂಚುಗಳು ಓಡಾಡುತ್ತವೆ. ಅವುಗಳ ಓಡಾಟವನ್ನು ನೋಡಿ ದಾಗ ನಾವೂ ಒಂದು ಬಾರಿ ಕುಳಿತು ಸುತ್ತಾಡಿ ಬರೋಣ ಎಂದು ಅನಿಸುತ್ತದೆ. ಆ ಬಯಕೆ ಅಲ್ಲಿಯೇ ನಿಲ್ಲದೆ ಅದರಲ್ಲಿ ಕುಳಿತು ಕಾಳೀ ನದಿ ಯಲ್ಲಿ ಸುತ್ತಾಡಿದಾಗಲೇ ಸಮಾಧಾನ ಹೊಂದು ತ್ತೇವೆ.

ಕಾರವಾರದ ಸರಕಾರೀ ಭಾಷೆ ಕನ್ನಡ. ಜಿಲ್ಲೆಯ ಸಾಧಾರಣ ಎಲ್ಲ ಸ್ಥಳಗಳಲ್ಲೂ ಕನ್ನ ಡದ ಸಂಪರ್ಕ ಹೆಚ್ಚು ಕಂಡುಬರುತ್ತದೆ. ಪೇಟೆ ಯಲ್ಲಿ ಕೊಂಕಣೀ ಹೆಚ್ಚು ಮಾರಾಟವಾಗುತ್ತಿ ದ್ದರೂ ಕನ್ನಡವೂ ಸಿಗುತ್ತದೆ. ಇಲ್ಲಿ ಒಂದು ಸಮಯದಲ್ಲಿ ಕನ್ನಡ ಸಾಹಿತ್ಯ ಪರಿಷತ್ತು. ಏಕೀ ಕರಣ ಪರಿಷತ್ತು ಕೂಡಿತ್ತು. ಹದಿನೇಳನೆಯ ಕನ್ನಡ ಸಾಹಿತ್ಯ ಸಮ್ಮೇಲನ ಶ್ರೀ ಮುಳಿಯ ತಿಮ್ಮಪ್ಪಯ್ಯನವರ ಅಧ್ಯಕ್ಷತೆಯಲ್ಲಿ ಕೂಡಿದಾಗ (೧೯೩೧) ಕವಿ ಸಮ್ಮೇಳನದ ಅಧ್ಯಕ್ಷತೆಯನ್ನು ಕವಿ ವೀ. ಸೀತಾರಾಮಯ್ಯನವರು ವಹಿಸಿದ್ದರು. ಸಾಹಿತ್ಯ ವಿಷಯದಲ್ಲಿ ಕಾರವಾರ ಮುಂದಿಲ್ಲ ವಾದರೂ ಹಿಂದಿಲ್ಲ. ಇಲ್ಲಿ ಒಂದು ಸಾರ್ವಜನಿಕ ವಾಚನಾಲಯವಿದ್ದು ಜಿಲ್ಲೆಯಲ್ಲಿ ಪ್ರಸಿದ್ಧವಾ ಗಿದೆ ಕನ್ನಡದ ಪ್ರಭಾವ ಹೆಚ್ಚಿದೆಯೆಂದು ಮರಾಠೀ ಇಲ್ಲದೇ ಇಲ್ಲ. ಅದೂ ಇದೆ.

ಕಾರವಾರದ ಹೂಗಳಂತೆ ಕನ್ಯಾಪಿತೃಗಳೂ ಕೂಡ ಮುಂಬೈ ಕಡೆಗೇ ಮುಖವನ್ನು ಮಾಡಿ ನಿಂತಿದ್ದಾರೆ. ಅದಕ್ಕಾಗಿಯೇ ಅವರು ಮುಂಬೈಗೆ ಹೋಗಿ ಅಲ್ಲಿಯೇ ನೆಲಸಿ ನೌಕರಿ ಮಾಡುತ್ತಿರುವ ಕಾರವಾರೀ ತರುಣರಿಗೆ ತಮ್ಮ ಕನ್ಯೆಯನ್ನು ಕೊಡಲು ಅವಳಿಗೆ ಮರಾಠೀ ಶಿಕ್ಷಣವನ್ನೀಯು ತ್ತಾರೆ. ತಮ್ಮ ಮಗನು ಕನ್ನಡ ಕಲಿತರಡ್ಡಿಯಿಲ್ಲ, ಮಗಳು ಮಾತ್ರ ಮರಾಠೀ ಕಲಿಯಬೇಕು. ಓರ್ವ ಸರಕಾರೀ ನೌಕರರಿಗೆ ಮುಂಡಗೋಡಕ್ಕೆ ವರ್ಗ ವಾಗಿತ್ತು. ಅಲ್ಲಿ ತಮ್ಮ ಮಗಳಿಗೆ ಕಲಿಸಲು ಮರಾಠಿ ಶಾಲೆಯಿರಲಿಲ್ಲ. ಅದಕ್ಕಾಗಿ ಅವಳಿಗೆ ಅವರು ಕನ್ನಡ ಶಿಕ್ಷಣವನ್ನೀಯಲಿಲ್ಲ. ಹುಬ್ಬ-ಳ್ಳಿಯ ಸಂಬಂಧಿಕರೊಬ್ಬರಲ್ಲಿ ಅವಳನ್ನು ಇಟ್ಟು ಮರಾಠಿಯನ್ನೇ ಕಲಿಸಿದರು. ಮುಂದೆ ಆ ಕನ್ಯೆ ಕಾರವಾರದ ಕನ್ನಡ ಕಲಿತ ತರುಣನನ್ನೇ ಮದುವೆಯಾದಳು ; ಆ ಮಾತು ಬೇರೆ. ಆದರೆ ಹುಡುಗಿ ಮಾತ್ರ ಮರಾಠೀ ಶಿಕ್ಷಣ ಪಡೆಯಬೇಕು. ಇದನ್ನು ನೀವು ವಿಚಿತ್ರವೆನ್ನುವಿರಾ? ಅಲ್ಲ. ಅದೂ ಒಂದು ವೈಶಿಷ್ಟ್ಯ. ಒಂದೇ ಮನೆಯಲ್ಲಿ ಅಣ್ಣ ಕನ್ನಡ ಮತ್ತು ತಂಗಿ ಮರಾಠಿ. ಈ ರೀತಿ ಕೇವಲ ಒಂದೆರಡು ಮನೆಯಲ್ಲಿ ಅಲ್ಲ, ಸ್ವಾಭಾ-ವಾಗಿ ಪ್ರತಿಯೊಂದು ಮನೆಯಲ್ಲೂ ಕಂಡುಬರು ತ್ತದೆ. ಇದುವೇ ಕಾರವಾರದ ಮೇಲೆ ಮರಾಠಿ ಗರ ಬೇಡಿಕೆಗೆ ಕಾರಣವಾದ ಅಂಶ.

ಮೀನುಗಳ ವಿಷಯದಲ್ಲಿ ಕಾರವಾರವು ಮುಂದೆ ಇದೆ. ಪ್ರತಿ ವರ್ಷ ಎಷ್ಟೋ ಸಾವಿರ (ಐವತ್ತು ಸಾವಿರ) ಟನ್ನುಗಳಷ್ಟು ಮೀನುಗಳನ್ನು ಹಿಡಿದು ಪರ ಊರಿಗೆ ರವಾನೆ ಮಾಡಲಾಗುತ್ತಿದೆ. ಅದಕ್ಕಾಗಿ ಉತ್ತಮವಾದ ತಾಂತ್ರಿಕಶಾಲೆಯೊಂದುಂಟು.

ಕಾರವಾರವು ಪಶ್ಚಿಮ ಕರಾವಳಿಯ ಅತ್ಯುತ್ತಮ ನೈಸರ್ಗಿಕ ಬಂದರವಾಗಿದೆ ಅದನ್ನು ಪ್ರಥಮ ವರ್ಗದ ನೌಕಾಕೇಂದ್ರವಾಗಿಸಬೇಕೆಂದು ಹಲವು ದಶಕಗಳಿಂದ ಬೇಡಿಕೆ ಇದೆ. ಆದರೆ ಗೋವಾ ಬಂದರದ ಸಾಮೀಪ್ಯ, ಸ್ವತಃ ಕನ್ನಡಿಗರಲ್ಲೇ ಕಾರವಾರ–ಭಟಕಳ–ಮಲ್ಪೆ–ಮಂಗಳೂರುಗಳಲ್ಲಿ ಯಾವುದು ಪ್ರಥಮ ಸ್ಥಾನ ಪಡೆಯಬೇಕೆಂಬ ಬಗ್ಗೆ ವಿವಾದ, ಅನಂತರ ಧನಾಭಾವ ಇತ್ಯಾದಿ ಕಾರಣಗಳಿಂದ ಅದು ನಿಷ್ಕರ್ಷೆಯಾಗದೆ ಉಳಿಯಿತು. ಈಗ ಅದು ಮಧ್ಯಮ ತರದ ಬಂದರವಾಗಿ ರೂಪುಗೊಳ್ಳುವದು ಖಂಡಿತವಾದಂತಾಗಿದೆ. ಹೀಗಾದಾಗ ಕಾರವಾರದ ಆರ್ಥಿಕ ಭವಿತವ್ಯ ಸಿದ್ಧವಾದಂತೆಯೇ. ಆದರೆ ಅದು ತನ್ನ ನೈಸರ್ಗಿಕ ಸೌಂದರ್ಯವನ್ನು ಎಷ್ಟು ಉಳಿಸಿಕೊಳ್ಳುವದೋ ಹೇಳಲುಬಾರದು.

ಕಾರವಾರ ಪಶ್ಚಿಮ ಕರಾವಳಿಯ ಸುಂದರವಾದ ಪಟ್ಟಣ. ರವೀಂದ್ರರನ್ನು ಮೆಚ್ಚಿಸಿದ ಈ ಊರು ಕನ್ನಡಿಗರನ್ನು ಯಾವಾಗಲೂ ಆಹ್ವಾನಿಸುತ್ತದೆ. ಅದಕ್ಕೇ ಅವರದನ್ನು ಒಂದು ಬಾರಿ ನೋಡಿ ತಣಿಯಬೇಕು.



## ಬಾಳೆಯ ಗೊನೆಯನ್ನು ಹಣ್ಣಾಗುವ ಮೊದಲೇ ತೆಗೆಯಬೇಕೆ?

ಬಾಳೆ ಕಾಯಿಗಳು ಗಿಡದಲ್ಲಿ ಹಣ್ಣಾಗುವ ಮೊದಲೇ ಗೊನೆಯನ್ನು ಇಳಿಸುವುದು ಪದ್ಧತಿ. ಗಿಡದಲ್ಲೇ ಹಣ್ಣಾಗಗೊಟ್ಟರೆ ಅವು ತಿನ್ನಲು ಒಳಿತಾಗುವುದಿಲ್ಲ. ಗಿಡದಲ್ಲೇ ಅವು ಅರಸಿನವಾಗತೊಡಗಿದರೆ ಹಣ್ಣಿನ ಕಂಪು ಹೋಗಿಬಿಡುತ್ತದೆ. ಅಲ್ಲದೆ ಅದರ ತೊಗಲು ಒಡೆದು ಕ್ರಿಮಿಕೀಟಗಳು ತಿಳಲಿನೊಳಗೆ ಸೇರುತ್ತವೆ. ಆಗ ಹಣ್ಣು ಹಾಗುವುದರ ಬದಲು ಕೊಳೆತು ರುಚಿಗೆಟ್ಟು ಮನುಷ್ಯ ಭಕ್ಷಣೆಗೆ ನಿರುಪಯೋಗಿಯಾಗುತ್ತದೆ. ಕಾಯಾಗಿರುವಾಗ ಕೊಯ್ದರೆ ಮಾತ್ರ ಬಾಳೆ ಮಾಗಿದಂತೆ ಅದರೊಳಗಿನ ಪಿಷ್ಟವು ಸಕ್ಕರೆಯಾಗಿ ರೂಪಾಂತರ ಹೊಂದಿ ತಿನ್ನಲು ರುಚಿಕರವಾಗುತ್ತದೆ.

## ಮೀನುಗಳು ನಿದ್ರಿಸುವವೆ?

ಮೀನುಗಳು ಕಣ್ಣುಮುಚ್ಚಲಾರವಾದ್ದರಿಂದ ಅವು ಮೃಗ ಜಾತಿಯ ಪ್ರಾಣಿಗಳ ರೀತಿಯಲ್ಲಿ ನಿದ್ರಿಸಲಾರವು. ಆದರೆ ಪರೀಕ್ಷಿಸಿ ನೋಡಿದಾಗ ಅವುಗಳ ಚಟುವಟಿಕೆಗಳು ಕೆಲ ವೇಳೆ ಹೆಚ್ಚು, ಅನಂತರ ಕಡಿಮೆಯಾಗುವುದು ಸಿದ್ಧವಾಗಿದೆ. ಈ ನಿಷ್ಕ್ರಿಯ ಸಮಯದಲ್ಲಿ ಅವು ದೇಹಶಾಸ್ತ್ರ ದೃಷ್ಟಿಯಿಂದ ವಿಶ್ರಾಂತಿ ಪಡೆಯುವುದರಿಂದ ಅದೇ ಅವುಗಳ ನಿದ್ರೆ ಎನ್ನಬಹುದು.



# ಅಜ್ಜನ ಆಗಮನ

ತಾಯಿ ಸ್ನಾನ ಮಾಡಿಸುತ್ತಿದ್ದಾಗ ಲಕ್ಷ್ಮಿ ಬಚ್ಚಲುಮನೆಯ ತುಂಬ ಓಡಾಡುತ್ತಿದ್ದಳು. ತನ್ನ ಕೈಯ್ಯಲ್ಲಿದ್ದ ಹುಲ್ಲಿನ ಕೊಳವೆಯಿಂದ ಸಾಬೂನಿನ ಗುಳ್ಳೆಗಳನ್ನು ತಾಯಿಯ ಮುಖಕ್ಕೇ ಹಾರಿಸುತ್ತಿದ್ದಳು. ನಡು ನಡುವೆ ಪ್ರಶ್ನೆ: ''ಅಮ್ಮಾ, ದೊಡ್ಡಮ್ಮನ ಬಾಯಲ್ಲಿ ಹಲ್ಲಿದೆಯೆ?'' ''ಅಮ್ಮಾ, ಅಜ್ಜಯ್ಯನ ಪುಡಿಬುರುಡೆ ನನ್ನ ಹೊಟ್ಟೆಯಷ್ಟು ದೊಡ್ಡದಿದೆಯೆ? ಅಪ್ಪ ಹೇಳುತ್ತಿದ್ದ...''

ಮಗಳ ಮಾತು ಕೇಳಿ ರಾಧೆ ನಕ್ಕಳು: ಸ್ನಾನ ತೀರಿಸಿ ಮಗಳನ್ನು ಶಾಲೆಗೆ ಕಳಿಸಿದ ರಾಧೆ ಮನೆಯೊಳಗೆ ಬಂದು ಅಡಿಗೆಯ ತಯಾರಿ ನಡೆಸಿದಳು. ಆದರೂ ಅವಳ ಮನಸ್ಸು ಅತ್ತೆ-ಮಾವ ಬರ ಬಹುದೇ ಎಂದು ಚಿಂತಿಸುತ್ತಿತ್ತು. ಸುಂದರ ರಾಧೆಯನ್ನು ಮದುವೆಯಾದುದು ತಂದೆಯ ಇಚ್ಛೆಗೆ ವಿರೋಧವಾಗಿ.

ರಾಮರಾಯರ ಸಿಟ್ಟು ಶಾಂತವಾಗಲು ಆರು ವರ್ಷಗಳು ಬೇಕಾದವು. ಲಕ್ಷ್ಮಿ ಹುಟ್ಟಿದ ಸುದ್ದಿ ತಿಳಿದೂ ಅವರು ಮಗನ ಮನೆಗೆ ಬರಲಿಲ್ಲ. ಆರು ವರ್ಷಗಳು ಕಳೆದ ಮೇಲೆ, ಈಗ ಹದಿನೈದು ದಿನಗಳ ಹಿಂದೆ ರಾಧೆಯ ಅತ್ತೆಗೆ ಸೌಖ್ಯವಿಲ್ಲವೆಂದು ಕಾಗದ ಬಂದಿತ್ತು. ಸುಂದರ ''ಈ ಸಲ ಅಮ್ಮನನ್ನೂ, ಅಪ್ಪನನ್ನೂ ಖಂಡಿತ ಕರೆದುಕೊಂಡು ಬರುತ್ತೇನೆ, ರಾಧಾ . . . ಅಮ್ಮನಿಗಾಗಿಯಾದರೂ ಅಪ್ಪ ಬರಬಹುದು'' ಎಂದು ಹೇಳಿ ಹೋಗಿದ್ದ.

ಆ ದಿನದ ಹನ್ನೊಂದು ಘಂಟೆಯ ಗಾಡಿಗೆ ಸುಂದರ ಬರಬೇಕಿತ್ತು. ರಾಧೆಯ ಅಡಿಗೆಯ ತಯಾರಿ ಆರಂಭವಾಯಿತು. ಅತ್ತೆ, ಮಾವ ಮನೆಗೆ ಬರುವ ದಿನವೆಂದು ಕಾಯಿ ಹೋಳಿಗೆ, ರವೆ ಲಾಡು, ವಾಂಗೀ ಭಾತ್, ಮಾಡಬೇಕೆಂದು ರಾಧೆ ನಿಶ್ಚಯಿಸಿದ್ದಳು . . .

ಹನ್ನೊಂದೂವರೆಗೆ ಟ್ಯಾಕ್ಸಿಯ ಸದ್ದಾದಾಗ ರಾಧೆ ಹೆದರಿಕೊಂಡೇ ಬಾಗಿಲಿಗೆ ಬಂದಳು . . . ಮಾವ, ಅತ್ತೆ, ಜೊತೆಗೆ 'ಮೆಡಿಕಲ್' ಓದುತ್ತಿದ್ದ ಭಾವ ಮೈದುನ ರಾಜಾ ಎಲ್ಲ ಮನೆಗೆ ಬಂದಾಗ, ರಾಧಾ ಹಿರಿಯರಿಗೆ ನಮಸ್ಕರಿಸಿದಳು.

DL. 335A-X29 KN

ಹಸಿದು ಬಂದಿದ್ದ ರಾಜನೇ ಅತ್ತಿಗೆಯೊಡನೆ ಮೊದಲು ನಗೆಮಾತು ಆಡಿದವನು: "ಸ್ನಾನ ತೀರಿಸಿ ಬರುತ್ತೇನೆ, ಅತ್ತಿಗೆ . . . ಹೊಟ್ಟೆ ತುಂಬ ಹಸಿದಿದೆ. ಒಳ್ಳೆಯ ಊಟ ಹಾಕು ಬೇಗ" ಎಂದು ಹೇಳಿದ.

ರಾಧೆ ಎಲ್ಲರಿಗೂ ಕಾಫೀ ಕೊಟ್ಟು ಪುನಃ ಅಡಿಗೆಯ ಮನೆಗೆ ಬಂದಳು.

ಸುಂದರನೂ ಒಳಗೆ ಬಂದಾಗ ಅವನ ಜೊತೆಗೇ ರಾಮರಾಯರೂ ಮನೆ ನೋಡುತ್ತಾ ಅಡಿಗೆಯ ಮನೆಗೆ ಬಂದರು. ಆಗ "ಸ್ವಲ್ಪ ಆ 'ಡಾಲ್ಡಾ' ಡಬ್ಬ ತೆಗೆದು ಅದರ ಸೀಲ್ ಒಡೆದು ಕೊಡಿ." ಎಂದು ರಾಧಾ ಗಂಡನೊಡನೆ ಕೇಳಿದಳು. ಸುಂದರ 'ಡಾಲ್ಡಾ' ಡಬ್ಬ ತೆಗೆಯಲೆಂದು ಹೋದಾಗ ಮಾತ್ರ ರಾಮರಾಯರು ಒಮ್ಮೆಗೇ ಕಿರಿಚಿಕೊಂಡರು:

"ಏನು 'ಡಾಲ್ಡಾ'ನೇ? ಸುಂದರಾ, ಏನೋ ಇದು? ನಿಮ್ಮಮ್ಮನ ಆರೋಗ್ಯ ಸುಧಾರಣೆಗೆಂದು ಇಲ್ಲಿಗೆ ಬಂದರೆ 'ಡಾಲ್ಡಾ' ತಿನ್ನಿಸುತ್ತೀಯೇನು?"

ಸುಂದರ ರಾಧೆಯರಿಬ್ಬರೂ ಕಕ್ಕಾ ಬಿಕ್ಕಿಯಾದರು. ಅದೇ ಹೊತ್ತಿಗೆ ಸ್ನಾನ ತೀರಿಸಿ ರಾಜ ಮನೆಯೊಳಗೆ ಬಂದ; "ಏನತ್ತಿಗೆ ಅದು ಗಲಾಟೆ?" ಎಂದು ಕೇಳುತ್ತಾ.

ರಾಧೆ ಮಾತನಾಡಲಿಲ್ಲ. ಆಗ ರಾಮರಾಯರೇ ಪುನಃ ಹೇಳಿದರು: "ನೋಡೋ ರಾಜಾ . . . ಈ ಮನೆ ನಡೆಯೋದೇ 'ಡಾಲ್ಡಾ'ದಿಂದ ಅಂತ ಕಾಣತ್ತೆ. ಆರೋಗ್ಯಕ್ಕಾಗಿ ಬಂದರೆ ಅವಲಕ್ಷಣ . . ."

ರಾಜ ನಗತೊಡಗಿದ. "ಒಳ್ಳೇ ಮಾತಾಡಿದೆ, ಅಣ್ಣ . . . ಆರೋಗ್ಯಕ್ಕಾಗಿ ಬಂದರೆ ಅವಲಕ್ಷಣಾಂತೆ . . . 'ಡಾಲ್ಡಾ' ಆರೋಗ್ಯಕ್ಕಾಗೀನೇ ಇದೆ ಅಣ್ಣಾ . . . ದೇಹಕ್ಕೆ ಬೇಕಾದ ಜೀವನ ಸತ್ವ, ಜೀವವರ್ಧಕ ವಿಟಮಿನ್ 'ಎ' ಒಳ್ಳೆಯ ತುಪ್ಪದಲ್ಲಿರುವಷ್ಟೇ 'ಡಾಲ್ಡಾ'ಕ್ಕೂ ಸೇರಿಸುತ್ತಾರೆ. ವಿಟಮಿನ್ 'ಡಿ' ಕೂಡ ಅದಕ್ಕೆ ಸೇರಿಸುತ್ತಾರೆ. ಕೊಬ್ಬು ಕೂಡಿದ ಸಮ ತೂಕದ ಆಹಾರ ಎಲ್ಲರಿಗೂ ಅಗತ್ಯ. 'ಡಾಲ್ಡಾ' ಕೊಬ್ಬಿಗೆ ಅತ್ಯುತ್ತಮ. ಅಷ್ಟೆಯೇ? 'ಡಾಲ್ಡಾ' ಕಡಿಮೆ ಬೆಲೆಗೆ ಸಿಗತ್ತೆ."

ಮೆಡಿಕಲ್ ಕಾಲೇಜಿನಲ್ಲಿ ಅಭ್ಯಾಸ ಮಾಡುತ್ತಿದ್ದ ಮಗ ರಾಜನೂ ಹೀಗೆ ಮಾತನಾಡಿದಾಗ ರಾಮರಾಯರಿಗೆ ಏನು ಹೇಳುವುದೆಂದು ತಿಳಿಯಲಿಲ್ಲ. ಅವರಿಗೆ ರಾಜನೆಂದರೆ ತುಂಬ ಪ್ರೀತಿ. ಅಲ್ಲದೆ ಅವನು ತಿಳಿದ ಹುಡುಗ ಎಂಬ ಭರವಸೆ ಬೇರೆ.

ಆದರೂ ತನ್ನ ಸಂದೇಹ ಹೋಗಿಲ್ಲ ಎನ್ನುವಂತೆ ರಾಜನೊಡನೆ ಕೇಳಿದರು "ಆದರೆ ಎಲ್ಲರೂ 'ಡಾಲ್ಡಾ' ತಿಂದರೆ ದೇಹಕ್ಕೆ ಒಳ್ಳೆಯದಲ್ಲ ಎಂದು ಹೇಳುತ್ತಾರಲ್ಲೋ ರಾಜೂ, ಅದೆಲ್ಲ ಸುಳ್ಳೇನೋ?"

"ಎಲ್ಲ ಸುಳ್ಳಣ್ಣ, ಸುಳ್ಳು. 'ಡಾಲ್ಡಾ' ದೇಹಕ್ಕೆ ತುಂಬ ಹಿತಕಾರಿ. ಅದು ಸಿಗೋದು ಖರ್ಜೂರದ ಮರದ ಚಿತ್ರವಿರುವ ಸೀಲ್ ಮಾಡಿದ ಡಬ್ಬಗಳಲ್ಲಿ . . ." ಹೀಗೆ ಹೇಳಿದ ರಾಜ ಒಳಗೆ ಬಂದು ರವೆ ಲಾಡಿನ ಪಾತ್ರೆಗೇ ಕೈ ಹಾಕಿದ . . . ರಾಜ, ಸುಂದರ ಇಬ್ಬರೂ ನಗುತ್ತ ಲಾಡು ತಿನ್ನಲಾರಂಭಿಸಿದ್ದನ್ನ ನೋಡಿ ರಾಮರಾಯರು ತಾನೂ ಒಂದು ಲಾಡು ತೆಗೆದು ಕೊಂಡು ತಿಂದರು.

ಅಷ್ಟರಲ್ಲಿ ಹೊರಗಿನಿಂದ ಲಕ್ಷ್ಮಿ ಓಡಿ ಬಂದಳು: "ಅಪ್ಪಾ, ಅಜ್ಜನ ಪುಡಿಬುರುಡೆ ನನ್ನ ಹೊಟ್ಟೆಯಷ್ಟು ದೊಡ್ಡ ಇದೆಯೋ?" ಎಂದು ಕೇಳುತ್ತಾ.

ಲಾಡು ತಿನ್ನುತ್ತಿದ್ದ ರಾಮರಾಯರು ಓಡಿ ಹೋಗಿ ಮಗುವನ್ನು ಎತ್ತಿ ತಬ್ಬಿಕೊಂಡರು. ಲಕ್ಷ್ಮಿ ನಗುತ್ತಿದ್ದಳು. ಆಗ ರಾಜ ಪುನಃ ಹೇಳಿದ: "ನೋಡಣ್ಣ, ಅತ್ತಿಗೆ 'ಡಾಲ್ಡಾ'ದಿಂದ ತಯಾರಿಸಿದ ಒಳ್ಳೆಯ ಆಹಾರ ಕೊಟ್ಟೇ ಲಕ್ಷ್ಮಿನ್ನ ಬೆಳಸಿರಬೇಕು. ಎಷ್ಟು ಮುದ್ದು ಮುದ್ದಾಗಿ ರವೆಲಾಡಿನ ಹಾಗಿದ್ದಾಳೆ?"

ರಾಮರಾಯರು ನಗುತ್ತಾ ಒಂದು ಲಾಡಿನ ತುಂಡನ್ನು ಲಕ್ಷ್ಮಿಯ ಬಾಯಿಗೆ ತುರುಕಿದರು.

ರಾಧೆ, ಮೊಮ್ಮಗಳನ್ನು ನೋಡಲು ಮೆಲ್ಲಮೆಲ್ಲ ಅಡಿಗೆಯಮನೆಗೆ ಬಂದ ಗೌರಮ್ಮ ನಗತೊಡಗಿದರು.

# ನಗೆ ಮಲ್ಲಿಗೆ

## ಸಂಸಾರದ ಆಟ

ಸಿನೇಮಾ ತಾರೆಯ ಏಳು ವರ್ಷದ ಮಗಳೊಬ್ಬಳು ಅದೇ ವಯಸ್ಸಿನ ಇಬ್ಬರು ಹುಡುಗರೊಂದಿಗೆ ಆಡುತ್ತಿದ್ದಳು.

ಅವಳು ಆ ಹುಡುಗರಿಗೆ, "ನಾವು ಸಂಸಾರದ ಆಟ ಆಡೋಣ. ನಾನು ತಾಯಿಯಾಗುತ್ತೇನೆ. ಇವ ನನ್ನ ಗಂಡನಾಗಲಿ, ಮತ್ತು ನೀನು (ಇನ್ನೊಬ್ಬ ಹುಡುಗನಿಗೆ) ನನ್ನ ಮೊದಲಿನ ಗಂಡನಾಗು'' ಎಂದಳು.

## ಅನುಭವ

ಅವಳು ಸ್ಟೆನೋ ಟೈಪಿಸ್ಟ ಕೆಲಸಕ್ಕೆ ಅರ್ಜಿ ಹಾಕಿದ್ದಳು, ಮತ್ತು ಇಂಟರ್‌ವ್ಯೂಗೆ ಕರೆ ಬಂದಿತ್ತು. ಬೇರೆ ಆಫೀಸಿನಲ್ಲಿ ಕೆಲಸ ಮಾಡಿ ತನಗೆ ಅನುಭವವುಂಟೆಂದು ಅವಳು ಹೇಳಿದಳು.

"ನಿಮ್ಮ ಕಾರ್ಯಕೌಶಲಕ್ಕೆ ಉದಾಹರಣೆಗಳನ್ನು ಕೊಡಬಲ್ಲಿರಾ ?'' ಎಂದು ಅವಳಿಗೆ ಕೇಳಲಾಯಿತು.

"ಓಹೋ, ಈಚೆಗೆ ಚಕ್ರಬಂಧ ಸ್ಪರ್ಧೆಯಲ್ಲಿ ನನಗೆ ಬಹುಮಾನ ಬಂದಿದೆ.''

"ಆದಾಯಿತು, ಆದರೆ ಆಫೀಸಿನ ಕೆಲಸದ ಕೌಶಲದ ವಿಚಾರ ನಾವು ಕೇಳುತ್ತಿರುವುದು'' ಎಂದರು ಇಂಟರ್‌ವ್ಯೂ ತೆಗೆದುಕೊಳ್ಳುವವರು.

"ನಾನೂ ಅದೇ ಹೇಳುವುದು'' ಎಂದಳಾ ಉಮೇದ್ವಾರಿಣಿ. "ನಾನು ಚಕ್ರಬಂಧ ಬಿಡಿಸುತ್ತಿದ್ದುದು ಆಫೀಸಿನ ಸಮಯದಲ್ಲೇ.''

## ಅರ್ಪಣ

ಮುಧೋಳ ಸಂಸ್ಥಾನದ ದಿವಾಣರಾಗಿದ್ದ ಶ್ರೀ ಖಾಂಡೇಕರರಿಗೆ ಹಳ್ಳಿ ಶಾಲೆಯ ಮಾಸ್ತರರೊಬ್ಬರು ತಾವು ಬರೆದ ಒಂದು ವ್ಯಾಕರಣ ಪುಸ್ತಕವನ್ನು ಕಳಿಸಿದ್ದರು. ಮಾಸ್ತರರು ಕೆಲ ಕಾಲದ ನಂತರ ದಿವಾಣರ ಸಂದರ್ಶನವನ್ನು ಪಡೆದು, "ಪುಸ್ತಕ ಹೇಗಿದೆ ಮಹಾಸ್ವಾಮಿ?'' ಎಂದು ವಿನಯಪೂರ್ವಕ ಕೇಳಿದರು.

"ಅಡ್ಡಿಯಿಲ್ಲ'' ಎಂದರು ಧೂರ್ತರಾದ ದಿವಾಣರು.

"ಹಾಗಾದರೆ ಅದನ್ನು ನಿಮಗೆ ಅರ್ಪಣ ಮಾಡಲೆ ?'' ಎಂದು ಅದು ಪಠ್ಯಪುಸ್ತಕವಾದೀತೆಂಬ ಆಸೆಯಿಂದ ಮಾಸ್ತರರು ಕೇಳಿದರು.

"ಬೇಡ ಮಾಸ್ತರ್, ನಾನು ಅದಕ್ಕೆ ಅಷ್ಟು ಯೋಗ್ಯನಲ್ಲ. ಅಗ್ನಿನಾರಾಯಣನಿಗೆ ಅರ್ಪಿಸಿಬಿಡಿರಿ!'' ಎಂದು ದಿವಾಣರು ಸಲಹೆಯಿತ್ತರು.

## ಎಚ್ಚರಿಕೆ

ಕೇಶಕರ್ತನಾಲಯದಲ್ಲಿ ಪ್ರವೇಶಿಸಿ ಒಬ್ಬ ಕುಳಿತುಕೊಂಡ. ಹೊಸತಾಗಿ ಅಲ್ಲಿ ಕೆಲಸಕ್ಕೆ ಸೇರಿಕೊಂಡ ನಾಪಿತ ತನ್ನ ಯಜಮಾನನಿಗೆ, "ನಾನು ಅವರ ಗಡ್ಡ ಮಾಡಲೇನು ? ಅಭ್ಯಾಸವಾದಂತಾದೀತು'' ಎಂದು ಹೇಳಿದ.

ಅದಕ್ಕೆ ಯಜಮಾನ "ಅಡ್ಡಿ ಇಲ್ಲ. ಮಾಡು. ಆದರೆ ಜಾಗ್ರತೆಯಿಂದ ಮಾಡು, ನಿನ್ನ ಬೊಟ್ಟು ಕೊಯ್ದುಕೊಂಡೀಯೆ!'' ಎಂದ.

## ಅಸಾಧ್ಯ

ಅವಳ ಹತ್ತಿರ ವಾದಿಸುವುದೆಂದರೆ ವಿದ್ಯುದ್ದೀಪವನ್ನು ಊದಿ ಆರಿಸಲು ಯತ್ನಿಸಿದಂತೆ.

— ಸ್ಟಿವಾರ್ಟ ಥಾಂಸನ್

ಪೋಲೆಂಡಿನ ಒಂದು ಮಕ್ಕಳ ಕಥೆ

# ಮೋಚಿ ಮತ್ತು ಬಾತುಕೋಳಿ

ಕಾರ್ನೆಲ್ ಮಾಕಸ್ ಜಿನಸ್ಕಿ



ಈಗ ನೂರೈವತ್ತು ವರ್ಷಗಳ ಹಿಂದೆ ನಡೆದ, ನಾನು ನೋಡಿದ ಒಂದು ಸಂಗತಿಯನ್ನು ಹೇಳುತ್ತೇನೆ, ಕೇಳಿ.

ಒಂದು ದೊಡ್ಡ ನಗರ. ಅಲ್ಲಿ ಒಂದು ನಾಟಕ ಗೃಹವಿದ್ದಿತು. ಒಮ್ಮೆ ಒಂದು ಮೃಗಾಲಯ ಪ್ರದರ್ಶನವೂ ಅಲ್ಲಿ ಜರುಗಿತ್ತು. ಎಂದರೆ ಅದೆಷ್ಟು ದೊಡ್ಡ ನಗರವಾಗಿತ್ತು ಎಂದು ನಿಮಗೆ ಹೊಳೆಯಬಹುದು. ಆ ನಗರದಲ್ಲಿ ಚರಮನೆಂಬ ಒಬ್ಬ ಮೋಚಿಯಿದ್ದ. ಮೋಚಿ ಚರಮನನ್ನು ನೋಡಿದವರಾರೂ ನಗದೆ ಇರಲು ಸಾಧ್ಯವಿರಲಿಲ್ಲ. ಅವನು ಅಷ್ಟು ವಿಚಿತ್ರನಾಗಿದ್ದ. ಮೊಚ್ಚೆಗಳನ್ನು ಹೊಲಿಯುವ ಬದಲು ಅವನು ಯಾವಾಗಲೂ ಏನಾದರೊಂದು ಮಂಗಾಟದಲ್ಲಿ ತೊಡಗುತ್ತಿದ್ದುದರಿಂದ ಅವನ ಒಡೆಯ ಸ್ಯಮನ್ ದಾರ ಯಾವಾಗಲೂ ಅವನ ಕಿವಿಗಳನ್ನು ಹಿಡಿದು ಜಗ್ಗುತ್ತಿದ್ದ. ಅದರಿಂದ ಮೋಚಿ ಚರಮನ ಕಿವಿ

“ ಪೋಲೆಂಡ್ ” ಪತ್ರಿಕೆಯಿಂದ

ಗಳು ಆನೆಯ ಕಿವಿಗಳಷ್ಟು ದೊಡ್ಡವಾಗಿಬಿಟ್ಟಿದ್ದವು. ಆದರೆ ಒಳ್ಳೆಯ ಮೋಚಿಗೆ ದೊಡ್ಡ ಬೂಟಿನಂಥ ಕಿವಿಗಳಿರಬೇಕು ಎಂದು ಭಾವಿಸಿದ್ದ ಚರಮುನಿಗೆ ತನ್ನ ಕಿವಿಗಳು ದೊಡ್ಡವಾದ್ದರಿಂದ ಏನೂ ಕೆಡುಕೆನಿಸುತ್ತಿರಲಿಲ್ಲ. ಅದರ ಬದಲು ಅವನಿಗೆ ಆನಂದವೇ ಆಗಿತ್ತು. ಏಕೆಂದರೆ ಅವನಿಗೆ ತನ್ನ ಕಿವಿಗಳನ್ನು ಒಂದು ಉಗ್ರಾಣವನ್ನಾಗಿ ಮಾಡಿಕೊಳ್ಳಲು ಸಾಧ್ಯವಾಗಿತ್ತು.

ಉಳಿದ ಮಕ್ಕಳು ತಮ್ಮ ಅಂಗಿಯ ಕಿಸೆಗಳಲ್ಲಿ ಬಚ್ಚಿಟ್ಟುಕೊಳ್ಳುತ್ತಿದ್ದ ವಸ್ತುಗಳನ್ನು ಮೋಚಿ ಚರಮು ತನ್ನ ಕಿವಿಗಳಲ್ಲಿಟ್ಟುಕೊಳ್ಳುತ್ತಿದ್ದ. ಬಲಗಿವಿಯಲ್ಲಿ ಆತ ಒಂದು ಚಾಕು, ಗುಂಡಿಗಳು, ನೆಲಗಡಲೆ ಕಾಳುಗಳು ಮತ್ತು ಒಂದು ನೂಲಿನ ಉಂಡೆಯನ್ನು ಇಟ್ಟುಕೊಳ್ಳುತ್ತಿದ್ದ. ಎಡಗಿವಿಯಲ್ಲಿ ಇನ್ನೊಂದಿಷ್ಟು ನೂಲು, ಒಂದು ಕವಣೆ ಮತ್ತು ಇಪ್ಪತ್ತು ಕಲ್ಲುಗಳನ್ನು ಇಟ್ಟುಕೊಳ್ಳುತ್ತಿದ್ದ. ಹುಡುಗರಾರೂ ಸಾಮಾನ್ಯವಾಗಿ ಕವಣೆಯಿಂದ ಕಲ್ಲುಗಳನ್ನು ಹೊಡೆಯುವುದಿಲ್ಲವಾದ್ದರಿಂದ ಮೋಚಿ ಚರಮು ಕೆಟ್ಟ ಹುಡುಗನಾಗಿದ್ದನೆಂದು ನಿಮಗೆ ಸಹಜವಾಗಿಯೇ ಗೊತ್ತಾಗುವಂತಿದೆ. ಒಮ್ಮೆ ಮೋಚಿ ಚರಮುನ ಕವಣೆಯ ಕಲ್ಲು ಎಷ್ಟು ಎತ್ತರಕ್ಕೆ ಹೋಯಿತೆಂದರೆ ಅದು ಆಕಾಶದಲ್ಲಿ ಮೂಡುತ್ತಿದ್ದ ಚಂದ್ರನ ಮುಖಕ್ಕೆ ಹೋಗಿ ಬಡಿಯಿತು. ಚಂದ್ರನ ಮುಂದಿನ ಎರಡು ಹಲ್ಲುಗಳು ಮುರಿದು ಹೋದವು. ನಾಚಿಕೆಯಿಂದ ಚಂದ್ರ ಕೂಡಲೆ ಮೋಡಗಳ ಹಿಂದೆ ಅವಿತುಕೊಂಡ. ಮರುದಿನ ಮತ್ತೆ ಆಕಾಶದಲ್ಲಿ ಕಾಣಿಸಿಕೊಂಡಾಗ ಅವನ ಮುಖವೆಲ್ಲ ಕೆಂಪಾಗಿತ್ತು. ಆತನ ಬಾಯಿಗೆ ಪಟ್ಟಿ ಬಿಗಿದಿತ್ತು. ಎಂದಿನಂತೆ ಆತ ಮುಗುಳ್ನಗೆ ನಗುತ್ತಿರಲಿಲ್ಲ.

ಮಂಗಾಟದಲ್ಲಿ ನಿಸ್ಸೀಮನಾಗಿದ್ದ ಮೋಚಿ ಚರಮು ಮಾಡದ ಕಿಡಿಗೇಡಿತನವಿರಲಿಲ್ಲ.

ಒಮ್ಮೆ ಸದಾ ಅವಸರದಲ್ಲಿ ಇರುತ್ತಿದ್ದ ಗೃಹಸ್ಥನೊಬ್ಬನ ಚಪ್ಪಲಿ ಹೊಲಿಯುವ ಕೆಲಸ ಮೋಚಿ ಚರಮುನ ಪಾಲಿಗೆ ಬಂತು. ಆತ ಏನು ಮಾಡಿದನೆನ್ನುತ್ತೀರಿ? ಚಪ್ಪಲಿಗಳನ್ನು ಹಿಂದುಮುಂದಾಗಿ ಹೊಲಿದ. ಅವನ್ನು ಮೆಟ್ಟಿಕೊಂಡು ಆ ಗೃಹಸ್ಥ ಅವಸರದಿಂದ ಊಟಕ್ಕೆಂದು ಹೊರಟ. ಅವನಿಗೆ ತುಂಬ ಹಸಿವೆಯಾಗಿಹೋಗಿತ್ತು. ಆದರೆ ಆತ ಒಂದು ಹೆಜ್ಜೆ ಮುಂದಿಡಬೇಕೆಂದಾಗಲೆಲ್ಲ ಅವನ ಕಾಲು ಒಂದು ಹೆಜ್ಜೆ ಹಿಂದಿಡತೊಡಗಿತ್ತು. ಅವನು ಮುಂದೆ ಹೋದರೆ ಚಪ್ಪಲಿ ಹಿಂದೆ ಹೋಗುತ್ತಿತ್ತು. ಹೀಗೆ ಎರಡು ವಾರಗಳ ವರೆಗೆ ಆತ ನಿಂತಲ್ಲಿಂದ ಕದಲಲಾರದೆ ಹಸಿವೆಯಿಂದ ನರಳಿ ಸತ್ತು ಹೋದ.

ಅದನ್ನು ಕಂಡು ಮೋಚಿ ಚರಮು ನಕ್ಕ ರಭಸಕ್ಕೆ ಅವನ ಕಿವಿಗಳು ಗಾಳಿಗೆ ಸಿಕ್ಕ ಎಲೆಗಳಂತೆ ಅಲ್ಲಾಡಿದವು.

ಆದರೆ ಇದೇ ಮೋಚಿ ಚರಮನ ಕೊನೆಯ ಹುಡುಗಾಟಿಕೆ ಎಂದು ತಿಳಿಯಬೇಡಿ.

ಮತ್ತೊಮ್ಮೆ ಒಳ್ಳೆಯ ಮಕ್ಕಳಿಗಾಗಿ ಎಂದು ಒಂದು ನಾಟಕ ನಡೆಯಿತು. ಚರಮು ಬಂದು ರಂಗಸ್ಥಳದ ಎದುರಿಗೆ ನಿಂತು ಹುಳಿ ಮಾವಿನ ಕಾಯಿಯೊಂದನ್ನು ತಿನ್ನತೊಡಗಿ ಹಲ್ಲುಗಳೆಲ್ಲ ಉದುರಿಹೋಗುತ್ತಿರುವವೇನೋ ಎಂಬಂತೆ ಮುಖ ಕಿವುಚತೊಡಗಿದ. ರಂಗಸ್ಥಳದ ಮೇಲಿದ್ದ ಪಾತ್ರಧಾರಿಗಳು ಕೂಡ ಅವನಂತೆ ಮುಖವನ್ನು ವಿಕಾರ ಮಾಡತೊಡಗಿದರು. ಅದರಲ್ಲೇನೂ ತಪ್ಪಿರಲಿಲ್ಲ. ಯಾರಾದರೂ ಹುಳಿ ಮಾವಿನ ಕಾಯಿಯ ಅಥವಾ ಲಿಂಬೆ ಹಣ್ಣಿನ ಹೋಳನ್ನು ತಿನ್ನುವುದನ್ನು ಕಂಡಾಗ ನೀವೂ ಅದನ್ನು ತಿನ್ನುತ್ತಿರುವಿರೆಂಬ ಭ್ರಮೆಯಾಗಿ ನಿಮ್ಮ ಮುಖವೂ ಹಿಂಡಿದಂತಾಗುವ ಅನುಭವ ನಿಮಗಿದ್ದಿರಬೇಕು.

ಈ ಹೊಲಸು ಚೇಷ್ಟೆ ಯಾರಿಗೂ ಸೇರಲಿಲ್ಲ. ಚರಮುನ ಯಾವ ಚೇಷ್ಟೆಗಳೂ ಜನರಿಗೆ ಸೇರುತ್ತಿರಲಿಲ್ಲ.

ಏನಾದರೂ ಚರಮು ಬಹಳ ಕೆಟ್ಟ ಹುಡುಗನಾಗಿದ್ದ. ಅವನಿಗೆ ಶಿಕ್ಷೆಯೆಂದು ಊಟಕ್ಕೆ ಕಡುಬಿನ ಚೂರಿನ ಬದಲು ಡಾಂಬರದ ಮುದ್ದೆ ಸಿಗುತ್ತಿತ್ತು. ಐಸ್‌ಕ್ರೀಮಿನ ಬದಲು ಬೂಟ್‌ಪಾಲಿಶ್ ಸಿಗುತ್ತಿತ್ತು. ಇನ್ನಾವುದಕ್ಕೂ ಅವನು ಅರ್ಹ

...ಗಿರಲಿಲ್ಲ. ಆದರೆ ಅವನು ಒಮ್ಮೆ ಸದ್ಗೃಹಸ್ಥ ರೊಬ್ಬರಿಗೆ ಮಾಡಿದ ಚೇಷ್ಟೆಯನ್ನು ನೋಡಿದರೆ ಈ ಶಿಕ್ಷೆಯೂ ಅವನಿಗೆ ಹಗುರಾದದ್ದೇ ಎನ್ನ ಬಹುದು. ಈ ಗೃಹಸ್ಥ ಚಪ್ಪಲಿ ಮಾಡಿಸಿ ಕೊಳ್ಳಲು ಬಂದಿದ್ದ. ಅವನು ಭಾರೀ ಆಳಾಗಿದ್ದುದರಿಂದ ಸ್ಯಮುನ್ ದಾರನೂ ಅವನ ಹನ್ನೆರಡು ಜನಸಹಾಯಕರೂ ರಸ್ತೆಅಳೆಯುವ ಕೋಲಿನಿಂದ ಅವನ ಕಾಲಿನ ಅಳತೆ ತೆಗೆದುಕೊಳ್ಳತೊಡಗಿದ್ದರು. ಯಾರ ಲಕ್ಷ್ಯವೂ ತನ್ನತ್ತ ಇಲ್ಲದಿರುವುದನ್ನು ಕಂಡ ಚರಮನು ಒಂದು ಏಡಿಯನ್ನು ಆ ಗೃಹಸ್ಥನ ಜೇಬಿಗೆ ತುರುಕಿದ.

ಆ ಸದ್ಗೃಹಸ್ಥ ಏತಕ್ಕೋ ಕಿಸೆಗೆ ಕೈಹಾಕಿದವನು "ಅಯ್ಯೋ ಸತ್ತೆ" ಎಂದು ಕೂಗಿದ. ಒಳಗಿದ್ದ ಏಡಿ ಕಿಸೆಯಲ್ಲಿದ್ದ ಕರವಸ್ತ್ರವನ್ನೂ ವೃತ್ತ-ಪತ್ರಿಕೆಯನ್ನೂ ಕೈಚೀಲಗಳನ್ನೂ ತಿಂದು ಬಳಿಕ ಆ ಗೃಹಸ್ಥನ ಬೆರಳನ್ನು ಕಚ್ಚಿ ಕರ್ಕಶವಾಗಿ ಸಿಳ್ಳು ಹಾಕಿದಂತೆ ಕೂಗಿತು. ಅಂಜಿ ಕಂಗಾಲಾಗಿ ಸ್ಯಮುನ್ ದಾರ ಓಡತೊಡಗಿದ. ಒಂದೇ ಸವನೆ ಎರಡು ವರ್ಷಗಳ ವರೆಗೆ ಓಡಿದ ಮೇಲೆ ತಡೆದು ನಿಂತಾಗ ತಾನು ಅಮೇರಿಕೆಯ ವರೆಗೆ ಓಡಿ ಬಂದದ್ದು ಅವನಿಗೆ ಗೊತ್ತಾಯಿತು. ನಡುವೆ ಮಹಾಸಾಗರವನ್ನು ತಾನು ಎಂದು ಈಸಿ ದಾಟಿದೆ ಎಂಬುದು ಕೂಡ ಅವನಿಗೆ ಜ್ಞಾಪಕವಿರಲಿಲ್ಲ.

ಈಗ ಚರಮನಿಗೆ ಯಜಮಾನನಿಲ್ಲದಂತಾಯಿತು. ಅವನು ಅಲ್ಲಿಂದ ಹೊರಡಬೇಕಾಯಿತು. ಇನ್ನೂ ಮರ್ಕಟಚೇಷ್ಟೆಯೇ ತಲೆಯಲ್ಲಿ ಸುಳಿಯುತ್ತಿದ್ದುದರಿಂದ ಅವನಿಗೆ ಮತ್ತಾವುದರ ಪರಿವೆಯೂ ಇರಲಿಲ್ಲ. ಆತ ತನ್ನ ದಬ್ಬಣ, ನೂಲು ಮತ್ತು ಮರದ ಕೊರಡನ್ನು ತೆಗೆದುಕೊಂಡು ಹೊರಟ.

ಚರಮ ಮುಂದಕ್ಕೆ ನಡೆದೇ ನಡೆದ. ಹೋದಲ್ಲೆಲ್ಲ ಆತ ಏನಾದರೂ ತುಂಟತನ ಮಾಡುತ್ತಲೇ ಇದ್ದ.

ರಸ್ತೆಗಳ ಕೂಟದಲ್ಲಿ ಬೇರೆ ಬೇರೆ ಹಾದಿಗಳು ಎಲ್ಲೆಲ್ಲಿ ಹೋಗುತ್ತವೆ ಎಂದು ತೋರಿಸಲು ಮರದ ಕೈಗಳನ್ನು ಇಟ್ಟಿರುತ್ತಾರೆ. ಚರಮ ಅಂಥ ಒಂದು ಕೈಯನ್ನು ಕಿತ್ತು ಅದು ಆಕಾಶದತ್ತ ತೋರಿಸುವಂತೆ ಮತ್ತೆ ಕಂಬಕ್ಕೆ ಬಡಿದ. ಹಾದಿ ತಪ್ಪಿದ ಒಬ್ಬಾತ ಅಲ್ಲಿಗೆ ಬಂದು ಕೈ ಯಾವ ಕಡೆಯನ್ನೂ ತೋರಿಸದೆ ಮೇಲಕ್ಕೆ ತೋರಿಸುವುದನ್ನು ಕಂಡು ಚಕಿತನಾದ. ಮೇಲಕ್ಕೆ ಅಂದರೆ ಆಕಾಶಕ್ಕೆ ಹೋಗುವುದೇ ಸರಿಯಾ-ದದ್ದೆಂದು ತಿಳಿದು ಆ ಕಂಬವನ್ನೇರಿ ನಡೆಯತೊಡಗಿದ. ಆದರೆ ಆಕಾಶಕ್ಕೆ ಮೇರೆಯಿರದಿ-ರುವುದರಿಂದ ಆ ಬಡಪಾಯಿ ಇನ್ನೂ ನಡೆಯುತ್ತಲೇ ಇದ್ದಾನೆ.

ಚರಮ ತನ್ನ ಅಲೆದಾಟವನ್ನು ಮುಂದುವರಿಸಿದ. ಒಂದು ಹಳ್ಳಿಯ ಹತ್ತಿರ ಅವನಿಗೆ ಒಂದು ಗದ್ದೆಯಲ್ಲಿ ತೊನೆಯುತ್ತ ಹೊರಟಿದ್ದ ದೊಡ್ಡದೊಂದು ಗಂಡು ಬಾತುಕೋಳಿ ಕಂಡಿತು.

"ನಿನ್ನ ಹೆಸರೇನು ?" ಚರಮ ಕೇಳಿದ.

"ವೂಜಿಕ್ ಕ್ವೆಕ್" ಬಾತುಕೋಳಿ ಉತ್ತರವಿತ್ತಿತು.

"ನೀನೇಕೆ ತೊನೆಯುತ್ತಿರುವೆ ?"

"ಏಕೆಂದರೆ ನಾನು ಕುಡಿದು ಮತ್ತನಾಗಿದ್ದೇನೆ" ಎಂದು ಆ ಬಾತುಕೋಳಿ ಕುಣಿಯತೊಡಗಿತು

ಈ ಬಾತುಕೋಳಿ ಉಂಡಾಡಿ ಜಾತಿಯದು ಎಂದುಕೊಂಡು ನೋಚಿ ಚರಮ, "ನನ್ನಸಂಗಡ ಬಾ. ಮಜಾ ಮಾಡೋಣ," ಎಂದ.

"ನೀನೆಲ್ಲಿಗೆ ಹೋಗುತ್ತಿರುವಿ ?" ಬಾತುಕೋಳಿ ಕೇಳಿತು.

"ಚಪ್ಪಲಿಯಿರುವ ಚಪ್ಪಲಿ ಮಾಡುವವನಲ್ಲಿಗೆ ನಾನು ಹೋಗುತ್ತಿದ್ದೇನೆ."

"ಹ್ಹಾ ! ಅಂದರೆ ಆ ಸ್ಥಳ ಬಹಳ ದೂರವಿರಬೇಕು. ಆದರೆ ಇದುವರೆಗೆ ನಾನು ನೋಡಿರದಂಥ ಕಿವಿಗಳು ನಿನಗಿರುವುದರಿಂದ ನಾನು ನಿನ್ನ ಸಂಗಡ ಬರುತ್ತೇನೆ ನಡೆ,'' ಎಂದಿತು ಬಾತುಕೋಳಿ.

ಅಲ್ಲಿಂದ ಮುಂದೆ ಅವರಿಬ್ಬರೂ ಜೊತೆಯಾಗಿ ಪ್ರಯಾಣ ಮಾಡಿದರು. ತುಂಬ ಮೋಜು ಮಾಡಿ

ದರು. ಆ ಬಾತುಕೋಳಿ ತುಂಟತನದಲ್ಲಿ, ಮರ್ಕಟ ಚೇಷ್ಟೆಯಲ್ಲಿ ಚರಮನಿಗಿಂತ ಒಂದು ಕೈ ಮೇಲಾಗಿಯೇ ಇದ್ದಿತು. ಅವರ ಚೇಷ್ಟೆಗಳಿಂದ ಕಂಗೆಟ್ಟ ಜನ ಅವರನ್ನು ಕಂಡೊಡನೆ ದೂರ ಓಡುವಂತಾಯಿತು.

ಹೀಗೆಯೇ ಸಾಗುತ್ತಿದ್ದ ಅವರು ಒಂದು ಅಡವಿಯಲ್ಲಿ ಮಲಗಿ ನಿದ್ದೆ ಮಾಡುತ್ತಿದ್ದ ಮುದುಕನೊಬ್ಬನನ್ನು ಕಂಡರು. ಆತ ಹಣ್ಣು ಮುದುಕನಾಗಿದ್ದ. ಆದರೆ ಆತ ಒಳ್ಳೆಯವನೆಂಬುದು ನಿದ್ದೆಯಲ್ಲೂ ಅವನ ಮುಖದ ಮೇಲೆ ಮಿನುಗುತ್ತಿದ್ದ ನಗೆಯಿಂದ ಗೊತ್ತಾಗುತ್ತಿತ್ತು. ಅವನನ್ನು ಕಂಡೊಡನೆ ಈ ಮಿತ್ರರ ಮನಸ್ಸಿನಲ್ಲಿ ಇವನ ಮೇಲೆ ಚೇಷ್ಟೆಯ ಯಾವ ಬಾಣ ಬಿಡೋಣ ಎಂಬ ವಿಚಾರ ಮೂಡಿತು.

" ನಾನು ಅವನ ಕಿವಿಗಳಲ್ಲಿ ಕ್ವೆಕ್ ಕ್ವೆಕ್ ಎಂದು ಕೂಗುತ್ತೇನೆ" ಎಂದಿತು ಬಾತುಕೋಳಿ.

" ನೀನು ಹಾಗೆ ಮಾಡಕೂಡದು. ಮಾಡಿದರೆ ಆ ಮುದುಕನಿಗೆ ಕೂಡಲೆ ನಿನ್ನ ಹೆಸರು ಗೊತ್ತಾಗಿಬಿಡುತ್ತದೆ" ಎಂದ ಚರಮ.

" ಹಾಗಾದರೆ ಏನು ಮಾಡೋಣ ? "

'' ಅವನು ಸಿಟ್ಟಿಗೇಳುವಂತೆ ಏನನ್ನಾದರೂ ಮಾಡಬೇಕು. "

ಚರಮ ಸರಕ್ಕನೆ ಆ ಮುದುಕನ ಬಳಿಗೆ ಹೋಗಿ ಮೆಲ್ಲಗೆ ಅವನ ಚಪ್ಪಲಿಗಳನ್ನು ಕಳಚಿದ. ಅವನ್ನು ಒಂದು ಉದ್ದನ್ನ ದಾರಕ್ಕೆ ಕಟ್ಟಿ ಆ ದಾರವನ್ನು ಎತ್ತರದ ಟೊಂಗೆಯೊಂದರ ಮೇಲೆ ಎಸೆದ. ಬಳಿಕ ಆತ ಮತ್ತು ಬಾತುಕೋಳಿ ಆ ಗಿಡದ ಮರೆಯಲ್ಲಿ ನಿಂತುಕೊಂಡು ಮುದುಕ ಏಳುವುದನ್ನೇ ಕಾಯತೊಡಗಿದರು. ಎದ್ದಾಗ ತನ್ನ ಚಪ್ಪಲಿ ಕಳವಾದದ್ದು ಕಂಡು ಆ ಮುದುಕ ಮರಮರನೆ ಮರುಗಿದ್ದನ್ನು ನೋಡಿದರೆ ಅವನು ನಿಜವಾಗಿಯೂ ಕಡುಬಡವನಾಗಿದ್ದ ಎನ್ನಬಹುದಾಗಿತ್ತು.

ಆದರೆ ಎತ್ತರದಲ್ಲಿ ತನ್ನ ಚಪ್ಪಲಿಗಳು ತೂಗಾಡುತ್ತಿರುವುದನ್ನು ಕಂಡು ಅವನಿಗೆ ಅತ್ಯಾಶ್ಚರ್ಯವಾಯಿತು. ಅವನ್ನು ಹಿಡಿಯಲು ಆತ ಕೈಮೇಲಕ್ಕೆತ್ತಿದಾಗ ಮಂತ್ರಶಕ್ತಿಯಿಂದೆಂಬಂತೆ ಅವು ಸರ್ರನೆ ಮೇಲಕ್ಕೇರಿದವು.

ಪುನಃ ಚಪ್ಪಲಿಗಳು ಕೆಳಗಿಳಿದದ್ದನ್ನು ಕಂಡು ಮುದುಕನಿಗೆ ಇನ್ನಿಷ್ಟು ಆಶ್ಚರ್ಯವಾಯಿತು. ಅವನ್ನು ಹಿಡಿಯಲು ಮುದುಕ ಕೈಯೆತ್ತಿದ ಕೂಡಲೇ ಅವು ಮೇಲಕ್ಕೆ ಹೋಗುತ್ತಿದ್ದವು. ಹಲವು ಸಲ ಯತ್ನಿಸಿ ನಿರಾಶನಾಗಿ ದಣಿದು ಮುದುಕ ಅಳತೊಡಗಿದ. ಗಿಡದ ಮರೆಯಲ್ಲಿ ನಿಂತ ಚರಮ ಚಪ್ಪಲಿಗಳನ್ನು ಮೇಲಕ್ಕೆ ಜಗ್ಗುತ್ತಿದ್ದನೆಂದು ಆ ಮುದುಕನಿಗೆ ಗೊತ್ತಾಗಿರಲಿಲ್ಲ.

ಆ ಮುದುಕನ ಕಣ್ಣುಗಳಿಂದ ನೀರು ಹರಿಯಿತು. ಚರಮ ಮೆಲ್ಲಗೆ ಬಾತುಕೋಳಿಯ ಕಿವಿಯಲ್ಲಿ "ಆ ಮುದುಕನ ಕಣ್ಣುಗಳಿಗೇನಾಯಿತು?" ಎಂದು ಕೇಳಿದ.

" ನನಗೆ ಗೊತ್ತಿಲ್ಲ. ಆದರೆ ಅವು ಒದ್ದೆಯಾಗಿವೆ " ಎಂದಿತು ಬಾತುಕೋಳಿ.

ತನ್ನ ಕುತೂಹಲದಲ್ಲಿ ಚಪ್ಪಲಿಗಳನ್ನು ಮರೆತ ಚರಮ ಗಿಡದ ಮರೆಯಿಂದ ಹೊರಗೆ ಬಿದ್ದು ಮುದುಕನ ಎದುರು ಬಂದು ನಿಂತ. ಅವನನ್ನು ಕಂಡು ಮುದುಕ, " ಅಯ್ಯೊ ! ಸರ್ವನಾಶವಾಯಿತು ! " ಎಂದು ಕೂಗಿದ.

" ಏನಾಯಿತು ಮುದುಕಾ ? " ಎಂದು ಚರಮ ಕೇಳಿದ.

"ನನ್ನ ಚಪ್ಪಲಿಗಳು ಓಡಿಹೋಗಿವೆ. ಇನ್ನೊಂದು ಜೊತೆಯನ್ನು ನಾನಿನ್ನು ಎಂದಿಗೂ ಕೊಳ್ಳಲಾರೆ" ಎಂದ ಮುದಕ.

" ನಿನ್ನ ಗಲ್ಲಗಳ ಮೇಲೆ ಇಳಿಯುತ್ತಿರುವುದು ಏನು ಎಂದು ಹೇಳಿದರೆ ನಾನು ನಿನ್ನ ಚಪ್ಪಲಿಗಳನ್ನು ತಂದುಕೊಡುತ್ತೇನೆ. "

" ಅದೇ ? ಅದು ಕಣ್ಣೀರು. "

" ಅಂದರೆ ಏನು ? "

ಮುದುಕನಿಗೆ ಆಶ್ಚರ್ಯವಾಯಿತು. " ನೀನೆಂದೂ ಅತ್ತಿಲ್ಲವೇ ? " ಎಂದಾತ ಚರಮನನ್ನು ಕೇಳಿದ.

'' ಅಳುವುದು ನನಗೆ ಗೊತ್ತಿಲ್ಲ. ''

"ನಗುವುದು ನಿನಗೆ ಗೊತ್ತಿದೆಯೆ ?"

"ಓಹೋ ! ಗೊತ್ತಿದೆ. ಬೇಕಾದ ಹಾಗೆ ನಕ್ಕು ಬಲ್ಲೆ." ಇಷ್ಟೆಂದು ಚರಮ ಓಡಿ ಹೋಗಿ ಚಪ್ಪಲಿಗಳೊಂದಿಗೆ ತಿರುಗಿ ಬಂದ. ಅವನ ಹಿಂದೆ ಬಾತುಕೋಳಿ ಇತ್ತು. ಇನ್ನೂ ದೂರವಿದ್ದಾಗಲೇ ಚರಮ ಕೂಗಿ ಹೇಳಿದ: "ಮುದುಕಾ, ನಿನ್ನ ಚಪ್ಪಲಿಗಳನ್ನು ನೋಡು."

ಮುದುಕ ಆಶ್ಚರ್ಯದಿಂದ ಚಪ್ಪಲಿಗಳನ್ನು ನೋಡುತ್ತ, "ಹಾಗಾದರೆ ಅವುಗಳನ್ನು ಒಯ್ದವನು ನೀನೇಯೆ ?" ಎಂದು ಕೇಳಿದ.

"ಹೌದು."

"ಆದರೆ ಯಾಕೆ? ನಿನಗೆ ಅವು ಬೇಕಾಗಿದ್ದವೇ ?"

"ಇಲ್ಲ."

"ಅಂದ ಮೇಲೆ ಯಾಕೆ ಒಯ್ದೆ ?"

"ಹುಡುಗಾಟಿಕೆ ಮಾಡಿ ನಿನ್ನನ್ನು ಪೀಡಿಸಬೇಕೆಂದು."

"ಅದಕ್ಕಾಗಿಯೇ ನಾನು ಅತ್ತೆನೆಂದು ನಿನಗೆ ಗೊತ್ತಿದೆಯೆ ?"

"ಇಲ್ಲ. ಕಣ್ಣೀರು ಬಂದರೆ ನೋವಾಗುವುದೇ?"

"ತುಂಬ ನೋವಾಗುತ್ತದೆ. ಉರಿಯುತ್ತದೆ. ಆದ್ದರಿಂದ ಯಾರನ್ನೂ ಅಳುವಂತೆ ಮಾಡ-ಬಾರದು. ಬಾ ನನ್ನ ಹತ್ತಿರಕ್ಕೆ."

"ಅಂ ? ನನ್ನನ್ನು ಹೊಡೆಯಬೇಕೆಂದಿರುವಿಯೇನು ?" ಚರಮ ಕೇಳಿದ

ಈ ಮಾತನ್ನು ಕೇಳಿ ಮುದುಕ ಖಿನ್ನನಾಗಿ ಹೇಳಿದ : "ಇಲ್ಲ. ನಿನ್ನನ್ನಪ್ಪಿಕೊಂಡು ಇನ್ನು ಮುಂದೆ ಇಂಥ ಚೇಷ್ಟೆಗಳನ್ನು ಮಾಡಬೇಡಪ್ಪಾ ಎಂದು ಬೇಡಿಕೊಳ್ಳಬೇಕೆಂದಿದ್ದೆ ಬಾ ನನ್ನ ಹತ್ತಿರ".

ಚರಮ ನಾಚುತ್ತ ಅವನ ಬಳಿಗೆ ಬಂದ. ಮುದುಕ ಅವನ ತಲೆಯನ್ನು ನೇವರಿಸಿ ಮುದ್ದಿಟ್ಟ.

"ಏನಿದು ?" ಎನ್ನುತ್ತ ಮೋಚಿ ಚರಮ ತನ್ನ ಕಣ್ಣುಗಳನ್ನು ಒರೆಸಿಕೊಂಡ

"ಅದು ಮತ್ತೇನೂ ಅಲ್ಲ. ಕಣ್ಣೀರು. ಈಗ ನಿನಗೂ ಅಳುವದೆಂದರೇನು ಎಂದು ಗೊತ್ತಾಯಿತು" ಮುದುಕ ಹೇಳಿದ.

"ಅದು ಹೇಗಾದೀತು ? ನೀನು ಹೇಳಿದೆ, ಕಣ್ಣೀರು ನೋವನ್ನೂ ಉರಿಯನ್ನೂ ಉಂಟು ಮಾಡುತ್ತದೆಂದು. ಆದರೆ ಈಗ ನನಗೆ ಸುಖವೆನಿಸುತ್ತಿದೆ."

"ಹಾಗೂ ಉಂಟು, ಮನುಷ್ಯ ಸುಖಿಯಾದಾಗಲೂ ಅವನಿಗೆ ಕಣ್ಣೀರು ಬರುತ್ತದೆ ದೇವರು ನಿನಗೆ ಇಂಥ ಕಣ್ಣೀರನ್ನೇ ದಯಪಾಲಿಸಲಿ. ಜನರನ್ನು ಸಿಟ್ಟಿಗೆಬ್ಬಿಸುವ ಅಥವಾ ನೋಯಿಸುವ ಚೇಷ್ಟೆಗಳನ್ನು ಇನ್ನು ಮುಂದೆಂದೂ ಮಾಡಬೇಡ. ನೀನು ಯಾವಾಗಲೂ ತುಂಟ ಚೇಷ್ಟೆಗಳನ್ನೆ ಮಾಡುತ್ತ ಬಂದಿರುವಿಯಾ ?"

"ಹೌದು. ಏಕೆಂದರೆ ನಾನೊಬ್ಬ ಮೋಚಿ. ನಾನು ಯಾವಾಗಲೂ ಸಂತೋಷಚಿತ್ತನಾಗಿರಬೇಕು. ಬಡಿಗರು ಮಾತ್ರ ಶವದ ಪೆಟ್ಟಿಗೆಗಳನ್ನು ತಯಾರಿಸುವವರಾದ್ದರಿಂದ ಅಳುಬುರುಕರಾಗಿರುತ್ತಾರೆ" ಚರಮನೆಂದ.

"ಹಾಗಿದ್ದರೆ, ನೀನು ಸದಾ ಉಲ್ಲಾಸಚಿತ್ತನಾಗಿದ್ದರೆ ನಿನಗೆ ಇನ್ನೊಂದನ್ನು ಕಲಿಸಿಕೊಡುವೆ ಕೇಳು. ಜಗತ್ತಿನಲ್ಲಿ ಸುಖಿಯಾದವನನ್ನು ಕಾಣುವುದು ಒಳ್ಳೆಯದು. ಏಕೆಂದರೆ ಆತ ಬಹಳಷ್ಟು ಒಳ್ಳೆಯ ಕಾರ್ಯಗಳನ್ನು ಮಾಡಬಲ್ಲ."

"ಇದು ವಿಚಿತ್ರವಾಗಿದೆಯಲ್ಲ. ನಾನು ಪ್ರಸನ್ನಚಿತ್ತನಾಗಿದ್ದುದಕ್ಕಾಗಿ ಇದುವರೆಗೆ ಹೊಡೆತಗಳನ್ನೇ ತಿಂದಿದ್ದೇನೆ."

ಮುದುಕ ಹೇಳಿದ: "ನೀನು ತಪ್ಪು ಎಸಗುತ್ತಿದ್ದೆಯಾದ್ದರಿಂದ ಹೊಡೆತ ತಿಂದೆ. ಇನ್ನೊಬ್ಬರನ್ನು ಪೀಡಿಸಿ ನೀನು ಪ್ರಸನ್ನನಾಗುತ್ತಿದ್ದೆ. ಆದ್ದರಿಂ-ದಲೇ ನೀನು ಸುಖಿಯಾಗಿದ್ದಾಗ ಇತರರೆಲ್ಲರೂ ದುಃಖಿಗಳಾಗುತ್ತಿದ್ದರು. ಇನ್ನು ಮೇಲೆ ಜನರು ನಿನ್ನಿಂದ ದೂರ ಓಡಿಹೋಗದೆ ನಿನ್ನ ಹತ್ತಿರಕ್ಕೆ ಸಂತೋಷವನ್ನನುಭವಿಸಲು ಬರುವಂತೆ ಮಾಡುವ ರೀತಿಯಲ್ಲಿ ಸಂತೋಷವನ್ನುಂಟುಮಾಡಿಕೊ. ನಿನ್ನ ಸಂಭ್ರಮವು ದುಃಖಿಗಳನ್ನು ಸಂತೋಷಪಡಿಸುವಂಥದಿರಲಿ."

"ಹಾಗೆ ಮಾಡಲು ನನ್ನಿಂದಾದೀತೇ ?"

ಚರಮ ಕೇಳಿದ.

"ಓಹೋ ಆಗದೆ ಏನು? ನಿನ್ನ ಕೈಲಾದಷ್ಟು ಯತ್ನಿಸು. ಅದರಿಂದ ನಿನಗೆಷ್ಟು ಸಮಾಧಾನ ವಾಗುವುದೆಂದು ನೋಡು. ದೇವರು ನಿನಗೆ ಮಾರ್ಗ ತೋರಲಿ."

ಇಷ್ಟೆಂದು ಮುದುಕ ಮಾಯವಾಗಿ ಬಿಟ್ಟ.

"ಕ್ವೆಕ್, ಕ್ವೆಕ್. ನಾನು ಆ ಮುದುಕನನ್ನು ಮೆಚ್ಚಿದೆ. ಆತನಿಗೆ ಸಿಟ್ಟೇ ಬರಲಿಲ್ಲ. ಇದು ತಮಾಷೆಯಾಗಿದೆ," ಎಂದಿತು ಬಾತುಕೋಳಿ.

ಮೋಚಿ ಚರಮ ಸಂಭ್ರಮದಿಂದ ಸಿಳ್ಳುಹಾಕಿ ಕುಣಿದ. ಬಾತುಕೋಳಿ ಕೂಡ ಸಂತಸದ ಭರ ದಲ್ಲಿ ಮೋಜಿನ ಹಾಡುಗಳನ್ನು ಹಾಡಿತು. ಅದನ್ನು ಕೇಳಿದ ಇಣಚಿಯೊಂದು ನಕ್ಕು ನಕ್ಕು ಸಾಕಾಗಿ ಹೊಟ್ಟೆ ಹಿಡಿದುಕೊಂಡಿತು. ಚರಮನ ಎದೆ ಹಗುರಾಗಿತ್ತು.

ಅವರಿಬ್ಬರೂ ಮುಂದೆ ನಡೆದರು. ಅವರಿಗೆ ಅಡವಿಯಲ್ಲಿ ಹಾದಿತಪ್ಪಿ ಅಲೆಯುತ್ತಿದ್ದ ಇಬ್ಬರು ಮಕ್ಕಳು ಕಂಡರು. ಆ ಮಕ್ಕಳು ಒಂದು ಗಿಡದ ಬಳಿ ಕುಳಿತು ಕೇಳಿದವರ ಹೃದಯ ಕರಗುವಂತೆ ಅಳುತ್ತಿದ್ದವು.

"ಹಾ! ನಮ್ಮ ಚೇಷ್ಟೆಗೆ ಅನುಕೂಲವಾಯಿತು," ಎಂದಿತು ಬಾತುಕೋಳಿ.

"ಛೆ! ನೀನು ಹೇಂಟೆಯಂತೆ ಮೂರ್ಖನಿರುವಿ ತೀರಿತು. ನಾನು ಹೇಳಿದಂತೆ ಈಗಿಂದೀಗ ಮಾಡು ಆ ಮಕ್ಕಳ ಬಳಿಗೆ ಹೋಗಿ ಒಕ್ಕಾಲಿನಲ್ಲಿ ಕುಣಿ. ನಾನು ತಲೆಕೆಳಗೆ ಕಾಲು ಮೇಲೆ ಮಾಡಿ ನಿಂತು ಕಾಲುಗಳನ್ನು ಅಲ್ಲಾಡಿಸುವೆ," ಚರಮ ಹೇಳಿದ.

ಬಾತುಕೋಳಿ ಕುಣಿಯಿತು. ತಲೆ ಕೆಳಗಾಗಿ ನಿಂತ ಚರಮ ಕಾಲುಗಳನ್ನು ಅಲ್ಲಾಡಿಸಿದ ಭರಕ್ಕೆ ಅವನ ಚಪ್ಪಲಿಯೊಂದು ಹಾರಿ ಒಂದು ಗಿಡದ ತುದಿಗೆ ಸಿಕ್ಕು ನೇತಾಡಿತು.

ಅಳುತ್ತಿದ್ದ ಮಕ್ಕಳು ಇದನ್ನೆಲ್ಲ ನೋಡಿದವು. ಅವು ಸಂತೋಷದಿಂದ ಕೇಕೆ ಹಾಕಿ ಮನಸ್ವೀ ನಕ್ಕವು.

ಸಂಜೆಯಾಗುವ ವರೆಗೂ ಆ ಮಕ್ಕಳನ್ನು ಚರಮ ಮತ್ತು ಬಾತುಕೋಳಿ ಈ ರೀತಿ ರಮಿಸಿದವು. ಮಕ್ಕಳನ್ನು ಹುಡುಕುತ್ತ ಅಲ್ಲಿಗೆ ಬಂದ ತಂದೆತಾಯಿಗಳು ನಡೆದದ್ದನ್ನು ಕಂಡು ಕೇಳಿ ಆನಂದದಿಂದ ಚರಮನನ್ನು ಚುಂಬಿಸಿ ಬಾತುಕೋಳಿಯನ್ನು ಎದೆಗವಚಿಕೊಂಡರು.

ಚರಮ ಮತ್ತು ಬಾತುಕೋಳಿ ಮುಂದಕ್ಕೆ ಹೊರಟರು. ಅವರು ಮೌನವಾಗಿ ಹಾದಿ ಕ್ರಮಿಸುತ್ತಿದ್ದರೂ ಅವರ ಅಂತರಂಗ ಸಂತಸದಿಂದ ತುಂಬಿತ್ತು. ಹಾದಿಯಲ್ಲಿ ರಸ್ತೆಯ ಅಂಚಿಗೆ ಮುಖ ಒಣಗಿಸಿಕೊಂಡು ನರಳುತ್ತಿದ್ದ ಭಿಕ್ಷುಕನೊಬ್ಬನನ್ನು ಅವರು ಕಂಡರು.

"ಏನಾಗಿದೆ?" ಚರಮ ಕೇಳಿದ.

"ನಾನು ಹಸಿದಿದ್ದೇನೆ. ದುರ್ದೈವಿ ನಾನು. ನನಗೆ ಸಹಾಯ ಮಾಡು," ಭಿಕ್ಷುಕ ಬೇಡಿಕೊಂಡ.

ಚರಮ ಯೋಚಿಸಿದ. ಕಿಸೆ, ಕಿವಿ ಎಲ್ಲವನ್ನೂ ಹುಡುಕಿದ. ಆದರೆ ಏನೂ ಸಿಗಲಿಲ್ಲ. ಮತ್ತೆ ಒಂದಿಷ್ಟು ಯೋಚಿಸಿ ಆತ ಕೇಳಿದ: "ನೀನು ತುಂಬ ದುಃಖಿತನಾಗಿರುವಿಯಾ?"

ಹೌದೆಂದ ಭಿಕ್ಷುಕ.

"ನಿನಗೆ ನಾನೇನೂ ಕೊಡಲಾರೆ. ಆದರೆ ನಾನು ನಿನ್ನನ್ನು ಸುಖಿಯಾಗಿ ಮಾಡಬಯಸುತ್ತೇನೆ. ಕ್ವೆಕ್, ನರ್ತಿಸು."

ಬಾತುಕೋಳಿ ಒಂದು ರೆಕ್ಕೆಯನ್ನೆತ್ತಿ ಸತ್ತವರು ಕೂಡ ಎದ್ದು ನಗಬೇಕಾದಂಥ ರೀತಿಯಲ್ಲಿ ನರ್ತಿಸಿತು.

"ಓ! ಓ!" ಎಂದು ಭಿಕ್ಷುಕ ಬಿದ್ದು ಬಿದ್ದು ನಕ್ಕ.

ಒಮ್ಮೆಂದೊಮ್ಮೆ ನರ್ತನ ನಿಲ್ಲಿಸಿ ಬಾತುಕೋಳಿ ಹಾಡಿತು. ತಾನು ಕುಡಿದು ಮತ್ತನಾಗಿರುವುದರಿಂದ ಹೆಂಡತಿಗೆ ತುಂಬ ಕಷ್ಟವಾಗುತ್ತಿದೆ ಎಂಬರ್ಥದ ಅದರ ಹಾಡನ್ನು ಕೇಳಿ "ವಾ! ವಾ!" ಎಂದು ಭಿಕ್ಷುಕ ಕೂಗಿದ. ಅವನ ಕೂಗನ್ನು ಕೇಳಿ ಸಮೀಪದ ಮರಗಳ ಮೇಲೆ ಕುಳಿತಿದ್ದ ಕಾಗೆಗಳು ಹಾರಿ ಹೋದವು.

"ದೇವರು ನಿಮಗೆ ಕಲ್ಯಾಣ ಮಾಡಲಿ. ನನ್ನ ಹಸಿವೆ ಹಿಂಗಿತು" ಎಂದ ಭಿಕ್ಷುಕ.

ಮುಂದೆ ಹೋಗುತ್ತಿದ್ದಾಗ ಬಾತುಕೋಳಿ ಅಂದಿತು: "ಇದು ವಿಚಿತ್ರ. ಆ ಭಿಕ್ಷುಕನಿಗೆ ನಗು ತಿಂದು ಹೊಟ್ಟೆ ತುಂಬದಂತೆ ಕಾಣುತ್ತದೆ. ನಗೆಯನ್ನು ತಿನ್ನಬಹುದೇನು?"

"ಅದು ತುಂಬ ಆರೋಗ್ಯಕರವೂ ಆಗಿರಬೇಕು" ಚರಮ ಹೇಳಿದ.

ಅನೇಕಾನೇಕ ತಿಂಗಳುಗಳ ವರೆಗೆ ಅವರಿಬ್ಬರೂ ಹಾಗೆಯೆ ನಡೆದರು. ಯಾವುದಾದರೂ ಊರಿನಲ್ಲಿ ಜನ ದುಃಖಿತರಾಗಿದ್ದಾರೆಂದು ಗೊತ್ತಾದರೆ ಅವರಿಬ್ಬರೂ ಅಲ್ಲಿಗೆ ಹೋಗಿ ಅವರ ಮನರಂಜನೆ ಮಾಡುತ್ತಿದ್ದರು. ಹೀಗಾಗಿ ಅವರ ಹೆಸರು ವಿಖ್ಯಾತವಾಯಿತು. ಎಲ್ಲ ಕಡೆಯಲ್ಲಿಯೂ ಅವರಿಗೆ ಸ್ವಾಗತ ಸಿಗತೊಡಗಿತು. ಬಾತುಕೋಳಿ ಕುಡಿಯುವುದನ್ನು ಬಿಟ್ಟಿತು. ಜನರ ಮನರಂಜನೆ ಮಾಡುವ ಹೊಸ ಹೊಸ ಬಗೆಗಳನ್ನು ಕಂಡು ಹಿಡಿಯಲು ದಿನವಿಡೀ ವಿಚಾರ ಮಾಡತೊಡಗಿತು.

ಒಂದು ದಿನ ಈ ಮಿತ್ರರು ಅಡವಿಯಲ್ಲಿ ಹಾಡುತ್ತ ಕುಳಿತಿದ್ದಾಗ ಕುದುರೆ ಸವಾರನೊಬ್ಬ ಅವರ ಬಳಿ ಬಂದ. ಅವನು ಅರಸು ಮುರಬ್ಬನ ಚಾರನಾಗಿದ್ದ. ದಿನವೂ ಹನ್ನೆರಡು ಸಲ ಭೋಜನ ಮಾಡುವಷ್ಟು ಶ್ರೀಮಂತನಾಗಿದ್ದ ಈ ಅರಸ. ಪ್ರತಿರಾತ್ರಿ ಆತ ಮೂವತ್ತಾರು ಸಲ ಎದ್ದು ಹಾಸಿಗೆ ಬದಲಾಯಿಸುತ್ತಿದ್ದ. ಅವನು ನೀರಿನ ಬದಲು ಬೀರನ್ನೇ (ಒಂದು ಬಗೆಯ ಸೌಮ್ಯ ಮದ್ಯ) ಕುಡಿಯುತ್ತಿದ್ದ. ಅವನ ಬಳಿ ಮೂರು ಜೊತೆ ಚಪ್ಪಲಿಗಳಿದ್ದುದರಿಂದ ಅವನ್ನು ದುರಸ್ತಿ ಮಾಡಿಸುವ ಪ್ರಸಂಗವೇ ಬರುತ್ತಿರಲಿಲ್ಲ.

ಅರಸು ಮುರಬ್ಬನ ಸ್ವಾರನು ಕೆಳಗಿಳಿದು ಚರಮ ಮತ್ತು ಬಾತುಕೋಳಿಯ ಎದುರು ಮೊಣಕಾಲೂರಿ ನಮಸ್ಕಾರ ಮಾಡಿದ. ಬಳಿಕ ಎದ್ದು ಬಗ್ಗಿ ಸಲಾಮು ಹೊಡೆದ.

"ಈತ ನನಗೆ ಸಲಾಮು ಮಾಡುತ್ತಿದ್ದಾನೇನು?" ಬಾತುಕೋಳಿ ಪಿಸುಮಾತಿನಲ್ಲಿ ಕೇಳಿತು.

"ಬೆಪ್ಪನಂತೆ ಮಾತಾಡಬೇಡ" ಎಂದು ಗದರಿಸಿದ ಚರಮ.

ಕುದುರೆ ಸ್ವಾರ ಹೇಳಿದ: "ನಾನು ಅರಸು ಮುರಬ್ಬನ ಮಂತ್ರಿ. ಆಸ್ಥಾನದಲ್ಲೇ ಬುದ್ಧಿವಂತ. ನಿಮ್ಮಲ್ಲಿ ಮೋಚಿ ಚರಮ ಯಾರು, ಕ್ವೆಕ್ ಬಾತುಕೋಳಿ ಯಾರು? ದಯವಿಟ್ಟು ಹೇಳಿರಿ."

ಈ ಅತ್ಯಂತ ಬುದ್ಧಿವಂತ ಮಂತ್ರಿಗೆ ಮೋಚಿ ಯಾರು, ಬಾತುಕೋಳಿ ಯಾರು ಎಂದು ತಿಳಿಯದೆ ಹೋಯಿತಲ್ಲ ಎಂದು ಬಾತುಕೋಳಿ ಹೊಟ್ಟೆ ಹಣ್ಣಾಗುವಂತೆ ನಕ್ಕಿತು.

"ನಾನು ಚರಮ."

"ನಾನು ಶ್ರೀಕ್ವೆಕ್." ತನ್ನ ಹೆಸರಿಗೆ 'ಶ್ರೀ' ಜೋಡಿಸಿಕೊಳ್ಳುವ ಚಟ ಬಾತುಕೋಳಿಗಿತ್ತು.

"ಅರಸು ಮುರಬ್ಬ ಬೇನೆ ಬಿದ್ದು ತುಂಬ ದುಃಖಿತರಾಗಿರುವುದರಿಂದ ದಯವಿಟ್ಟು ಅರಮನೆಗೆ ಬನ್ನಿ."

"ಓಹೋ!" ಬಾತುಕೋಳಿ ಕೂಗಿತು.

"ಅರಮನೆಯ ದಾರಿ ಯಾವುದು ಹೇಳಿರಿ. ನಾವು ಹೊರಟೆವು," ಎಂದ ಚರಮ.

ಅರಸನ ಸ್ವಾರ ಹೇಳಿದ: "ದೊಡ್ಡ ತೇಗಿನ ಮರದ ಹತ್ತರ ಹೋಗಿರಿ. ಬಳಿಕ ಒಂದು ಸಾವಿರ ಸಲ ಬಲಕ್ಕೆ ತಿರುಗಿರಿ. ನಂತರ ಗಿಡದ ಎಡಕ್ಕೆ ಹತ್ತು ಹೆಜ್ಜೆ ನಡೆಯಿರಿ. ಅಂದರೆ ನಿಮಗೆ ಅರಮನೆ ಸಿಗುವುದು."

"ಆದರೆ ನಾವೇತಕ್ಕೆ ಸಾವಿರ ಸಲ ಬಲಕ್ಕೆ ತಿರುಗಬೇಕು?" ಎಂದು ಬಾತುಕೋಳಿ ಕೇಳಿತು.

"ಅದು ಪದ್ಧತಿ. ಬೇಗ ಹೊರಡಿರಿ. ಇಲ್ಲವಾದರೆ ಅರಸರು ಸತ್ತಾರು."

ಚರಮ ಮತ್ತು ಬಾತುಕೋಳಿ ಅವಸರದಿಂದ ಹೊರಟು ತೇಗಿನ ಮರದ ಹತ್ತಿರ ಸಾವಿರ ಸಲ ಬಲಕ್ಕೆ ತಿರುಗಿ ಎಡಕ್ಕೆ ಹತ್ತು ಹೆಜ್ಜೆ ಇಟ್ಟರು. ಅರಮನೆ ಕಾಣಿಸಿತು.

ಅರಸು ಮುರಬ್ಬ ನರಳುತ್ತ ಮಲಗಿದ್ದ. ರಾಣಿ ಅತ್ತು ಅತ್ತು ಅರಮನೆಯ ಸುತ್ತ ಒಂದು ಕೆರೆಯೇ ನಿರ್ಮಾಣವಾಗಿತ್ತು. ಅದರಲ್ಲಿ ಬಂಗಾರದ ಕಪ್ಪೆಗಳು ಹುಟ್ಟಿಕೊಂಡಿದ್ದವು.

ಚರಮ ಅರಸನಿಗೆ ನಮಸ್ಕಾರ ಮಾಡಿ, "ಬಹಳ ದಿನಗಳಾದವೇನು ಬೇನೆ ಬಿದ್ದು ಪ್ರಭೋ?" ಎಂದು ಕೇಳಿದ.

"ಹೌದಪ್ಪ. ನೂರಾಏಳು ವರ್ಷಗಳಾದವು. ಆಗಲೇ ನಾನು ನನ್ನ ಕೊನೆಯ ಊಟ ಮಾಡಿದ್ದು, ಆಗಲೇ ನನ್ನ ಕಿರೀಟ ಕೂಡ ಕಳೆದು ಹೋಯಿತು," ನರಳುತ್ತಲೇ ಅರಸ ಹೇಳಿದ.

"ಕ್ವೆಕ್" ಎಂದು ಕೂಗಿತು ಬಾತುಕೋಳಿ.

"ಏನನ್ನುತ್ತಾನವನು? ಕಚ್ಚುತ್ತಾನೇನು?" ಎಂದು ಅಂಜಿದ ಅರಸ ಕೇಳಿದ.

"ಇಲ್ಲ ದೊರೆ. ನೀವು ಇನ್ನು ಗುಣ ಹೊಂದುತ್ತೀರೆಂದು ಆನಂದದಿಂದ ಕೂಗಿತು" ಚರಮ ಹೇಳಿದ.

ಬಳಿಕ ಇಬ್ಬರೂ ನಡೆಸಿದ ಕುಣಿತ-ಚೇಷ್ಟೆಗಳಿಂದ ಅರಸು ನಗದೆ ನಿರ್ವಾಹವಿಲ್ಲದಂತಾಯಿತು. ರಾಣಿ ಕಣ್ಣೀರಿನಿಂದ ತೊಯ್ದ ಕರವಸ್ತ್ರವನ್ನು ಹಿಂಡಿ ಬಿಸಿಲಿಗೆ ಒಣ ಹಾಕಿದಳು.

ಆದರೆ—ಎಲಾ ಏನಿದು ಅನಾಹುತ! ಚರಮನ ಮುಖ ಚೇಷ್ಟೆಯನ್ನು ಕಂಡು ಅರಸು ನಕ್ಕ ರಭಸಕ್ಕೆ ಅವನ ಹೊಟ್ಟೆ ಬಿರಿದು ಹೋಯಿತು. ಎಲ್ಲರಿಗೂ ಅಂಜಿಕೆಯಾಯಿತು. ಅರಸನ ಹೊಟ್ಟೆಯಿಂದ ಅವನ ಬಂಗಾರದ ಕಿರೀಟ ಹೊರಬಿದ್ದದ್ದನ್ನು ಎಲ್ಲರೂ ನೋಡಿದರು. ನೂರಾಏಳು ವರ್ಷಗಳ ಹಿಂದೆ ಊಟಕ್ಕೆ ಕುಳಿತಿದ್ದಾಗ ತಾಟಿನಲ್ಲಿ ಬಿದ್ದ ಕಿರೀಟವನ್ನು ಕೂಡ ಕೊಳುಬಕ್ಕ ಅರಸು ಅನ್ನದೊಡನೆ ನುಂಗಿದ್ದ. ಅದರಿಂದಲೇ ಅವನು ಬೇನೆ ಬಿದ್ದಿದ್ದ.

ಚರಮ ಬುದ್ಧಿ ಕಳೆದುಕೊಳ್ಳಲಿಲ್ಲ. ಆತ ತನ್ನ ದಬ್ಬಣದಿಂದ ಅರಸನ ಹೊಟ್ಟೆಯನ್ನು ಹೊಲಿದ. ಅವನ ಕೈಚಳಕದಿಂದ ಅರಸನಿಗೆ ನೋವೇ ಎನಿಸಲಿಲ್ಲವಾದ್ದರಿಂದ ಅವನು ನಗುತ್ತಲೇ ಇದ್ದ. ಅರಸ ಒಂದೇ ಸವನೆ ಐದು ವಾರಗಳ ವರೆಗೆ ನಗುತ್ತಲೇ ಇದ್ದ.

ನಗುವುದನ್ನು ನಿಲ್ಲಿಸಿದ ಬಳಿಕ ಅವನು ತನ್ನ ಮಗಳನ್ನು ಚರಮನಿಗೆ ಮದುವೆ ಮಾಡಿಕೊಟ್ಟ. ಅವನನ್ನು ರಾಜಕುಮಾರನನ್ನಾಗಿ ಮಾಡಿದ. ಬಾತುಕೋಳಿಗೂ ಸರದಾರನ ಸ್ಥಾನ ಸಿಕ್ಕಿತು.

ಮುಂದೆ ಅವರೆಲ್ಲರೂ ಸಂತೋಷದಿಂದ ಬಾಳಿದರು. ಆದರೆ ವೂಜಿಕ್ ಕ್ವೆಕ್ ಮಾತ್ರ ದುರ್ಗತಿಗೀಡಾಯಿತು. ಅರಸನ ಮಂತ್ರಿ ಅದನ್ನು ಕದ್ದೊಯ್ದು ಕೊಂದು ಅಡಿಗೆಮಾಡಿ ತಿಂದುಬಿಟ್ಟ.



ಎಷ್ಟೋ ತರುಣ ಲೇಖಕರು ತಮ್ಮ ಕಥೆಗಳನ್ನು ತಿರುಗಿ ಕಳಿಸಲು ಬೇಕಾದಷ್ಟು ತಿಕೀಟು ಹಚ್ಚಿದ ಲಕೋಟೆಗಳನ್ನು ಸಂಗಡ ಇಟ್ಟು ಸಂಪಾದಕರಿಗೆ ಕಳಿಸಿ ದೊಡ್ಡ ತಪ್ಪುಮಾಡುತ್ತಾರೆ. ಸಂಪಾದಕರಿಗೆ ಇದು ಮಿತಿಮೀರಿದ ಪ್ರಲೋಭನವಾಗಿ ಕೂಡ್ರುತ್ತದೆ.

—ರಿಂಗ್ ಲಾರ್ಡರ್ (ಚಿಕ್ಕ ಕಥೆಗಳನ್ನು ಹೇಗೆ ಬರೆಯಬೇಕು?)

* * *

ವಿಮರ್ಶಕರೆಂಬ ಜನರು ಸಾಮಾನ್ಯವಾಗಿ ತಮಗೆ ಸಾಧ್ಯವಿದ್ದಿದ್ದರೆ ಕವಿಗಳೋ ಇತಿಹಾಸಕಾರರೋ ಜೀವನಚರಿತ್ರಕಾರರೋ ಆಗಬಹುದಾಗಿದ್ದ ಜನರು. ಒಂದಲ್ಲ ಒಂದು ಸಾಹಿತ್ಯ ಪ್ರಕಾರದಲ್ಲಿ ಕೈತೋರಿಸಿ ಅವಲಕ್ಷಣ ಕೇಳಿಕೊಂಡ ಮೇಲೆ ಇವರು ಕೊನೆಗೆ ವಿಮರ್ಶಕರಾಗುತ್ತಾರೆ.

—ಎಸ್. ಟಿ. ಕೋಲರಿಜ್

# ಚಂದ್ರಲೋಕ ಹೇಗಿದೆ?

ಕೆ. ಶಂಕರ ರಾವ್

ಚಂದ್ರಲೋಕಕ್ಕೆ ಹಾರುವ ವಿಚಾರಗಳಿಂದ ಚಂದ್ರನನ್ನು ಕುರಿತು ಜನರ ಕುತೂಹಲ ಮರುಕಳಿಸಿದೆ. ಭೂಮಿಯಿಂದ ಸುಮಾರು ಎರಡೂವರೆ ಲಕ್ಷ ಮೈಲುಗಳಾಚೆಗೆ ಆಕಾಶದಲ್ಲಿ ತೇಲುವ ಈ ಬೆಳ್ಳಿಯ ತಟ್ಟೆಯನ್ನು ಕುರಿತು ಮನುಷ್ಯ ಅನಾದಿಕಾಲದಿಂದಲೂ ಕಲ್ಪನೆಗಳನ್ನು ಹರಿಬಿಟ್ಟಿದ್ದಾನೆ. ಚಂದ್ರನು ದೇವತೆ, ನಕ್ಷತ್ರಗಳ ಗಂಡ, ಮಾನವನ ಅದೃಷ್ಟವನ್ನು ಕ್ಷಣದಿಂದ ಕ್ಷಣಕ್ಕೆ ನಿಯಂತ್ರಿಸುವ ಗ್ರಹ, ಆದಿಯಲ್ಲಿ ಸಮುದ್ರಮಂಥನದಲ್ಲಿ ಹುಟ್ಟಿದಾತ—ಚಂದ್ರನನ್ನು ಕುರಿತು ಪೌರಾಣಿಕ ಕಲ್ಪನೆಗಳಿಗೆ ಲೆಕ್ಕವೇ ಇಲ್ಲ.

ವಿಜ್ಞಾನಿಗಳಿಗೂ ಚಂದ್ರ ಕೌತುಕದ ವಸ್ತುವಾಗಿದ್ದಾನೆ. ಅವರು ಈ ಉಪಗ್ರಹದ ಮೂಲದ ಬಗ್ಗೆ, ಅದರ ಸ್ವರೂಪದ ಬಗ್ಗೆ ಈಗ ೩೫೦ ವರ್ಷಗಳಿಂದ ಅನವರತವಾಗಿ ಶೋಧನೆ ನಡೆಸಿದ್ದಾರೆ. ಅವರ ದೂರದರ್ಶಕಗಳು ಆಕಾಶವನ್ನೆಲ್ಲ ಅವಲೋಕಿಸಿ ಚಂದ್ರನಂಥ ಬೇರೆ ಉಪಗ್ರಹಗಳಿವೆಯೋ ಎಂದು ನೋಡಿದ್ದಾರೆ. ಸೂರ್ಯನ ಸಂಸಾರದ ಬಹುತರ ಗ್ರಹಗಳಿಗೆ ಉಪಗ್ರಹಗಳಿವೆಯೆಂದು—ಉದಾಹರಣೆಗೆ ಮಂಗಳನಿಗೆ ಎರಡು, ಗುರುವಿಗೆ ಎಂಟು "ಚಂದ್ರ"ರಿದ್ದಾರೆ—ಗೊತ್ತು ಹಚ್ಚಿದ್ದರೂ ನಮ್ಮ ಚಂದ್ರನಿಗೆ ಸರಿಸಮವಾದ ಇನ್ನೊಂದು ಉಪಗ್ರಹವನ್ನು ಹುಡುಕಿತೆಗೆದಿಲ್ಲ. ಮಂಗಳನ ಉಪಗ್ರಹಗಳು ಚಂದ್ರನೊಡನೆ ಹೋಲಿಸಿದರೆ ಆಟದ ಚೆಂಡುಗಳು. ಗುರು ಮೊದಲಾದ ದೂರದ ಗ್ರಹಗಳ "ಚಂದ್ರ"ರು ದೊಡ್ಡವಾಗಿದ್ದರೂ ಆ ಮಹಾಕಾಯದ ಗ್ರಹಗಳೊಡನೆ ಹೋಲಿಸಿದರೆ ಆ ಉಪಗ್ರಹಗಳು ತೀರ ಚಿಕ್ಕವಾಗುತ್ತವೆ.

ಖಗೋಲಶಾಸ್ತ್ರಿಗಳು ದುರ್ಬೀನಿನಿಂದ ಚಂದ್ರನನ್ನು ಅವಲೋಕಿಸಿ ಅದರ ಮೈಮೇಲಿನ ಲಕ್ಷಣಗಳನ್ನೆಲ್ಲ ಭೂಮಿಯ ಮೈಯ ಪ್ರಾಕೃತಿಕ ಲಕ್ಷಣಗಳಿಗಿಂತಲೂ ಚೆನ್ನಾಗಿ ಗುರುತು ಹಾಕಿಟ್ಟಿದ್ದಾರೆ. ಅವರ ದುರ್ಬೀನಿನಲ್ಲಿ ಚಂದ್ರನನ್ನು ನೋಡಿದ ಮೇಲೆ ಯಾವ ಮಹಿಳೆಯೂ ಚಂದ್ರಮುಖಿ ಎಂದು ಕರೆಸಿಕೊಳ್ಳಲು ಒಪ್ಪಲಾರಳು. ಏಕೆಂದರೆ ಅದರಲ್ಲಿ ಕಾಣುವ ಚಂದ್ರ ನುಣ್ಣಗಿನ ತೊಳಗುವ ಶುಭ್ರ ತಟ್ಟೆಯಲ್ಲ. ಮೈಲಿಬೇನೆಯಾದವರ ಮುಖಕ್ಕಿಂತಲೂ ಆಳವೂ ಅಸಹ್ಯವೂ ಆದ ಕಲೆಗಳುಳ್ಳ ಗೋಲ ಅದು. ಇಂಥ ೩೦,೦೦೦ ಸಣ್ಣ ದೊಡ್ಡ ಕಲೆಗಳನ್ನು ವಿಜ್ಞಾನಿಗಳು ಚಂದ್ರನ ಒಂದೇ ಭಾಗದಲ್ಲಿ ಕಂಡಿದ್ದಾರೆ.

ಭೂಮಿಯ ವ್ಯಾಸದ ಕಾಲಂಶ ವ್ಯಾಸವುಳ್ಳ ಚಂದ್ರನ ಮೈಮೇಲಿನ ಏರುತಗ್ಗುಗಳು ನಿಜವಾಗಿ ಆಶ್ಚರ್ಯಕರವಾಗುವಂತಿವೆ. ಅದರ ಅತ್ಯುನ್ನತ ಶಿಖರವು ಎವರೆಸ್ಟ್ ಶಿಖರಕ್ಕಿಂತ ೪,೦೦೦ ಅಡಿ—ಅಂದರೆ ೩೩,೦೦೦ ಅಡಿ ಎತ್ತರವಾಗಿದ್ದರೆ ಅದರ ಅತಿ ಆಳವಾದ ತಗ್ಗು ೩೧,೦೦೦ ಅಡಿ

ಯಷ್ಟು—ಅಂದರೆ ಶಾಂತಸಾಗರಕ್ಕಿಂತಲೂ—ತಗ್ಗಾಗಿದೆ.

ಚಂದ್ರನ ಶಿಖರಗಳು ಹಿಮವಿಹೀನವಾಗಿದ್ದಂತೆ ಅದರ ಸಾಗರಗಳು ಜಲವಿಹೀನವಾಗಿವೆ. ಏಕೆಂದರೆ ಚಂದ್ರನಲ್ಲಿ ನೀರೇ ಇಲ್ಲ. ಹಾಗೆ ಕೇಳಿದರೆ ವಾಯುವೂ ಇಲ್ಲ. ಆದರೆ ಹಳೆಗಾಲದ ಖಗೋಲಶಾಸ್ತ್ರಜ್ಞರು ಅದರ ಮೇಲಿರುವ ವಿಶಾಲವಾದ ಕರಿ ಛಾಯೆಗಳನ್ನು ಸಾಗರಗಳೆಂದು ಭ್ರಮಿಸಿ "ಮೇರಿಯಾ" (ಸಮುದ್ರ) ಎಂದು ಹೆಸರಿಟ್ಟರು. ಹೀಗಾಗಿ ನೀರಿಲ್ಲದ ಚಂದ್ರನಲ್ಲಿ "ಇಂಬ್ರಿಯಂ ಸಮುದ್ರ"ವನ್ನೂ ಗಾಳಿಯಿಲ್ಲದ ಚಂದ್ರನಲ್ಲಿ "ಬಿರುಗಾಳಿಯ ಸಾಗರ"ವನ್ನೂ ನಾವು ಕೇಳುತ್ತೇವೆ. ಭಾರತೀಯರು "ಮೊಲ"ವೆಂದು ಕರೆದ ಚಂದ್ರನ ಕಪ್ಪು ಕಲೆ ಮತ್ತೇನೂ ಆಗಿರದೆ ತಗ್ಗಿನ ಪ್ರದೇಶಗಳ ಮೇಲೆ ಬಿದ್ದ ನೆರಳೇ ಆಗಿದೆ. ಚಂದ್ರನ ಆಳವಾದ ಕೆಲ ತಗ್ಗುಗಳಲ್ಲಿ ಎಂದೂ ಬೆಳಕಿನ ಪ್ರವೇಶವಾಗಿರಲಿಕ್ಕಿಲ್ಲ.

ಆದರೆ ಈ ಗುಳಿಗುಂಪುಗಳು ಹೇಗೆ ಉಂಟಾದವೆಂದು ಮಾತ್ರ ಯಾರಿಗೂ ಗೊತ್ತಿಲ್ಲ ಚಂದ್ರನ ಹೊರಚಿಪ್ಪು ತಣ್ಣಗಾಗುತ್ತಿದ್ದಾಗ ಅದರ ಗರ್ಭದೊಳಗಿನ ಕುದಿಯು ಗುಳ್ಳೆಗಳಾಗಿ ಹೊರಬಿದ್ದು ಹೋಗುವಾಗ ಹೀಗಾಗಿರಬಹುದೇ ?— ದೋಸೆಗಳಲ್ಲಿನ ತೂತುಗಳಂತೆ ಎನ್ನಿರಿ. ಅಥವಾ ಉಲ್ಕೆಗಳ ಅದ್ಭುತ ವೃಷ್ಟಿಯಿಂದ ಚಂದ್ರನ ಮುಖಕ್ಕೆ ಹೀಗೆ ಗಾಯ್ಗಳಾಗಿರಬಹುದೆ?

ಆದರೆ ಇವೆಲ್ಲ ಚಂದ್ರನ ಅರ್ಧಭಾಗದ ಕೌತುಕಗಳು ಮಾತ್ರ. ಇನ್ನೊಂದರ್ಧವನ್ನು ಯಾರೂ ನೋಡಿಲ್ಲ. ಮಾನವನು ಚಂದ್ರನನ್ನು ನೋಡತೊಡಗಿದಂದಿನಿಂದಲೂ ಚಂದ್ರ ತನ್ನ ಒಂದೇ ಮುಖವನ್ನು ತೋರಿಸುತ್ತ ಬಂದಿದ್ದಾನೆ. ಚಂದ್ರನು ಭೂಮಿಗೆ ಒಂದು ಪ್ರದಕ್ಷಿಣೆ ಬರುವ ಕಾಲಾವಧಿಯೂ ಅವನು ತನ್ನ ಅಚ್ಚಿನಲ್ಲಿ ಒಂದು ಸುತ್ತು ತಿರುಗುವ ಕಾಲಾವಧಿಯೂ ಒಂದೇ (ಸುಮಾರು ೨೮ ದಿನ) ಆಗಿರುವುದರಿಂದ ಚಂದ್ರಗೋಲದ ಒಂದು ಮಗ್ಗಲು ನಮಗೆ ಸದಾಕಾಲವೂ ಅದೃಶ್ಯವಾಗಿದೆ. ಆದರೂ ಚಂದ್ರನ ಪ್ರದಕ್ಷಿಣಕಕ್ಷೆ ದೀರ್ಘವರ್ತುಲವಾಗಿರುವುದರಿಂದಲೂ ಅವನ ಪ್ರದಕ್ಷಿಣ ಗತಿ ಹೆಚ್ಚುಕಡಿಮೆಯಾಗುತ್ತಿರುವುರಿಂದಲೂ ಚಂದ್ರನ ಅದೃಶ್ಯ ಅರ್ಧದ ಸ್ವಲ್ಪ ಅಂಶವನ್ನು ನೋಡಲು ವಿಜ್ಞಾನಿಗಳಿಗೆ ಸಾಧ್ಯವಾಗಿದೆ.

ಚಂದ್ರನ ಆ ಅರ್ಧದಲ್ಲಿ ಈ ಅರ್ಧಕ್ಕಿಂತ ಬಹಳ ಅಂತರವನ್ನು ಅವರು ನಿರೀಕ್ಷಿಸುವುದಿಲ್ಲವಾದರೂ ತಮ್ಮ ಕೆಲ ಊಹೆಗಳನ್ನು ಪರೀಕ್ಷಿಸಿ ನೋಡಲು ಅವರು ಖಂಡಿತ ಆಶಿಸುತ್ತಾರೆ. ಮತ್ತಾವುದಕ್ಕಾಗಿ ಅಲ್ಲದಿದ್ದರೂ ಅವನ ಆಚೆ ಬದಿಯನ್ನೂ ನೋಡಿ ಬರುವ ಒಂದು ಉದ್ದೇಶಕ್ಕಾಗಿ ಆದರೂ ಅವರು ಚಂದ್ರಲೋಕಕ್ಕೆ ಹೋಗಲು ಅಪೇಕ್ಷಿಸಬಹುದು. ಉದಾಹರಣೆಗಾಗಿ ಚಂದ್ರನ ಆಚೆ ಬದಿ ಯಾವಾಗಲೂ ಭೂಮಿಗೆ ವಿಮುಖವಾಗಿರುವುದರಿಂದ ಭೂಮಿಯ ಆಕರ್ಷಣೆಗೆ ಅದು ಗುರಿಯಾಗುವುದಿಲ್ಲ. ಇದರ ಫಲವಾಗಿ ಆ ಭಾಗದ ನಡುನಡುವೆ ಏನಾದರೂ ವಿಚಿತ್ರ ಲಕ್ಷಣಗಳುಂಟಾಗಿರಬಹುದೆಂದು ಅವರ ತರ್ಕ.

ಇತರ ಕಾರಣಗಳ ಸಲುವಾಗಿಯೂ ಅವರು ಚಂದ್ರಲೋಕ ಯಾತ್ರೆಗೆ ಆತುರರಾಗಿದ್ದಾರೆ. ಚಂದ್ರನ ತೂಕ, ದಾರ್ಢ್ಯ ಇವೆಲ್ಲ ಅವರಿಗೆ ಗೊತ್ತಿದೆ. ಭೂಮಿಯಲ್ಲಿ ಒಂದು ಪಂಥೇರು ತೂಗುವ ಪದಾರ್ಥ ಚಂದ್ರನಲ್ಲಿ ಒಂದು ಸೇರು ತೂಗೀತು. ಅದರ ಬಟ್ಟು, ದಾರ್ಢ್ಯ ಭೂಮಿಯ ದಾರ್ಢ್ಯಕ್ಕಿಂತ ಕಡಿಮೆಯಾಗಿದೆ. ಆದರೆ ಚಂದ್ರನಲ್ಲಿ ಯಾವ ಬಗೆಯ ಪದಾರ್ಥ ಇರಬಹುದು ? ಇದು ಅವರಿಗೆ ಬೇಕಾಗಿದೆ. ಚಂದ್ರನ ವಿಶಿಷ್ಟ ದಾರ್ಢ್ಯ ೩·೩ ಮಾತ್ರ ಆಗಿರುವುದರಿಂದ ಅದರಲ್ಲಿ ಯುರೇನಿಯಂ, ಚಿನ್ನ ಮೊದಲಾದ ಭಾರವಾದ ಧಾತುಗಳು ಇರಲಿಕ್ಕಿಲ್ಲ, ಇದ್ದರೂ ತೀರ ಕಡಿಮೆ ಇರಬಹುದೆಂದು ಅವರು ಹೇಳುತ್ತಾರೆ. ಇದು ಚಂದ್ರಲೋಕಕ್ಕೆ ಹೋಗಿ ಪರಮಾಣು ಬಾಂಬುಗಳಿಗೆ ಬೇಕಾದ ಪದಾರ್ಥಗಳನ್ನು ತಂದೇವೆಂದಾಶಿಸುವ ರಾಜಕಾರಣಿಗಳಿಗೆ ನಿರಾಶಾಜನಕವಾಗಬಹುದು. ಚಂದ್ರಗೋಲದ ಮೇಲ್ಪದರು ನಮ್ಮ ಮಣ್ಣಿನಂತಿರಲಾರದೆಂದು

ವಿಜ್ಞಾನಿಗಳ ಊಹೆ. ಆದರೆ ಅದು ಹಗುರಾದ ನೀರನ್ನು ಇಂಗಿಸಿಕೊಳ್ಳಬಹುದಾದ ಪದಾರ್ಥ ವಿದ್ದೀತೆಂದು ಅವರ ಮತ. ಇದು ನಿಜವೋ ಎಂದು ನೋಡಲು ಅವರಿಗೆ ಆತುರವಿದೆ.

ಅವರಿಗೆ ಭೂಮಿಯಿಂದ ನೋಡಿದಾಗ ಅರ್ಥ ವಾಗದ ಇನ್ನೊಂದು ಸಂಗತಿಯೆಂದರೆ, ಚಂದ್ರನ ಮೇಲೆ ಹಬ್ಬಿರುವ ಪ್ರಕಾಶಮಾನ ರೇಷೆಗಳು. ಕೆಲ ಗುಳಿಗುಂಪುಗಳಿಂದ ಸುತ್ತಲೂ ಕಿರಣಗ ಳಂತೆ ಹೊರಟು ಸಾವಿರಾರು ಮೈಲುದ್ದಕ್ಕೆ ಗುಡ್ಡ ತಿಟ್ಟುಗಳೆನ್ನದೆ ನೆಟ್ಟಗೆ ಸಾಗಿದ ಈ ರೇಷೆಗಳು ಏನು ಎಂಬ ಸಮಸ್ಯೆ ಇಂದಿಗೂ ಬಗೆಹರಿದಿಲ್ಲ. ಚಂದ್ರನ ಮೇಲೆ ಎದ್ದ ಜ್ವಾಲಾಮುಖಿಗಳಿಂದ ಹಬ್ಬಿದ ಧೂಳಿನಂಥ ಪದಾರ್ಥವಿದಾಗಿರಬ ಹುದೆ?

ಚಂದ್ರಲೋಕಕ್ಕೆ ಭೂಮಿಯಿಂದ ಹೋಗು ವುದಕ್ಕಿಂತ ಅಲ್ಲಿಂದ ತಿರುಗಿ ಬರುವುದು ಸುಲಭ. ಏಕೆಂದರೆ ಇಲ್ಲಿ ಒಂದು ಪದಾರ್ಥ ವನ್ನು ಆರಡಿ ಎತ್ತರಕ್ಕೆ ಒಗೆಯಲು ಬೇಕಾದ ಶಕ್ತಿಯಿಂದ ಅಲ್ಲಿ ಅದನ್ನು ೩೬ ಅಡಿ ಎತ್ತರಕ್ಕೆ ಹಾರಿಸಬಹುದು. ಆದರೆ ಚಂದ್ರನಿಂದ ಕಾಣಿಸುವ ಲೋಕ ಇಲ್ಲಿಂದ ಕಾಣಿಸುವುದಕ್ಕಿಂತ ತೀರ ಭಿನ್ನ ವಾದುದು. ಅಲ್ಲಿ ಉಷಃಕಾಲವಿರದು, ಸಂಧ್ಯಾ ಕಾಲವಿರದು. ಭೂಮಿಯಲ್ಲಿ ಸೂರ್ಯೋದಯ ಕ್ಕಿಂತ ಸ್ವಲ್ಪ ಮೊದಲು ಮತ್ತು ಸೂರ್ಯಾಸ್ತದ ನಂತರ ವಾತಾವರಣವು ಜೀವನ ಪ್ರಭೆಯನ್ನು ಪಡೆದು ಭೂಮಿಯನ್ನು ಬೆಳಗಿಸುತ್ತದೆ. ಇದೇ ಸಂಧಿ ಪ್ರಕಾಶ. ಆದರೆ ವಾತಾವರಣವಿಲ್ಲದ ಚಂದ್ರಲೋಕದಲ್ಲಿ ಸೂರ್ಯೋದಯವಾದಾಗಲೇ ಬೆಳಕು, ಸೂರ್ಯಾಸ್ತವಾದೊಡನೆ ಕಗ್ಗತ್ತಲೆ. ಹಗ ಲಲ್ಲಿ ಕೂಡ ಸೂರ್ಯನೂ ನಕ್ಷತ್ರಗಳೂ ಕಾಡಿಗೆಗ ತ್ತಲೆಯ ಮಧ್ಯದಲ್ಲಿ ಉರಿಯುವ ಬೆಂಕಿಯ ಗೋಲಗಳಂತೆ ಪ್ರಖರವಾಗಿ ಕಾಣಿಸುತ್ತವೆ. ವಾತಾವರಣವು ಪ್ರಕಾಶವನ್ನು ಚದರಿಸದಿರುವು ದರಿಂದ ನೀಲಾಕಾಶ ಅಲ್ಲಿಲ್ಲ. ಕೇವಲ ಕಪ್ಪು.

ಭೂಮಿಯ ವಾತಾವರಣ ಒಂದು ತರದ ಹೊದಿಕೆಯಂತೆ ವರ್ತಿಸಿ ಚಳಿಯನ್ನೂ ಬಿಸಿ ಯನ್ನೂ ಸಮತೋಲಕ್ಕೆ ತರುತ್ತದೆ. ಆದರೆ ಚಂದ್ರನಲ್ಲಿ, ಕತ್ತಲಾದ ಕೂಡಲೆ ಅಗಾಧ ಶೀತ, ಹಗಲಲ್ಲಿ ಅಗಾಧ ಉಷ್ಣ. ಶೀತೋಷ್ಣಗಳು ಅಲ್ಲಿ ಫೆರನ್ಹೈಟಿನ ಶೂನ್ಯಾಂಶಕ್ಕಿಂತ ೨೪೩ ಡಿಗ್ರಿ ಕೆಳಗಿ ನಿಂದ ೨೧೪ ಡಿಗ್ರಿ ಮೇಲಿನ ವರೆಗೆ ಏರಿಳಿಯು ತ್ತವೆ.

ಚಂದ್ರನ ವೃದ್ಧಿಕ್ಷಯಗಳು ಅನೇಕ ಪೌರಾ ಣಿಕ ಕಥೆಗಳಿಗೆ ಕಾರಣಗಳಾಗಿವೆ. ನಮ್ಮ ಚಾಂದ್ರಮಾನ ಮಾಸಗಳೂ ತಿಥಿಗಳೂ ಅದರಿಂ ದಲೇ ಆಗಿವೆ. ಅಮಾವಾಸ್ಯೆಯ ದಿನ ಚಂದ್ರನು ತನ್ನ ಕಕ್ಷೆಯಲ್ಲಿ ನಮಗೂ ಸೂರ್ಯನಿಗೂ ನಡುವೆ ಬರುತ್ತಾನೆ. ಆಗ ನಮಗೆ ಅದೃಶ್ಯವಾದ ಚಂದ್ರನ ಬೆನ್ನು ಸೂರ್ಯನಿಂದ ಪ್ರಕಾಶಿತವಾಗಿ ನಮಗೆ ತೋರುವ ಮುಖ ಪೂರ್ತಿ ಕತ್ತಲಾಗಿರುವುದ ರಿಂದ ಚಂದ್ರನು ಕಾಣಿಸುವುದಿಲ್ಲ. ಬರುತ್ತ ಬರುತ್ತ ಅವನು ಪೂರ್ವಕ್ಕೆ ಸರಿದಂತೆ ನಮಗೆ ಗೋಚರವಾಗುವ ಭಾಗದ ಹೆಚ್ಚೆಚ್ಚು ಅಂಶಕ್ಕೆ ಬೆಳಕು ಸಿಗುತ್ತ ಬಂದು ಪೂರ್ಣಿಮೆಯ ದಿನ ಅವನ ಇಡೀ ದೃಶ್ಯಭಾಗ ಬೆಳಗುತ್ತದೆ. ಆಗ ಚಂದ್ರನಿಗೂ ಸೂರ್ಯನಿಗೂ ನಡುವೆ ಭೂಮಿ ಇರು ತ್ತದೆ. ಚಂದ್ರ ಮುಂದೆ ಸರಿದಂತೆ ಅವನ ಇನ್ನೊಂದು ಮಗ್ಗಲಿಗೆ ಬೆಳಕು ದೊರೆಯುತ್ತ ಹೋಗಿ ನಮಗೆ ಕಾಣಿಸುವ ಮಗ್ಗಲಿನ ಹೆಚ್ಚು ಹೆಚ್ಚು ಅಂಶಕ್ಕೆ ಕತ್ತಲು ಮುಸುಕುತ್ತ ಕೊನೆಗೆ ಅಮಾವಾಸ್ಯೆಯಾಗುವುದು.

ಶತಮಾನಕ್ಕೆ ೧೫೦ ಸಲ ಒದಗುವ ಚಂದ್ರಗ್ರ ಹಣವು ಚಂದ್ರನ ಮುಖಕ್ಕೆ ಭೂಮಿ ಸರಿಯಾಗಿ ಅಡ್ಡ ಬರುವುದರಿಂದಾಗುತ್ತದೆ. ಇದು ಪೂರ್ಣಿ ಮೆಯ ದಿನವೇ ಸಾಧ್ಯ. ಪ್ರತಿ ಪೂರ್ಣಿಮೆಗೊಮ್ಮೆ ಸೂರ್ಯಚಂದ್ರರ ನಡುವೆ ಭೂಮಿ ಬಂದರೂ ಅದು ಸರಿಯಾಗಿ ಅಡ್ಡ ಬರುವುದು ಕೆಲವೇ ಪೂರ್ಣಿಮೆಗಳಲ್ಲಿ. ಆದ್ದರಿಂದ ಪ್ರತಿ ತಿಂಗಳು ಗ್ರಹಣವಾಗುವುದಿಲ್ಲ.

ಚಂದ್ರನಿಗೆ ಸ್ವಪ್ರಕಾಶವಿಲ್ಲವೆಂದೂ ಅದು ಸೂರ್ಯನ ಪ್ರಕಾಶವನ್ನು ಪ್ರತಿಬಿಂಬಿಸುತ್ತದೆಂದೂ ಎಲ್ಲ ಶಾಲಾ ಬಾಲಕರೂ ಬಲ್ಲರು. ಆದರೆ ಚಂದ್ರ ಕನ್ನಡಿಯಂತಿದ್ದಾನೆಂದು ಹೇಳಲಾಗದು. ಚಂದ್ರನ ಮೇಲೆ ಬಿದ್ದ ಪ್ರಕಾಶದಲ್ಲಿ ನೂರ

ಕ್ಕೆಳು ಭಾಗವಷ್ಟೇ ಪ್ರತಿಬಿಂಬಿಸಲ್ಪಡುತ್ತದೆ. ಆದರೆ ಚಂದ್ರನು ಭೂಮಿಗೆ ಕೊಡುವ, ಕವಿಗಳಿಗೆ ಪ್ರಿಯವಾದ ಸೌಮ್ಯ ಪ್ರಕಾಶಕ್ಕಿಂತ ಹೆಚ್ಚನ್ನು ಭೂಮಿ ಚಂದ್ರನಿಗೆ ಕೊಡುತ್ತದೆ. ಏಕೆಂದರೆ ಭೂಮಿ ತನ್ನ ಮೇಲೆ ಬಿದ್ದ ೩ ಸೂರ್ಯ ಪ್ರಕಾಶ ವನ್ನು ಪ್ರತಿಬಿಂಬಿಸುತ್ತದೆ.

ವಿಜ್ಞಾನಿಗಳು ಚಂದ್ರಲೋಕಕ್ಕೆ ಹೋಗುವುದಾದರೆ ಅವರ ಮುಖ್ಯ ಉದ್ದೇಶವು ವಿಶ್ವದ ನಿರೀಕ್ಷಣೆಯೇ ಆಗುವುದು. ನಮಗೆ ಭೂಮಿಯಿಂದ ಕಾಣಿಸುವ ಬ್ರಹ್ಮಾಂಡದ ಚಿತ್ರ ವಿಕೃತವಾದದ್ದು. ವಾತಾವರಣವು ಬ್ರಹ್ಮಾಂಡದ ಪ್ರಕಾಶಕ್ಕೆ ಅಡ್ಡವಾಗಿ ಈ ವಿಕೃತಿಯನ್ನುಂಟುಮಾಡುತ್ತದೆ. ಗ್ರಹ ನಕ್ಷತ್ರಗಳ ಸರಿಯಾದ ದೃಶ್ಯ ಇದರಿಂದ ನಮಗೆ ಸಿಕ್ಕುವುದಿಲ್ಲ. ಕಾಸ್ಮಿಕ್ ಕಿರಣಗಳನ್ನಂತೂ ವಾತಾವರಣ ಪೂರ್ತಿಯಾಗೆಂಬಂತೆ ಹೀರಿಕೊಳ್ಳುತ್ತದೆ. ಚಂದ್ರನಲ್ಲಿ ವಾತಾವರಣವಿಲ್ಲದ್ದರಿಂದ ನಿರೀಕ್ಷಣೆಗಳಿಗೆ ಅದು ಉತ್ತಮ ಸ್ಥಳ.



## ಬೋಳು ತಲೆಯವರಿಗೆ ಸಮಾಧಾನ

ತಲೆ ಬೋಳಾದ ಗಂಡಸರು ಅದಕ್ಕಾಗಿ ನಾಚಿಕೆಪಟ್ಟುಕೊಳ್ಳತಕ್ಕದ್ದೇನೂ ಇಲ್ಲ. ನಿಜವಾಗಿ ಅದು ಹೆಮ್ಮೆಪಟ್ಟುಕೊಳ್ಳಬಹುದಾದ ಸಂಗತಿಯೆಂದು ವಿಜ್ಞಾನಿಗಳು ಸೂಚಿಸಿದ್ದಾರೆ.

ಸಾಮಾನ್ಯ ಬೋಳುತಲೆ—ಖಲ್ವಾಟತನ—ಯಲ್ಲಿ ಕೂದಲು ಹುಟ್ಟುವುದೇ ಇಲ್ಲ ಎಂದು ಭಾವಿಸುವುದು ತಪ್ಪು ಎಂದು ಪ್ರೊ. ಡಬ್ಲ್ಯು. ಎಸ್. ಬುಲೋಘರು ಹೇಳುತ್ತಾರೆ. ಬೋಳುತನ ಪ್ರಾರಂಭವಾದಾಗ ನಿಮ್ಮ ನೆತ್ತಿಯಲ್ಲಿ ಬೇರೆ ವಿಧವಾದ ಕೂದಲು ಹುಟ್ಟಲಾರಂಭಿಸುತ್ತದಷ್ಟೇ. ಬೋಳು ತಲೆಯನ್ನು ಸೂಕ್ಷ್ಮವಾಗಿ ಪರೀಕ್ಷಿಸಿದರೆ ಅದರಲ್ಲಿ ಬೇರೆಯೇ ತರದ ಅತಿ ಸೂಕ್ಷ್ಮವಾದ ಕೂದಲುಗಳು ಕಾಣಿಸುವವು. ಇವಕ್ಕೆ "ಲಾನುಗೊ" ಕೂದಲುಗಳೆಂದು ಹೆಸರು.

ಸಾಧಾರಣ ಮನುಷ್ಯನ ಜೀವನದಲ್ಲಿ ಎರಡು ಸಲ ಇಂಥ ಬದಲಾವಣೆಯಾಗುತ್ತದೆ. ಮೊದಲನೇ ಸಲ ಅವನ ಗಲ್ಲದಲ್ಲಿ—ಆಗ ಅವನ ಮುಖದ ಸೂಕ್ಷ್ಮವಾದ ಕೂದಲುಗಳು ಮರೆಯಾಗಿ ಬಿರುಸಾದ ಗಡ್ಡ ಬೆಳೆಯುತ್ತದೆ. ಅನೇಕ ವರ್ಷಗಳ ನಂತರ ಅವನ ತಲೆಯ ಮೇಲೆ ಇದಕ್ಕೆ ವಿರುದ್ಧವಾದ ಪರಿವರ್ತನೆಯಾಗುತ್ತದೆ.

ಇವೆರಡಕ್ಕೂ ಕಾರಣವೊಂದೇ—ಗಂಡಸಿನಲ್ಲಿರುವ ಪುರುಷ ಹಾರ್ಮೋನುಗಳ ತೀವ್ರಕ್ರಿಯೆ. ಆದ್ದರಿಂದ ಬೋಳುತಲೆಯುವನಲ್ಲಿ ಪುರುಷತ್ವ ಇಳಿಮುಖವಾಗಿದೆಯೆಂದೂ ಕೂದಲುಳ್ಳವನು ಪುರುಷತ್ವಶಾಲಿಯೆಂದೂ ಹೇಳುವುದು ತಪ್ಪು. ತದ್ವಿರುದ್ಧವಾಗಿ ಬೋಳುತಲೆಯುವನಲ್ಲಿ ಪುರುಷತ್ವ ಹೆಚ್ಚಾಗಿದೆಯೆಂದೇ ಹೇಳಬಹುದು.

—ವರ್ಲ್ಡ್ ಸಾಯನ್ಸ್ ರಿವ್ಯೂ

ತಿಂಗಳಲ್ಲಿ ಒಂದು ವಾರ ಸಂಯಮ ಆಚರಿಸಿ
ಮಕ್ಕಳಾಗುವುದನ್ನು ತಪ್ಪಿಸಬಹುದು

# ನೈಸರ್ಗಿಕ ಉಪಾಯದಿಂದ ಸಂತತಿ ನಿಯಂತ್ರಣ

ಸಂತತಿನಿಯಂತ್ರಣ ಬೇಕೇ ಬೇಡವೆ? ಎಂಬ ಪ್ರಶ್ನೆಯನ್ನು ಇಂದು ಯಾವ ವಿಚಾರವಂತರೂ ಕೇಳುತ್ತಿಲ್ಲ. ಆದರೆ ಯಾವ ಸಾಧನದಿಂದ ಸಂತತಿ ನಿಯಂತ್ರಣ ಮಾಡಬೇಕು? ಎಂಬ ಪ್ರಶ್ನೆ ಮಾತ್ರ ಅಷ್ಟು ಸುಗಮವಾದುದಲ್ಲ. ರಬ್ಬರ ಕೊಳವೆ ಮೊದಲಾದ ಸಾಧನಗಳ ಉಪಯೋಗ, ರಾಸಾಯನಿಕ "ಔಷಧಿ" ಗಳ ಪ್ರಯೋಗ, ಶಸ್ತ್ರಕ್ರಿಯೆ ಮತ್ತು ನೈಸರ್ಗಿಕ ಪದ್ಧತಿ ಮೊದಲಾದ ವಿಧಾನಗಳನ್ನು ಪ್ರತಿಪಾದಿಸಲಾಗುತ್ತಿದೆ. ಆದರೆ ಮೊದಲಿನ ಎರಡು, ಭಾರತದಂಥ ಹಿಂದುಳಿದ ಮತ್ತು ಬಡದೇಶದಲ್ಲಿ ಸಾರ್ವತ್ರಿಕ ಉಪಯೋಗಕ್ಕೆ ಬರುವುದು ಕಠಿಣ. ಅಲ್ಲದೆ ಅವು ನಮ್ಮ ಭಾವನೆಗಳಿಗೆ ಅಸಹ್ಯವೆನಿಸುತ್ತವೆ. ಮೂರನೇ ಪದ್ಧತಿ ಭಾರತದಲ್ಲಿ ಹೆಚ್ಚು ಹೆಚ್ಚಾಗಿ, ವಿಶೇಷತಃ ಮಧ್ಯಮ ವರ್ಗದವರಲ್ಲಿ ಪ್ರಚಾರಕ್ಕೆ ಬರುತ್ತಿದೆ. ಆದರೆ ಒಮ್ಮೆ ಶಸ್ತ್ರಕ್ರಿಯೆ ಮಾಡಿಸಿಕೊಂಡ ಮೇಲೆ ಪುನಃ ಸಂತತಿ ಬೇಕೆನಿಸಿದರೆ ಅದು ಸಾಧ್ಯವಾಗಲಾರದು. ಆದ್ದರಿಂದ ಅದಕ್ಕೆ ಅಂಜಬೇಕಾಗುತ್ತದೆ.

ನಾಲ್ಕನೆಯದಾದ "ನೈಸರ್ಗಿಕ ಪದ್ಧತಿ"ಯು ಮೇಲಿನ ಕೊರತೆಗಳಿಂದ ಬಹಳ ಮಟ್ಟಿಗೆ ಮುಕ್ತವಾಗಿದೆ. ಅದು ದಂಪತಿಗಳಿಂದ ವರ್ಷಾನುಗಟ್ಟಳೆ ಬ್ರಹ್ಮಚರ್ಯೆಯನ್ನು ಅಪೇಕ್ಷಿಸುವುದಿಲ್ಲ. ಪ್ರತಿ ತಿಂಗಳಲ್ಲಿ ಕೆಲವು ದಿನಗಳ ಮಟ್ಟಿಗೆ ಪುರುಷ ಸಂಸರ್ಗವನ್ನು ವರ್ಜಿಸಿ ಗರ್ಭ ನಿಲ್ಲುವುದನ್ನು ತಪ್ಪಿಸಲು ಸಾಧ್ಯವಿದೆ. ಈ ಪದ್ಧತಿಗೆ "ಋತು ಚಕ್ರಪದ್ಧತಿ", "ಸುರಕ್ಷಿತ ದಿನ ಪದ್ಧತಿ" ಎಂದೂ ಹೆಸರುಗಳುಂಟು.

ಹಾಗೆ ಕೇಳಿದರೆ ಈ ಪದ್ಧತಿಯಲ್ಲಿ ಅಂಥ ಹೊಸದೇನೂ ಇಲ್ಲ. ಸ್ತ್ರೀಯರಿಗೆ ತಿಂಗಳ ಎಲ್ಲ ದಿನಗಳಲ್ಲಿಯೂ ಗರ್ಭ ನಿಲ್ಲುವ ಸಂಭವ ಇರುವುದಿಲ್ಲ, ವಿಶಿಷ್ಟ ದಿನಗಳಲ್ಲಿ ಪುರುಷ ಸಂಪರ್ಕವಾದರೆ ಮಾತ್ರ ಹಾಗಾಗುವುದು ಎಂಬ ತಿಳಿವಳಿಕೆ ಬಹಳ ಪ್ರಾಚೀನ ಕಾಲದಿಂದಲೂ ಇತ್ತು. ಕ್ರಿಸ್ತ ಪೂರ್ವಕಾಲದಲ್ಲೇ ಹಿಂದೂ ವೈದ್ಯರು ಇದನ್ನು ಹೇಳಿದ್ದಾರೆ. ಇತರ ದೇಶಗಳಲ್ಲಿಯೂ ಈ ನಂಬಿಕೆ ಇದ್ದೇ ಇತ್ತು. ತಿಂಗಳು ತಿಂಗಳು ಮುಟ್ಟಾಗುವ ದಿನಕ್ಕೂ "ಫಲವತ್" (ಗರ್ಭ ನಿಲ್ಲಲು ಅನುಕೂಲವಾದ) ದಿನಗಳಿಗೂ ಸಂಬಂಧವಿದೆಯೆಂದೂ ಅವರು ಊಹಿಸಿದ್ದರು. ಅವರು ನಿರ್ಧರಿಸಿದ "ಫಲವತ್" ಮತ್ತು "ಅಫಲವತ್" ದಿನಗಳ ಲೆಕ್ಕಾಚಾರ ಮಾತ್ರ ಅಷ್ಟು ಸರಿಯಾಗಿತ್ತೆನ್ನಲು ಬಾರದು.

ಒಂದು ಮುಟ್ಟಿನ ದಿನಕ್ಕೂ ಮುಂದಿನ ಮುಟ್ಟಿನ ದಿನಕ್ಕೂ ನಡುವೆ ಕೆಲವೇ ದಿನಗಳಲ್ಲಿ ಗರ್ಭನಿಲ್ಲುವುದು ಸಾಧ್ಯವಿದೆಯೆಂಬುದು ಹೇಗೆ? ಗರ್ಭ ನಿಲ್ಲಬೇಕಾದರೆ ಪುರುಷವೀರ್ಯದಲ್ಲಿರುವ ಬೀಜ ಸ್ತ್ರೀಯ ಡಿಂಭನಳಿಕೆಯಲ್ಲಿರುವ ಡಿಂಭಾ

ಣುವಿನೊಡನೆ ಸಂಯೋಗ ಹೊಂದಬೇಕು. ಪುರುಷ ವೀರ್ಯದಲ್ಲಿ ಬೀಜಗಳು ಯಾವಾಗಲೂ ಇದ್ದರೂ ಸ್ತ್ರೀಡಿಂಭನಳಿಕೆಯಲ್ಲಿ ಡಿಂಭಾಣು ಯಾವಾಗಲೂ ಸಿದ್ಧವಾಗಿರುವುದಿಲ್ಲ. ಒಂದು ಋತುಚಕ್ರದ ಅವಧಿಯಲ್ಲಿ (ಈ ಸಲ ಮುಟ್ಟಾದ ಮೇಲೆ ಮುಂದಿನ ಸಲ ಮುಟ್ಟಾಗುವವರೆಗಿನ ಅವಧಿ) ಕೇವಲ ಒಂದು ಸರ್ತಿ ಮಾತ್ರ ಡಿಂಭಾಣುವಿನ ಉತ್ಪತ್ತಿಯಾಗುವುದೆಂದು ಆಧುನಿಕ ವಿಜ್ಞಾನದ ಅಭಿಪ್ರಾಯವಾಗಿದೆ. ಹೀಗೆ ಉತ್ಪತ್ತಿಯಾದ ಡಿಂಭಾಣುವೂ ೪೮ ತಾಸುಗಳ ವರೆಗೆ ಜೀವಂತವಾಗಿರುತ್ತದಷ್ಟೇ. ಈ ೪೮ ತಾಸುಗಳಲ್ಲಿಯೂ ಮೊದಲ ೨೪ ತಾಸುಗಳಲ್ಲಿ ಪುರುಷ ಬೀಜವು ಬಂದು ಸೇರಿದರೆ ಮಾತ್ರ ಗರ್ಭೋತ್ಪತ್ತಿಯಾಗಬಲ್ಲದೆಂದು ತರ್ಕಿಸಲಾಗಿದೆ. ಬೇರೆ ಸಮಯದಲ್ಲಿ ಪುರುಷಸಂಯೋಗವಾದರೂ ಅದು "ಫಲಪ್ರದ" ವಾಗಲಾರದು. ಗರ್ಭನಿಲ್ಲಬಾರದೆಂದಿರುವವರು ಈ ಅವಧಿಯಲ್ಲಿ ಪುರುಷ ಸಂಸರ್ಗವನ್ನು ತ್ಯಜಿಸುವುದು ಒಳ್ಳೇ ಉಪಾಯ.

ಡಿಂಭಾಣುವಿನ ಉತ್ಪತ್ತಿ ಯಾವಾಗ ಆಗುವುದೆಂಬುದೂ ಸಾಕಷ್ಟು ನಿಶ್ಚಿತಗೊಳಿಸಲ್ಪಟ್ಟಿದೆ. ಅದಕ್ಕೂ ಮುಟ್ಟಾಗುವ ದಿನಕ್ಕೂ ಸಂಬಂಧವಿದೆ. **ಮುಂದಿನ ಮುಟ್ಟಿನ ದಿನಕ್ಕೆ ೧೪ ದಿನಗಳಿರುವಾಗ ಡಿಂಭಾಣು ಹುಟ್ಟುತ್ತದೆಂಬುದು ಸಾಮಾನ್ಯವಾಗಿ ಎಲ್ಲರೂ ಒಪ್ಪಿದ ಮಾತು.** ಈ ಸಮಯದಲ್ಲಿ ಬೀಜಸಂಪರ್ಕವಾದರೆ ಗರ್ಭ ನಿಲ್ಲುವ ಸಂಭವವಿದೆ. ಆದ್ದರಿಂದ ಇದನ್ನು "ಅಸುರಕ್ಷಿತ" ಅವಧಿಯೆಂದೂ ಉಳಿದ ದಿನಗಳನ್ನು "ಸುರಕ್ಷಿತ" ಅವಧಿಯೆಂದೂ ಹೇಳುವುದು.

ಮುಟ್ಟಿನ ಗಡುವು ಸಾಮಾನ್ಯವಾಗಿ ೨೮ ದಿನಗಳಿಗೊಮ್ಮೆ ಎಂದು ತಿಳಿವಳಿಕೆಯಾದರೂ ಎಲ್ಲರಿಗೂ ಅನ್ವಯಿಸುವ ನಿಯಮವಿದಲ್ಲ. ಕೆಲವರು ೨೨ ದಿನಗಳಿಗೇ ಮುಟ್ಟಾಗುತ್ತಾರೆ, ಕೆಲವರಿಗೆ ೩೪ ದಿನಗಳ ವರೆಗೂ ಅವಧಿಯಿರುತ್ತದೆ. ಆದರೆ ಅವಧಿ ಎಷ್ಟೇ ಇದ್ದರೂ ಮುಂದಿನ ಮುಟ್ಟಿಗಿಂತ ೧೪ ದಿನ ಮೊದಲು ಡಿಂಭಾಣು ಉತ್ಪತ್ತಿಯಾಗುತ್ತದೆಂದು ಕಂಡುಬಂದಿದೆ.

ಆಹಾ! ಬಹಳ ಸುಲಭ; ಇನ್ನೇನು? ಎಂದು ಮೊದಲ ನೋಟಕ್ಕೆ ಕಾಣಬಹುದು. ಆದರೆ ವಿಷಯ ಅಷ್ಟು ಸರಳವಿಲ್ಲ **ಮುಂದಿನ** ಮುಟ್ಟಿನ ದಿನಕ್ಕೆ ೧೪ ದಿನಗಳಿರುವಾಗ ಡಿಂಭಾಣು ಉತ್ಪತ್ತಿಯಾಗುವುದು ನಿಜವಾದರೂ ಮುಂದಿನ ಮುಟ್ಟಿನ ದಿನವನ್ನು ನಿರ್ಧರಿಸುವುದು ತುಸು ಬಿಗಿಯಾದ ಕೆಲಸ. ಬೇರೆ ಬೇರೆ ಸ್ತ್ರೀಯರಿಗೆ ಬೇರೆಬೇರೆ ಗಡುವುಗಳಿರುವುದಿಷ್ಟೇ ಅಲ್ಲ, ಒಬ್ಬಳೇ ಸ್ತ್ರೀಯಲ್ಲಿ ಕೂಡ ಗಡುವು ಒಂದೇ ತರವಾಗಿರುವುದಿಲ್ಲ. ಡಿಂಭಾಣು ಉತ್ಪತ್ತಿಯ ದಿನವು **ಹಿಂದಿನ** ಮುಟ್ಟಿನ ದಿನದಿಂದ ೧೪ ನೇ ದಿನವೆಂದಿದ್ದರೆ ಎಣಿಸಲು ಸುಲಭವಾಗಿತ್ತು. ದುರ್ದೈವದಿಂದ ಅದು ಹಾಗಿಲ್ಲ **ಮುಂದಿನ** ಮುಟ್ಟಿನ ದಿನವನ್ನು ಖಾತ್ರಿಯಾಗಿ ಊಹಿಸಲು ಕಷ್ಟವಾಗಿರುವುದೇ ಈ ಪದ್ಧತಿಯ ಮೊದಲನೇ ತೊಡಕು.

ಆದರೆ ಇದಕ್ಕೆ ಸಾಕಷ್ಟು ನಿಶ್ಚಿತವಾದ ಉಪಾಯವಿದೆ. ಮುಟ್ಟಿನ ಗಡುವುಗಳಲ್ಲಿ ಯಾವ ತರದ ನಿಶ್ಚಿತತೆಯಿಲ್ಲದ ಸ್ತ್ರೀಯರು ಕೆಲವರಿರಬಹುದಾದರೂ ಸೇಕಡಾ ೮೦ ಸ್ತ್ರೀಯರಲ್ಲಿ ಸಾಧಾರಣ ನಿರ್ದಿಷ್ಟವಾದ ಋತುಚಕ್ರ ವರ್ತನೆಯಿರುತ್ತದೆ. ಇಂಥವರ ಮುಟ್ಟಿನ ದಿನಗಳನ್ನು ಆರಾರು ತಿಂಗಳ ವರೆಗೆ ಬಿಟ್ಟೂ ಬಿಡದೆ ಗುರುತಿಸಿದರೆ ಅವರ ಕನಿಷ್ಠ ಮತ್ತು ಪರಮಾವಧಿ ಗಡುವುಗಳನ್ನು ಗೊತ್ತುಪಡಿಸಬಹುದಾಗಿದೆ.

ಈಗ 'ಅಸುರಕ್ಷಿತ" ದಿನಗಳನ್ನೂ "ಸುರಕ್ಷಿತ" ದಿನಗಳನ್ನೂ ಹೇಗೆ ಗೊತ್ತುಪಡಿಸಬಹುದೆಂದು ನೋಡೋಣ. ೨೮ ದಿನಗಳ ಋತುಚಕ್ರವಿರುವ ಹೆಂಗಸರನ್ನು ತೆಗೆದುಕೊಂಡರೆ, ಮುಟ್ಟಾಗಿ ೧೪ ನೇ ದಿನದ ಸುಮಾರಿಗೆ ಡಿಂಭಾಣು ಉತ್ಪತ್ತಿಯಾಗುತ್ತದೆಂದು ಗಣಿಸಬಹುದು. ೩೪ ದಿನಗಳ ಗಡು

ಇರುವವಳಿಗೆ ಮುಟ್ಟಾಗಿ ೨೦ನೇ ದಿನ ಡಿಂಭಾಣು ಉತ್ಪತ್ತಿಯಾಗುತ್ತದೆ. ೨೪ ದಿನಗಳ ಗಡುವಿರುವವಳಿಗಾದರೆ ಮುಟ್ಟಾಗಿ ೧೦ ನೇ ದಿನವೇ ಡಿಂಭೋತ್ಪತ್ತಿಯಾಗುವುದು. ಆಯಾ ದಿನಗಳಿಂದ ೪೮ ತಾಸುಗಳ ವರೆಗೆ ಮಾತ್ರ ಅವಳಿಗೆ ಗರ್ಭೋತ್ಪತ್ತಿಯ ಸಂಭವವಿದೆ.

ಈ ವರೆಗೆ ನಾವು ಗಣನೆಗೆ ತೆಗೆದುಕೊಳ್ಳದಿದ್ದ ಇನ್ನೊಂದು ಸಂಗತಿಯಿದೆ. ಅದೆಂದರೆ ಗಂಡಸಿನ ಬೀಜದ ಜೀವಮಾನ. ಬೀಜವು ಯೋನಿಯಲ್ಲಿ ಬಿದ್ದ ೭೨ ತಾಸುಗಳ ವರೆಗೆ ಜೀವಂತವಿರಬಹುದು. ಡಿಂಭೋತ್ಪತ್ತಿ ಕಾಲಕ್ಕೆ ಬೀಜವು ಜೀವಂತವಿದ್ದನ್ನಾದರೆ ಅದು ಫಲಿತವಾಗಿ ಗರ್ಭ ಹುಟ್ಟಬಹುದು. ಆದ್ದರಿಂದ ಡಿಂಭೋತ್ಪತ್ತಿಯ ಮೂರು ದಿನಗಳ ಮುಂಚೆಯೇ ಸಂಭೋಗವನ್ನು ತ್ಯಜಿಸಬೇಕಾಗುವುದು.

ಇದಲ್ಲದೆ ಡಿಂಭೋತ್ಪತ್ತಿಯು ಕೆಲ ಸಂದರ್ಭಗಳಲ್ಲಿ ತನ್ನ ನಿರ್ದಿಷ್ಟ ಸಮಯ ತಪ್ಪಿ ೪೮ ತಾಸು ಮೊದಲು ಅಥವಾ ೪೮ ತಾಸು ತಡವಾಗಿ ಆಗುವ ಸಂಭವವಿದೆ.

ಈ ಎಲ್ಲ ಅಂಶಗಳನ್ನು ಗಣಿಸಿಕೊಂಡರೆ ಮುಂದಿನ ಮುಟ್ಟಿನ ದಿನಕ್ಕಿಂತ ಹಿಂದಿನ ೧೯ ನೇ ದಿನದಿಂದಾರಂಭಿಸಿ ೧೦ ನೇ ದಿನದ ವರೆಗಿನ ೯ ದಿನಗಳ ಅವಧಿಯು "ಅಸುರಕ್ಷಿತ" ಸಮಯ ಅಂದರೆ ಗರ್ಭನಿಲ್ಲಬಹುದಾದ ಸಮಯವೆಂದಾಯಿತು. ಅನುಭವದಿಂದ ಮುಂದಿನ ಮುಟ್ಟಿನ ದಿನಕ್ಕಿಂತ ಹಿಂದಿನ ೧೮-೧೨ ದಿನಗಳ ಒಂದು ವಾರದ ಅವಧಿ ಅಸುರಕ್ಷಿತವೆಂದು " ಟ್ರೆಂಡ್ " ಪತ್ರಿಕೆಯಲ್ಲಿ ಒಬ್ಬ ಡಾಕ್ಟರರು ಹೇಳಿದ್ದಾರೆ.

ಬೇರೆ ರೀತಿಯಲ್ಲಿ ಹೇಳುವುದಾದರೆ ಸಾಮಾನ್ಯವಾಗಿ ೨೮ ದಿನಗಳಿಗೊಮ್ಮೆ ಮುಟ್ಟಾಗುವ ಮಹಿಳೆಯು ಮುಟ್ಟಾದ ೧೦ನೇ ದಿನದಿಂದ ೧೭ನೇ ದಿನದ ವರೆಗೆ ಪುರುಷಸಂಗವನ್ನು ಬಿಡಬೇಕು; ೨೪ ದಿನಗಳಿಗೆ ಮುಟ್ಟಾಗುವವಳು ಮುಟ್ಟಾದ ೬ನೇ ದಿನದಿಂದ ೧೩ನೇ ದಿನದ ವರೆಗೆ ಬ್ರಹ್ಮಚರ್ಯ ಆಚರಿಸಬೇಕು; ೩೦ ದಿನಗಳ ಗಡುವುಳ್ಳವಳು ೧೨ನೇ ದಿನದಿಂದ ೧೯ನೇ ದಿನದ ವರೆಗೆ ವ್ರತಸ್ಥಳಾಗಬೇಕು. ೨೨ ದಿನದ ಗಡುವುಳ್ಳ ಹೆಂಗಸು ಮಾತ್ರ ಹೆಚ್ಚು ಕಷ್ಟಕ್ಕೊಳಗಾಗುವಳು. ಅವಳು ಮುಟ್ಟಾದ ೧೦-೧೨ ದಿನಗಳ ವರೆಗೆ ವ್ರತಸ್ಥಳಾಗಬೇಕಾದೀತು.

ಆದರೆ ಕೆಲ ಹೆಂಗಸರಿಗೆ ತೀರ ಅನಿಯಮಿತವಾಗಿ ಮುಟ್ಟು ಬರುತ್ತದೆ. ಅವರಿಗೆ ಯಾವ ಲೆಕ್ಕವೂ ಹತ್ತುವುದಿಲ್ಲ. ಅಂಥವರಿಗೆ "ಸುರಕ್ಷಿತ" ಅವಧಿಯೇ ಇಲ್ಲವೆಂದಾಗಬಹುದು. ಅವರಿಗೆ ಉಪಯುಕ್ತವಾಗುವ ವಿಧಾನವೂ ಒಂದಿದೆ. ಅದೆಂದರೆ ಥರ್ಮಾಮಿಟರು. ಡಿಂಭಾಣು ಹುಟ್ಟುವ ಮೊದಲು ಮತ್ತು ನಂತರ ಹೆಂಗಸರ ದೇಹದ ಉಷ್ಣತೆಯಲ್ಲಿ ನಿಶ್ಚಿತವಾದ ಬದಲಾವಣೆಗಳಾಗುತ್ತವೆ. ಅವರು ದಿನವೂ ಹಾಸಿಗೆಯಿಂದೇಳುವ ಮೊದಲು ಒಂದೇ ಹೊತ್ತಿಗೆ ತಮ್ಮ ನಾಲಗೆಯ ಕೆಳಗಿನ ಉಷ್ಣತಾಮಾನವನ್ನು ತೆಗೆದುಕೊಂಡು ಬರೆದಿಡಬೇಕು. ಸಾಮಾನ್ಯ ದಿನಗಳಲ್ಲಿ ಉಷ್ಣತಾಮಾನದ ವ್ಯತ್ಯಾಸ ತೀರ ಅಲ್ಪವಾಗಿರುತ್ತದೆ. ಆದರೆ ಡಿಂಭಾಣು ಉತ್ಪತ್ತಿಯಾಗುವ ಹೊತ್ತಿಗೆ ಒಮ್ಮೆಲೇ ಉಷ್ಣತೆ ತಕ್ಕಮಟ್ಟಿಗೆ ಇಳಿದುಬಿಡುವುದು. ಅನಂತರ ಅದು ಮತ್ತೆ ಏರಿ ಮುಂದಿನ ಮುಟ್ಟಿನ ವರೆಗೂ ಒಂದೇ ಸ್ಥಿತಿಯಲ್ಲಿ ಉಳಿಯುವುದು. ಮೂರು ತಿಂಗಳ ಕಾಲ ಹೀಗೆ ಉಷ್ಣತೆಯ ಲೆಕ್ಕವನ್ನಿಟ್ಟರೆ ಸಾಕಷ್ಟು ಖಾತ್ರಿಯಾಗಿ ಡಿಂಭಾಣು ಉತ್ಪತ್ತಿಯ ದಿನಗಳನ್ನು ಗೊತ್ತುಹಚ್ಚಲು ಬರುತ್ತದೆ ಆಗ ಅವರು ಆ ದಿನಕ್ಕೆ ಹಿಂದಿನ **ಮೂರು** ಮತ್ತು ಮುಂದಿನ **ಒಂದು** ದಿನವನ್ನು ವರ್ಜಿಸಿದರೆ ಸಾಲುವುದು ಆದರೆ ಋತುದಿನಗಳು ವಯಸ್ಸಾದಂತೆ ಬದಲಾಗುತ್ತ ಹೋಗುವುದರಿಂದ ಪ್ರತಿ ವರ್ಷವೂ ಅವರು ಹೊಸದಾಗಿ ದೇಹೋಷ್ಣತೆಯ ಲೆಕ್ಕ ತೆಗೆದು ದಿನಗಳನ್ನು ಹೊಸತಾಗಿ ಗೊತ್ತುಪಡಿಸಿಕೊಳ್ಳಬೇಕಾದೀತು. ಅಲ್ಲದೆ ಜ್ವರ, ನೆಗಡಿ ಮೊದಲಾದ

ಕಾಯಿಲೆಯ ಸಮಯಗಳಲ್ಲಿಯೂ ಇದು ಉಪಯೋಗ ಬೀಳುವುದಿಲ್ಲ.

"ಸುರಕ್ಷಿತ" ಅವಧಿ ಪದ್ಧತಿ ನಿಜವಾಗಿ ನಂಬಲರ್ಹವಾದದ್ದೇ? ಕೆಲ ತಜ್ಞರೂ ಮಹಿಳೆಯರೂ ಅದು ವ್ಯರ್ಥ ಪದ್ಧತಿಯೆಂದು ತೆಗಳುತ್ತಿರುವುದು ನಿಜ. ಆದರೆ ಅದು ಶೇಕಡಾ ೮೦ರಷ್ಟು ಯಶಸ್ವಿಯಾಗಿದೆಯೆಂದು ಅನೇಕ ಪ್ರಯೋಗಗಳು ತೋರಿಸಿವೆ. ೧೯೪೦ ರಷ್ಟು ಹಿಂದೆಯೇ ಅಮೇರಿಕದ ಮಸಾಚುಸೆಟ್ಸ್‌ನ ಒಂದು ಕ್ಲಿನಿಕ್ಕಿನಲ್ಲಿ ನಡೆದ ಸಮೀಕ್ಷಣದಿಂದ ಬಸಿರಾಗುವವರ ಸಂಖ್ಯೆಯು ಈ ಪದ್ಧತಿಯಿಂದ೧/೮ಕ್ಕಿಳಿಯಿತೆಂದು ವರದಿಯಾಗಿತ್ತು. ಡಾ. ಲಾಟ್ಜರೆಂಬವರು ೧೧೪ ಹೆಂಗಸರ ಸಮೀಕ್ಷಣೆ ನಡೆಸಿದಾಗ ಅವರು "ಸುರಕ್ಷಿತ" ದಿನಗಳನ್ನಾಶ್ರಯಿಸಿ ಒಟ್ಟು ೪,೭೦೨ ಸಲ ಪುರುಷ ಸಂಪರ್ಕ ಪಡೆದರೂ ಒಂದೂ ಗರ್ಭ ನಿಲ್ಲಲಿಲ್ಲವೆಂದು ಗೊತ್ತಾಯಿತು.

ಅದು ವ್ಯರ್ಥವಾಗುವುದಿದ್ದರೆ ಸಾಮಾನ್ಯವಾಗಿ ಅವರು ಯಾವ ನಿಯಮವೂ ಇಲ್ಲದೆ ಡಿಂಭಾಣುವಿನ ಉತ್ಪತ್ತಿಯಾಗುವ ಕೆಲ ಅಪವಾದಾತ್ಮಕ ಹೆಂಗಸರಾಗಿರುತ್ತಾರೆ; ಇಲ್ಲವೆ ಪತಿಯ ಒತ್ತಾಯದಿಂದಲೋ, ತಮ್ಮ ಮರವೆಯಿಂದಲೋ, ಸಂಯಮಗೇಡಿತನದಿಂದಲೋ ಮೋಸಹೋದವರಿರುತ್ತಾರೆ. ಕೆಲ ವರ್ಷಗಳ ಹಿಂದೆ ಬೆಂಗಳೂರಿನ ಹತ್ತಿರ ರಾಮನಗರ ಕೂಲಿಕಾರ ವಸತಿಯಲ್ಲಿ ಆದದ್ದು ಹೀಗೆಯೇ. ಅಶಿಕ್ಷಿತರಾದ ಅಲ್ಲಿನ ಹೆಂಗಸರಿಗೆ ಎರಡು ಬಣ್ಣದ ಮಣಿಗಳುಳ್ಳ ಸರಗಳನ್ನು ಕೊಟ್ಟು ಅವರ "ಸುರಕ್ಷಿತ" ದಿನಗಳನ್ನು ಒಂದು ಬಣ್ಣದಿಂದಲೂ "ಅಸುರಕ್ಷಿತ" ದಿನಗಳನ್ನು ಇನ್ನೊಂದರಿಂದಲೂ ತೋರಿಸಲಾಯಿತು. ಆದರೆ ಅನೇಕರು ನಿಯಮ ತಪ್ಪಿ ಗಂಡಂದಿರನ್ನು ಕೂಡಿದ್ದರಿಂದ ಬಸಿರಾದರು. ಹೀಗಿದ್ದರೂ ಅಲ್ಲಿ ಜನನಸಂಖ್ಯೆ ಮೊದಲಿನ ಸೇಕಡಾ ೩೩ಕ್ಕಿಳಿಯಿತೆಂದು ವರದಿಯಾಗಿತ್ತು.

ಈಗ ಈ ಪದ್ಧತಿಯ ಕೆಲ ಕೊರತೆಗಳನ್ನೂ ಹೇಳಬೇಕು. ಮೊದಲನೆಯದಾಗಿ ಗಂಡಹೆಂಡಿರಲ್ಲಿ ತಿಂಗಳಲ್ಲಿ ಒಂದು ವಾರದ ಮಟ್ಟಿಗಾದರೂ ಸತತ ಬ್ರಹ್ಮಚರ್ಯ ಪಾಲಿಸುವ ದೃಢ ಬುದ್ಧಿ ಬೇಕು. ಹೊಸದಾಗಿ ಮದುವೆಯಾದವರಿಂದ ಇಂಥ ಸಂಯಮವನ್ನು ನಿರೀಕ್ಷಿಸಲು ಸಾಧ್ಯವಿಲ್ಲ. ಅವರು ಯಾವುದೇ ಬಗೆಯ ಸಂತತಿಪ್ರತಿಬಂಧಕ್ಕೆ ಇಳಿಯುವುದೂ ಹಿತವಲ್ಲ. ಮದುವೆಯಾಗಿ ೧೦ ವರ್ಷದ ನಂತರ ಸಾಮಾನ್ಯವಾಗಿ ಇಚ್ಛೆ ಕಡಿಮೆಯಾಗುತ್ತದೆ. ಆಗ ಅವರಿಗೆ ಈ ವಿಧಾನ ಉಪಯುಕ್ತವಾಗುವುದು. ಆದರೆ ಏನೂ ಸಂಯಮವಿಲ್ಲದಿರುವ ಕೆಲ ಅಪರೂಪ ಸ್ತ್ರೀಪುರುಷರಿಗೆ ಇದು ಪ್ರಯೋಜನಕರವಲ್ಲ.

ಹಡೆದು ಕೆಲ ತಿಂಗಳ ವರೆಗೆ ಮುಟ್ಟು ನಿಲ್ಲುತ್ತದೆ. ಆ ಅವಧಿಯಲ್ಲಿಯೂ ಈ ವಿಧಾನ ವಿಶೇಷ ಪ್ರಯೋಜನಕ್ಕೆ ಬರಲಾರದು.

ಸಂಯಮದ ವಿಚಾರದಲ್ಲಿ ಇನ್ನೊಂದು ಕಷ್ಟವೆಂದರೆ ಡಿಂಭಾಣುವಿನ ಉತ್ಪತ್ತಿಯ ಕಾಲದಲ್ಲೇ ಸ್ತ್ರೀಯರಲ್ಲಿ ಸಂಭೋಗೇಚ್ಛೆ ಪ್ರಬಲವಾಗಿದೆಯೆಂದು ಕೆಲವರ ಅಭಿಪ್ರಾಯ. ಆಗ ಬ್ರಹ್ಮಚರ್ಯಪಾಲನೆ ಮಾಡಹೊರಟರೆ ಅವರಲ್ಲಿ ಮಾನಸಿಕ ಕ್ಲೇಶ ಹುಟ್ಟುವ ಭಯವಿದೆ. ಆದರೆ ಇದು ತೀವ್ರವಾದ ಕಾಮವಾಸನೆಯುಳ್ಳ ಕೆಲವೇ ಜನರಿಗೆ ಅನ್ವಯಿಸತಕ್ಕದ್ದು. ಸಾಮಾನ್ಯವಾಗಿ ಸ್ತ್ರೀಯರು ಪುರುಷರಿಗಿಂತ ಹೆಚ್ಚು ಸಂಯಮಿಗಳಾಗಿರುತ್ತಾರೆಂಬುದು ಅನುಭವದ ಮಾತು. ಕೆಲ ಗಂಡಂದಿರು ಸಂಚಾರದಲ್ಲಿ ಪ್ರತಿತಿಂಗಳೂ ತೊಡಗಿದ್ದು ಕೆಲದಿನಗಳ ಮಟ್ಟಿಗೆ ಮಾತ್ರ ಮನೆಗೆ ಬರುತ್ತಿರುತ್ತಾರೆ. ಅಂಥವರು ಮನೆಗೆ ಬರುವ ಹೊತ್ತಿಗೆ "ಅಸುರಕ್ಷಿತ" ದಿನಗಳು ಬಂದರೆ ಈ ಪದ್ಧತಿ ವ್ಯವಹಾರ್ಯವಾಗಲಾರದು. ಇಂಥ ಪ್ರಸಂಗಗಳಲ್ಲಿಯೂ ಇತರ ಅಪವಾದಾತ್ಮಕ ಪ್ರಸಂಗಗಳಲ್ಲಿಯೂ ಬೇರೆ ಉಪಾಯಗಳಿಗೆ ಶರಣು ಹೋಗಲೇಬೇಕಾಗುತ್ತದೆ.



# ರಾಷ್ಟ್ರಪತಿ ರಾಜೇಂದ್ರ ಪ್ರಸಾದರ ಆತ್ಮಕಥೆ

"ಸತ್ಸಾಹಿತ್ಯ ಪ್ರಕಾಶನ" ದವರು ಪ್ರಕಟಿಸಿದ
ಹಿಂದೀ "ಆತ್ಮಕಥೆ" ಯ ಸಂಗ್ರಹ

ಕನ್ನಡ ಸಂಗ್ರಹಕಾರರು: ವಿ. ಎಂ. ಇನಾಂದಾರ್

# ರಾಜೇಂದ್ರ ಪ್ರಸಾದ: ಆತ್ಮಕಥೆ

ಉತ್ತರ ಪ್ರದೇಶದ ಅಮೋಡಾ ಎಂಬ ಹಳ್ಳಿಯ ಒಂದು ಕಾಯಸ್ಥ ಮನೆತನದ ಕೆಲವರು ಬಲಿಯಾ ಎಂಬಲ್ಲಿ ಬಂದು ನೆಲಸಿದರು. ಅಲ್ಲಿಂದ ಕೆಲವರು ಗಯಾದಲ್ಲಿ, ಇನ್ನೂ ಕೆಲವರು ಬಿಹಾರದಲ್ಲಿ ಈಗಿನ ಸಾರನ ಜಿಲ್ಲೆಯಲ್ಲಿ ಜೀರಾದೇಯಿ ಎಂಬಲ್ಲಿ ನೆಲಸಿದರು. ನನಗಿಂತ ಏಳೆಂಟು ತಲೆಮಾರು ಹಿಂದೆ ಜೀರಾದೇಯಿಯಲ್ಲಿ ಬಂದು ನೆಲ-ಸಿದವರೇ ನನ್ನ ಪೂರ್ವಜರು.

ಹಾಗೆ ಬಂದು ನೆಲಸಿದವರಲ್ಲಿ ಒಬ್ಬರು ಹತ್ತಿರದಲ್ಲಿಯೆ ಇದ್ದ ಹಥುವಾ-ರಾಜ ಎಂಬ ದೊಡ್ಡ ಜಮೀನದಾರರಲ್ಲಿ ಕೆಲಸ ಹಿಡಿದರು. ಆ ಮನೆತನದ ಸಂಬಂಧ ಬಹು ಕಾಲ ಬೆಳೆದು ನಿಂತಿತು. ನನ್ನ ಅಜ್ಜ ಮಿಶ್ರಿಲಾಲನಿಗೆ ಇಬ್ಬರು ಮಕ್ಕಳು; ಚೌಧುರಲಾಲ ಮತ್ತು ಮಹಾದೇವ ಸಹಾಯ. ಮಹಾದೇವ ಸಹಾಯ ನನ್ನ ತಂದೆ. ನಮ್ಮ ಅಜ್ಜ ನಡುವಯಸ್ಸಿನಲ್ಲಿ ಮೃತನಾದ್ದರಿಂದ ಮನೆತನದ ಹಿರಿತನ ಕಕ್ಕನಾದ ಚೌಧುರಲಾಲನಿಗೆಯೆ ಬಂದಿತು. ನನ್ನ ತಂದೆ ಕಕ್ಕನಿಗಿಂತ ವಯಸ್ಸಿನಿಂದ ತೀರ ಕಿರಿಯನಾದ್ದರಿಂದ ಕಕ್ಕನ ಮಗನಾದ ಜಗದೇವ ಸಹಾಯನ ಜೊತೆಯಲ್ಲಿಯೆ ಬೆಳೆಯುವಂತಾಯಿತು.

ಕಕ್ಕ ಚೌಧುರಲಾಲ ತನ್ನ ನಿಷ್ಠೆಯಿಂದಾಗಿ ಹಥುವಾ ಎಸ್ಟೇಟಿನಲ್ಲಿ ದೊಡ್ಡ ಪದವಿಗೇರಿ ಅದರ ದಿವಾಣನಾದ. ಆಗಿನ ಕಾಲದಲ್ಲಿ ಸಂಬಳ ದೊಡ್ಡದಾಗಿರದಿದ್ದರೂ ಜೀವನಾನುಕೂಲಗಳು ಬೇಕಾದಷ್ಟಿದ್ದವು. ಹೀಗಾಗಿ ಚೌಧುರಲಾಲನ ಹಿರಿತನದಲ್ಲಿ ಮನೆತನದ ಆರ್ಥಿಕ ಸ್ಥಿತಿ ಕೆಲಮಟ್ಟಿಗೆ ಸುಧಾರಿಸಿತು. ಹಥುವಾ ಎಸ್ಟೇಟಿನ ಅಂತಃಕಲಹಗಳ ಮೂಲಕ ಅದರ ಕಿರಿವಯಸ್ಸಿನ ಒಡೆಯನಾದ ರಾಜೇಂದ್ರಪ್ರತಾಪ ಸಾಹಿಯನ್ನು ನನ್ನ ಕಕ್ಕ ಚೆನ್ನಾಗಿ ನೋಡಿಕೊಳ್ಳುತ್ತಿದ್ದ. ಆತನ ಜೀವಕ್ಕೆ ಅಪಾಯ ಸಂಭವಿಸಬಹುದಾಗಿದ್ದ ದಿನಗಳಲ್ಲಿ ಆತನ ಹತ್ತಿರವೆ ಸದಾಕಾಲವೂ ಇದ್ದು ಆತನನ್ನು ನೋಡಿಕೊಳ್ಳುತ್ತಿದ್ದ. ಇದಕ್ಕೆ ಸರಿಯಾಗಿ ರೈತರನ್ನು ಚೆನ್ನಾಗಿ ನಡಸಿಕೊಂಡು ಜನಪ್ರಿಯನಾಗಿದ್ದ. ಮನೆಯಲ್ಲಿ ಜಗದೇವ ಮತ್ತು ನನ್ನ ತಂದೆ ಮಹಾದೇವ ಸಹಾಯನ ವಿದ್ಯಾಭ್ಯಾಸದ ಏರ್ಪಾಡುಗಳನ್ನು ಮಾಡಿದ್ದ. ಅವರಿಬ್ಬರನ್ನು ಛಪರಾದಲ್ಲಿಯ ಇಂಗ್ಲೀಷ ಶಾಲೆಗೆ ಕಳಿಸಬೇಕೆಂದುಕೊಂಡಿದ್ದರೂ ರಾಜನಿಂದ ಉತ್ತೇಜನ ದೊರಕದ್ದರಿಂದ ಊರಲ್ಲಿಯ ಮೌಲವಿ ಹೇಳಿಕೊಟ್ಟ ಪರ್ಶಿಯನ್‌ದ ಮಟ್ಟಕ್ಕೆ ಅವರ ವಿದ್ಯಾಭ್ಯಾಸ ನಿಲ್ಲಬೇಕಾಯಿತು. ರಾಜೇಂದ್ರಪ್ರತಾಪನ ನಿಧನದ ನಂತರ ಎಸ್ಟೇಟಿನ ಆಡಳಿತ ಕೋರ್ಟಿನವರ ಕೈಸೇರಿತು. ಚೌಧುರಲಾಲನಿಗೆ ಇಂಗ್ಲೀಷ ತಿಳಿಯದ್ದರಿಂದ ಆ ಕೆಲಸವನ್ನುಬಿಟ್ಟು ಜೀರಾದೇಯಿಗೆ ಆತ ಹಿಂದಿರುಗಬೇಕಾಯಿತು.

ಈ ಜೀರಾದೇಯಿ ಗ್ರಾಮದಲ್ಲಿಯೆ ೧೮೮೪ರ ಡಿಸೆಂಬರ ೩ (ಪೌಷ್ಯ ಕೃಷ್ಣ ಪ್ರತಿಪದೆ ವಿ. ಸ. ೧೯೪೧) ರಂದು ನನ್ನ ಜನ್ಮವಾಯಿತು. ನಮ್ಮ ತಂದೆಗೆ ಮೂವರು ಹೆಣ್ಣುಮಕ್ಕಳು, ಇಬ್ಬರು ಗಂಡುಮಕ್ಕಳು. ಈ ಐವರಲ್ಲಿ ಕಿರಿಯನಾಗಿ ಹುಟ್ಟಿದ್ದವ ನಾನು. ಎಲ್ಲಕ್ಕೂ ಹಿರಿಯಳಾದ ಅಕ್ಕ ಭಗವತೀದೇವಿ ಎಳೆ ವಯಸ್ಸಿನಲ್ಲಿಯೆ ಗಂಡನನ್ನು ಕಳೆದುಕೊಂಡಳು; ಇಂದಿಗೂ ನನ್ನ ಹತ್ತಿರವೇ ಇರುತ್ತಾಳೆ. ಇನ್ನೊಬ್ಬ ಅಕ್ಕ ಚಿಕ್ಕ ವಯಸ್ಸಿನಲ್ಲಿಯೇ ತೀರಿಹೋದಳು. ಮೂರನೆಯ ಅಕ್ಕ ಮಕ್ಕಳಾಗದೆ ತೀರಿಹೋದಳು. ನನ್ನ

ಅಣ್ಣ ಮಹೇಂದ್ರ ಪ್ರಸಾದ ನಾಲ್ಕನೆಯವ, ನನಗಿಂತ ಎಂಟು ವರ್ಷ ಹಿರಿಯ.

## ಬಾಲ್ಯದ ನೆನಹುಗಳು

ಹಿರಿಯ ಅಕ್ಕ ಭಗವತೀದೇವಿಗೆ ಐಶ್ವರ್ಯವಂತ ಮನೆತನದಲ್ಲಿ ಮದುವೆಯಾಗಿತ್ತು. ಪ್ರತಿ ವರ್ಷ ಅರುವತ್ತು ಎಪ್ಪತ್ತು ಸಾವಿರ ಆದಾಯವಿದ್ದ ಆ ಮನೆತನ ಯಾವುದೋ ಕಾರಣದಿಂದಾಗಿ ಬಡತನಕ್ಕಿಳಿಯಿತು. ನನ್ನ ಅಕ್ಕ ತನ್ನ ಗಂಡನೊಡನೆ ನಮ್ಮಲ್ಲಿಯೆ ಬಂದಿರುವಂತಾಯಿತು. ನನ್ನ ಅಕ್ಕನ ಗಂಡ ಜೀರಾದೇಯಿಯಲ್ಲಿಯ ನಮ್ಮ ಮನೆಯಲ್ಲಿಯೆ ಮೃತನಾದ. ನಾನು ಆಗ ತೀರ ಚಿಕ್ಕವ. ಆದರೆ ಅಂದಿನ ಆ ದುಃಖದ ಮೊರೆತ ಇಂದಿಗೂ ನನ್ನ ಕಿವಿಯಲ್ಲಿದೆ. ಸಾವನ್ನು ಮೊತ್ತಮೊದಲು ನಾನು ಕಣ್ಣಾರೆ ನೋಡಿದ್ದು ಆಗಲೇ.

ನನ್ನ ಅಣ್ಣ ಛಪರಾದಲ್ಲಿ ಇಂಗ್ಲೀಷ್ ಶಾಲೆಗೆ ಹೋಗುತ್ತಿದ್ದ. ಮನೆತನದ ಕಾರಭಾರಗಳನ್ನು ಕಕ್ಕ ನೋಡಿಕೊಳ್ಳುತ್ತಿದ್ದ. ನಮ್ಮ ತಂದೆಗೆ ತೋಟಗಾರಿಕೆಯಲ್ಲಿ ತುಂಬ ಆಸಕ್ತಿ ಇದ್ದಿತು. ಆತ ನೆಟ್ಟ ಮಾವಿನ ಗಿಡಗಳ ಹಣ್ಣುಗಳನ್ನು ನಾವು ಇಂದು ತಿನ್ನುತ್ತಿದ್ದ ಹಾಗೆ ಮನಸ್ಸು ಆ ಕಾಲದ ಸ್ಮೃತಿಗಳನ್ನು ಮೆಲುಕು ಹಾಕುವಂತಾಗುತ್ತದೆ. ನನ್ನ ತಂದೆಗೆ ಪರ್ಶಿಯನ್ ಮತ್ತು ಸಂಸ್ಕೃತ ತಿಳಿಯುತ್ತಿತ್ತು. ವೈದ್ಯಕಕ್ಕೆ ಸಂಬಂಧಪಟ್ಟ ಹಾಗೆ ಅನೇಕ ಗ್ರಂಥಗಳನ್ನು ಕಲೆಹಾಕಿ, ಆ ವಿಷಯವನ್ನು ಚೆನ್ನಾಗಿ ಓಟಕೊಂಡು ಬಡಬಗ್ಗರಿಗೆ ಪುಕ್ಕಟೆಯಾಗಿ ಔಷಧಿ ಕೊಡುತ್ತಿದ್ದರು. ನಾಡಿಯನ್ನು ಮುಟ್ಟಿ ನೋಡದೆ ರೋಗಿಗಳು ಹೇಳಿದ್ದನ್ನು ಕೇಳಿಕೊಂಡು ಔಷಧಿ ಕೊಡುತ್ತಿದ್ದರು. ಬಹು ಜನರಿಗೆ ಗುಣವಾಗುತ್ತಿತ್ತು. ಒಳ್ಳೆಯ ವೈದ್ಯರೆಂಬ ಹೆಸರು ಅವರಿಗೆ ಬಂದಿತ್ತು.

ನಮ್ಮ ತಂದೆಯದು ಬಲಶಾಲಿಯಾದ ದೇಹ. ವ್ಯಾಯಾಮದಲ್ಲಿ ತುಂಬ ಆಸಕ್ತಿ. ನಾವು ಶಾಲೆ ಕಾಲೇಜುಗಳಿಂದ ರಜೆಯಲ್ಲಿ ಬಂದಾಗ ಲೋಡು ಮುಂತಾದವುಗಳನ್ನು ತಿರುವುವುದನ್ನು ಹೇಳಿಕೊಡುತ್ತಿದ್ದರು. ಕಬಡ್ಡಿ, ಚಿಕ್ಕಾ ಮುಂತಾದ ಆಟಗಳನ್ನು ಆಡುತ್ತಿದ್ದೆವು. ನನ್ನ ಅಣ್ಣನ ಹಾಗೆ ಗಿಡಗಳನ್ನೇರುವ ಆಟ ನನಗೆ ಬರಲಿಲ್ಲ. ಜೀರಾದೇಯಿ ಹತ್ತಿರದಲ್ಲಿ ಯಾವ ನದಿಯಾಗಲಿ ಪ್ರವಾಹವಾಗಲಿ ಇರದ್ದರಿಂದ ನನಗೆ ಈಜು ಕಲಿಯಲಾಗಲಿಲ್ಲ.

ಚಿಕ್ಕವನಾಗಿದ್ದಾಗಿನಿಂದಲೂ ಕತ್ತಲಾದ ಕೂಡಲೆ ಬೇಗ ಮಲಗಿ ಬೆಳಗಿನಲ್ಲಿ ಬೇಗ ಏಳುವ ಅಭ್ಯಾಸ ನನ್ನದಾಗಿದೆ. ಚಿಕ್ಕವನಿದ್ದಾಗ ಬೆಳಗಿನ ವೇಳೆಯಲ್ಲಿ ತಾಯಿಯನ್ನು ಎಬ್ಬಿಸುತ್ತಿದ್ದೆ. ಆಕೆ ರಾಮಾಯಣದಿಂದ ಶ್ಲೋಕಗಳನ್ನೂ ಬೇರೆ ಭಜನೆಗಳನ್ನು ಹೇಳುತ್ತಿದ್ದಳು. ಬೇಗ ಮಲಗುವ ಅಭ್ಯಾಸ ಬಹು ಕಾಲ ನನ್ನನ್ನು ಬಿಡಲಿಲ್ಲ. ನಾನು ಎಂ. ಎ. ಮುಗಿಸಿ ಎಂ. ಎಲ್ ಪರೀಕ್ಷೆಗೆ ಓದುತ್ತಿದ್ದಾಗ ಒಂದು ಮೋಜು ನಡೆಯಿತು. ಹೈಕೋರ್ಟಿನಲ್ಲಿ ವಕೀಲಿ ಮಾಡುತ್ತಿದ್ದೆ. ಲಾ ಕಾಲೇಜಿನಲ್ಲಿಯ ಕೆಲಸವನ್ನು ನೋಡಿಕೊಳ್ಳುತ್ತಿದ್ದೆನಾದ್ದರಿಂದ ಹಗಲು ಓದಲು ಸಮಯ ಸಿಕ್ಕುತ್ತಿರಲಿಲ್ಲ. ಎಂ. ಎಲ್. ಪರೀಕ್ಷೆ ಸಮೀಪಿಸುತ್ತಿತ್ತು. ರಾತ್ರಿ ಓದಬೇಕಾಗುತ್ತಿತ್ತು. ಕುಳಿತು ಓದಿದರೆ ನಿದ್ರೆ. ಹಾಗೆಂದು ಅತ್ತಿತ್ತ ಅಲೆದಾಡುತ್ತ ಓದುವಾಗ ಒಮ್ಮೆ ನಿದ್ರೆಯಿಂದಾಗಿ ನೆಲಕ್ಕೆ ಬಿದ್ದೆ. ತಲೆಒಡೆಯಬಹುದಾಗಿತ್ತು. ಅಂದಿನಿಂದ ವೇಳೆ ಸಿಕ್ಕಾಗ ಮಾತ್ರ ಓದುವುದು ಎಂದು ಆ ಹವ್ಯಾಸವನ್ನು ಬಿಲಿಟ್ಟುಕೊಟ್ಟೆ.

ನನ್ನ ವಿದ್ಯಾಭ್ಯಾಸ ಐದನೆಯ ವರ್ಷಕ್ಕೆ ಪ್ರಾರಂಭವಾಯಿತು. ಆಗಿನ ಪದ್ಧತಿಗನುಸಾರವಾಗಿ ಮೌಲವಿ ಅಕ್ಷರ ಹೇಳಿ ಕೊಡುತ್ತಿದ್ದ. ನನ್ನ ಜೊತೆಯಲ್ಲಿ ನನ್ನ ಕಕ್ಕನ ಮಗನಾದ ಜಮುನಾಪ್ರಸಾದನಿಗೂ ವಿದ್ಯಾಭ್ಯಾಸ ಆರಂಭವಾಯಿತು. ನನ್ನ ಕಕ್ಕನು ಚೇಷ್ಟೆಯ ಸ್ವಭಾವದವ. ಆತನ ಚೇಷ್ಟೆಗೆ ನಾವೂ ಪರ್ಶಿಯನ್

ಪಾಠ ಹೇಳಿ ಕೊಡುತ್ತಿದ್ದ ಮೌಲವಿಯೂ ಗುರಿಯಾಗಬೇಕಾಗುತ್ತಿತ್ತು. ತಾನು ಬೇಕಾದುದನ್ನು ಮಾಡಬಲ್ಲೆ ಎಂಬ ಹುಚ್ಚು ಹೆಮ್ಮೆ ಮೌಲವಿಯದಾಗಿತ್ತು. ನನ್ನ ಕಕ್ಕನನ್ನು ಚದುರಂಗದಾಟದಲ್ಲಿ ಸೋಲಿಸಬಲ್ಲೆ ಎನ್ನುತ್ತಿದ್ದ ಆತ ಒಮ್ಮೆಯೂ ಗೆಲ್ಲಲಿಲ್ಲ. ಒಂದು ದಿನ ಎಲ್ಲರೂ ತಿರುಗಾಡಹೋದಾಗ ದಾರಿಯಲ್ಲಿ ನಿಂತಿದ್ದ ಒಂದು ಇರುಕಳ ಹೋರಿಯ ಹತ್ತಿರ ಹೋಗಬೇಡವೆಂದು ಮೌಲವಿಗೆ ಹೇಳಿದರೂ ಅದೇನು ಮಾಡೀತು ಎಂದು ಹೆಮ್ಮೆಯಿಂದ ಅದನ್ನು ರೇಗಿಸಹೋದ. ಮರುಕ್ಷಣ ಹೋರಿ ಮೌಲವಿ ಸಾಹೇಬರನ್ನು ಎತ್ತಿ ದೂರದಲ್ಲಿ ಎಸೆಯಿತು. ಇನ್ನೊಂದು ಸಲ ನನ್ನ ಕಕ್ಕನ ಹಾಗೆ ತಾನಾದರೂ ಗುರಿಯಿಟ್ಟು ಬಂದೂಕು ಹಾರಿಸಬಲ್ಲೆ ಎಂಬ ಅವನ ಹೆಮ್ಮೆ ಬಯಲಾಯಿತು. ಹಾರಿಸಹೋದ ಬಂದೂಕಿನ ಒದೆತಕ್ಕೆ ಮೌಲವಿಯವರು ನೆಲಕ್ಕೆ ಬೀಳಬೇಕಾಯಿತು. ಆರು ತಿಂಗಳಲ್ಲಿ ನಮಗೆ ಅಕ್ಷರಜ್ಞಾನವಾಗಿ "ಕರೀಮಾ" ಓದುವಂತಾದಾಗ ಮೊದಲಿನ ಮೌಲವಿಯವರು ಹೊರಟು ಹೋಗಿ ಇನ್ನೊಬ್ಬರು ಬಂದರು. ಈ ಇನ್ನೊಬ್ಬರು ಹಗಲುದ್ದಕ್ಕೂ ನಮ್ಮನ್ನು ಓದುಬರಹದಲ್ಲಿ ತೊಡಗಿಸುತ್ತಿದ್ದರು. ಒಂದೊಂದು ಸಲ ಕತ್ತಲಾದ ಮೇಲೂ ಬಿಡುತ್ತಿರಲಿಲ್ಲ. ಕತ್ತಲಾದ ಮೇಲೆ ಪಾಠ ತಪ್ಪಿಸಲೆಂದು ನನ್ನ ಕಕ್ಕನ ಮಗ ಜಮುನಾ ಪ್ರಸಾದ ಒಂದೊಂದು ಸಲ ದೀಪದ ಚಿಮಣಿಯಲ್ಲಿ ಮಣ್ಣು ತುಂಬಿ ದೀಪ ಉರಿಯದಂತೆ ಮಾಡಿಟ್ಟಿರುತ್ತಿದ್ದ. ಮೌಲವಿಯವರು ಕೆಲಸದವಳ ಮೇಲೆ ರೇಗಿ ನಮ್ಮನ್ನು ಬಿಟ್ಟುಬಿಡುತ್ತಿದ್ದರು.

ಆ ಕಾಲದ ಹಳ್ಳಿಯ ಜೀವನ ಸರಲವಾಗಿರುತ್ತಿತ್ತು. ಹಳ್ಳಿಗೆ ಬೇಕಾಗುವ ಎಲ್ಲ ಸಾಮಾನು ಹಳ್ಳಿಯಲ್ಲಿಯೆ ಸಿಕ್ಕುತ್ತಿತ್ತು. ಅಥವಾ ಅಲ್ಲಿ ಸಿಕ್ಕಿದಷ್ಟರಲ್ಲಿಯೇ ಹಳ್ಳಿಯ ಜೀವನ ನಡೆಯುತ್ತಿತ್ತು. ತಂಬಾಕು, ಎಲೆ, ಅಡಿಕೆ, ಚಹ ಮುಂತಾದವು ಸಿಕ್ಕುತ್ತಿರಲಿಲ್ಲ. ವಾರಕ್ಕೊಂದೊ ಎರಡೊ ಸಲ ಸಂತೆ ನೆರೆಯುತ್ತಿತ್ತು. ಸುತ್ತಲಿನ ಹಳ್ಳಿಗಳಿಂದ ಜನ ಪೇಟೆಗೆ ಬರುತ್ತಿತ್ತು. ಬೇರೆ ಬೇರೆ ಜಾತಿಮತಗಳ ಜನರು ಒಟ್ಟಾಗಿ ಭೇದಭಾವಗಳಿಲ್ಲದೆ ಬದುಕುತ್ತಿದ್ದರು. ಹೊರಗಿನಿಂದ ಜನ ಬರುವುದೇ ಅಪರೂಪ. ಆಗೀಗ ಮೌಲವಿ ಸಾಹೇಬರ ಮನೆಗೆ ಪುಸ್ತಕಗಳ ಗಂಟೊಂದನ್ನು ಹೊತ್ತುಕೊಂಡು ಒಬ್ಬ ವ್ಯಾಪಾರಿ ಬರುತ್ತಿದ್ದ. ಚಳಿಗಾಲದಲ್ಲಿ ಹಣ್ಣು ಮಾರಾಟಕ್ಕೆಂದು ಇನ್ನೊಬ್ಬ ಬರುತ್ತಿದ. ಈತ ಬಂದಾಗ ನಮ್ಮ ಉತ್ಸಾಹ ಹೇಳತೀರದು. ಆ ಸಮಾಚಾರವನ್ನು ತಾಯಿಗೆ ಹೇಳಲೆಂದು ಓಡುತ್ತಿದ್ದಾಗ ಒಮ್ಮೆ ಬಿದ್ದು ನನಗಾದ ಗಾಯದ ಗುರುತು ಇಂದಿಗೂ ಬಲಗಣ್ಣ ಕೆಳಗಡೆಯಲ್ಲಿ ಉಳಿದಿದೆ. ಕಥೆ ಪುರಾಣ, ರಾಮಲೀಲಾ ಬಯಲಾಟಗಳ ಹೊರತು ಬೇರೆ ಮನರಂಜನೆಗಳಿರಲಿಲ್ಲ. ದಸರೆ, ದೀಪಾವಳಿ, ಹೋಳಿ, ಮೊಹರಂ ಹಬ್ಬಗಳನ್ನು ವಿಜೃಂಭಣೆಯಿಂದ ಆಚರಿಸಲಾಗುತ್ತಿತ್ತು. ಹಿಂದುಗಳು ಮುಸ್ಲಿಮರು ಎಲ್ಲರೂ ಎಲ್ಲ ಹಬ್ಬಗಳಲ್ಲಿ ಭಾಗವಹಿಸುತ್ತಿದ್ದರು. ಹಿಂದುಗಳ ಹಬ್ಬದ ದಿನಗಳಲ್ಲಿ ಹಾಡಲೆಂದು ಮೌಲವಿಗಳು ಹಾಡುಗಳನ್ನು ಕಟ್ಟುತ್ತಿದ್ದರು. ಮೊಹರಂನಲ್ಲಿ ಹಿಂದುಗಳು ಕೂಡ ತಮ್ಮ "ತಾಜಿಯಾ"ಗಳನ್ನು ಇಟ್ಟು ಮೆರವಣಿಗೆ ತೆಗೆಯುತ್ತಿದ್ದರು.

ಇಂಗ್ಲೀಷ ವಿದ್ಯಾಭ್ಯಾಸಕ್ಕಾಗಿ ನನ್ನನ್ನು ಛಪರಾ ಶಾಲೆಗೆ ಸೇರಿಸುವುದು ಗೊತ್ತಾದಾಗ ಕಕ್ಕ ನನ್ನನ್ನು ಮೊದಲಿಗೆ ಶಾಲೆ ಊರು ತೋರಿಸಬೇಕೆಂದು ಕರೆದೊಯ್ದರು. ಅದೇ ನನ್ನ ಮೊದಲ ರೈಲು ಪ್ರಯಾಣ. ಆದರೆ ನಾನು ಇಂಗ್ಲಿಷ್ ಶಾಲೆ ಸೇರಲು ಕೆಲವು ದಿನ ಹಿಡಿಯಿತು. ಇದಕ್ಕೆ ಕಾರಣವೆಂದರೆ ಮಧ್ಯಾಂತರದಲ್ಲಿ ನನ್ನ ಕಕ್ಕ ಕಾಲರಾ ಬೇನೆಗೆ ಬಲಿಯಾದರು. ಕೊನೆಗೆ ನಾನು ಬಂದು ಸೇರಿದಾಗ ನನ್ನ ಅಣ್ಣ ಅಲ್ಲಿಯೇ ಓದುತ್ತಿದ್ದ. ನಮಗಾಗಿ ಒಂದು ಬೇರೆ ಮನೆ, ಅಡಿಗೆ

ಯಾವನ ವ್ಯವಸ್ಥೆಯನ್ನು ಮಾಡಲಾಗಿತ್ತು. ನನ್ನ ಮೊದಲ ಪರೀಕ್ಷೆ ತೇರ್ಗಡೆಯಾದಾಗ ಶಾಲೆಯ ಮುಖ್ಯಾಧ್ಯಾಪಕರು ನನ್ನನ್ನು ಕರೆಯಿಸಿ ನನಗೆ ಡಬಲ್ ಪ್ರಮೋಶನ್ ಕೊಡಮಾಡಿದರು. ಮುಂದಿನ ಎಲ್ಲ ಪರೀಕ್ಷೆಗಳಲ್ಲಿಯೂ ನನ್ನ ಪ್ರಗತಿ ಸಮಾಧಾನಕಾರಕವಾಗಿತ್ತು. ಆಟಪಾಟಗಳಲ್ಲಿ—ಮುಖ್ಯವಾಗಿ ಫುಟ್‌ಬಾಲ್ ಆಟದಲ್ಲಿ—ನಾನು ಭಾಗವಹಿಸುತ್ತಿದ್ದೆ. ಒಂದು ವರ್ಷವಾಗುವಷ್ಟರಲ್ಲಿ ಅಣ್ಣ ಮೆಟ್ರಿಕ್ ಪರೀಕ್ಷೆ ಮುಗಿಯಿಸಿ ಕಾಲೇಜು ಸೇರಿದನಾದ್ದರಿಂದ ಛಪರಾದಲ್ಲಿ ನಾನೊಬ್ಬನೇ ಇರಬೇಕಾಯಿತು.

## ಮದುವೆ

ಒಂದು ಶಾಲೆಯ ಪರೀಕ್ಷೆ ಮುಗಿಸಿಕೊಂಡು ರಜೆಗೆಂದು ಹಳ್ಳಿಗೆ ಬಂದಾಗ ಆರಾ ಮತ್ತು ಬಲಿಯಾದಿಂದ ಇಬ್ಬರು ಗೃಹಸ್ಥರು ಬಂದು ನನ್ನನ್ನು ನೋಡಿದರು. ಕೆಲವು ಪ್ರಶ್ನೆಗಳನ್ನು ಕೇಳಿ ನಾನು ಅಳಿಯನಾಗಬಹುದು ಎಂದು ನಿರ್ಣಯಿಸಿದರು. ಆಗ ನನಗೆ ಹದಿಮೂರು ವರ್ಷ. ಮುಂದೆ ಕೆಲವು ದಿನಗಳಲ್ಲಿ "ನಿಶ್ಚಯ" ವಾಯಿತು. ಬಟ್ಟೆಬರೆ, ಪಾತ್ರೆ, ಇತ್ಯಾದಿಗಳ ಜೊತೆಗೆ ಎರಡು ಸಾವಿರ ರೂಪಾಯಿಯ ವರದಕ್ಷಿಣೆ ಕೊಡಲಾಯಿತು. ನನ್ನ ಮಾವನ ಮನೆಯವರು ಸಿರಿವಂತರಾದ್ದರಿಂದ ಮದುವೆ ವೈಭವದಿಂದ ನಡೆಯಬೇಕಾಗಿತ್ತು. ಆಗ ಮನೆತನದ ಸ್ಥಿತಿ ಹೇಳಿಕೊಳ್ಳುವಂಥದಿರಲಿಲ್ಲ. ಆದರೂ ಎಲ್ಲ ವ್ಯವಸ್ಥೆಗಳನ್ನು ಮಾಡಿಕೊಂಡು ನಲವತ್ತು ಮೈಲು ದೂರದಲ್ಲಿಯ ದಲನ್-ಛಪರಾ ಎಂಬಲ್ಲಿಗೆ ನಿಬ್ಬಣ ಹೊರಟಿತು.

ಆಗಿನ ಪದ್ಧತಿಯ ಪ್ರಕಾರ ಮದುವೆ ನಿಬ್ಬಣದ ವೈಭವ ಜೊತೆಯಲ್ಲಿದ್ದ ಆನೆ ಕುದುರೆಗಳ ಸಂಖ್ಯೆಯನ್ನವಲಂಬಿಸಿರುತ್ತಿತ್ತು. ಆದರೆ ಅದೇ ಮುಹೂರ್ತಕ್ಕೆ ಅನೇಕ ಮದುವೆಗಳಿದ್ದುದರಿಂದ ನಮಗೆ ಒಂದೇ ಆನೆ ಸಿಕ್ಕಿತ್ತು. ಪಲ್ಲಕ್ಕಿಗಳ ಮೂಲಕ ಪ್ರವಾಸ ನಲುವತ್ತು ಮೈಲಿಗೆ ಎರಡು ದಿನ. ಅಳಿಯನ ಪಲ್ಲಕ್ಕಿ ಬೆಳ್ಳಿಯದು. ಅದನ್ನು ಹೊತ್ತು ಒಯ್ಯುವವರ ಗತಿ ಏನೆಂಬುದನ್ನು ನೆನೆಯಬಹುದು. ಒಂದೆಡೆಯಲ್ಲಿ ಸರಯೂ ನದಿಯನ್ನು ದಾಟಬೇಕು. ಮಾವುತ ಎಷ್ಟೇ ಪ್ರಯತ್ನ ಮಾಡಿದರೂ ಆನೆ ನದಿಯನ್ನು ದಾಟಲಿಲ್ಲ ಇದ್ದ ಒಂದು ಆನೆಯೂ ಹಿಂದಿರುಗಬೇಕಾದಾಗ ಹಿರಿಯರಿಗೆ ತುಂಬ ನಿರಾಶೆಯೆನಿಸಿತ್ತು. ಆದರೆ ಆಚೆದಡ ತಲುಪಿದಾಗ ಮದುವೆಯೊಂದನ್ನು ಮುಗಿಯಿಸಿಕೊಂಡು ಕೆಲವು ಆನೆಗಳು ಹಿಂದಿರುಗುತ್ತಿದ್ದವು. ತಂದೆಯವರು ಆ ಆನೆಗಳನ್ನು ತಟ್ಟನೆ ಗೊತ್ತುಮಾಡಿಕೊಂಡರು. ನಿಬ್ಬಣ ಬೀಗರ ಮನೆ ತಲುಪಿದಾಗ ನಡುರಾತ್ರಿಯಾಗಿ ಹೋಗಿತ್ತು. ನಮ್ಮ ನಿಬ್ಬಣದ ವೈಭವ ಅವರ ಮನಸ್ಸನ್ನು ಹಿಡಿಯಲಿಲ್ಲವೆಂದು ಕಾಣುತ್ತದೆ. ಆದರೆ ನಾವು ತಂದ ಆಭರಣಾದಿಗಳನ್ನು ನೋಡಿದಾಗ ಸಮಾಧಾನವಾಗಿರಬೇಕು.

ಪಲ್ಲಕ್ಕಿಯಲ್ಲಿಯೆ ನಿದ್ರೆಹೋಗಿದ್ದ ನನ್ನನ್ನು ಅದೇ ರಾತ್ರಿ ನಡೆಯಬೇಕಿದ್ದ ಮದುವೆಗಾಗಿ ಎಚ್ಚರಿಸುವುದೇ ಕಷ್ಟವಾಗಿರಬೇಕು. ಹಾಗೂ ಹೀಗೂ ಕಣ್ಣು ತೆರೆದುಕೊಂಡೋ, ತೂಕಡಿಸು

ತ್ತಲೋ ಇದ್ದೆ. ಏನೇನು ನಡೆಯಿತು ನನಗೆ ಪೂರ್ತಿ ಜ್ಞಾಪಕವಿಲ್ಲ. ಮದುವೆ ಆಯಿತು—ನಾನು ಮಗುವಾಗಿದ್ದಾಗ ನನ್ನ ಅಕ್ಕಂದಿರ ಜೊತೆಯಲ್ಲಿ ಆಡುತ್ತಿದ್ದ ಗೊಂಬೆಯಾಟದಲ್ಲಿಯ ಮದುವೆಗಳ ಹಾಗೆಯೆ. ಮದುವೆ ಎಂದರೆ ಏನು ಎಂಬುದಾಗಲಿ ಅದರ ಹೊಣೆಗಾರಿಕೆಗಳೇನೆಂಬುದಾಗಲಿ ತಿಳಿಯದ ನಾನು ಹೇಳಿದ್ದನ್ನು ಮಾಡುವ ಒಂದು ಯಂತ್ರದ ಹಾಗಿದ್ದೆ. ಹೆಂಡತಿ ಎನ್ನುವವಳೊಬ್ಬಳು ನಮ್ಮ ಮನೆಗೆ ಬರುತ್ತಾಳೆ ಎನ್ನುವುದರ ಹೊರತು ನನಗೆ ಯಾವುದೂ ಅರ್ಥವಾಗುತ್ತಿರಲಿಲ್ಲ.

ನಮ್ಮ ಮನೆಯಲ್ಲಿ ಬುರುಖಾ ಪದ್ಧತಿ ಇದ್ದಿತು. ನನ್ನ ಅತ್ತಿಗೆ ಅದನ್ನು ಕಟ್ಟುನಿಟ್ಟಾಗಿ ಪಾಲಿಸುತ್ತಿದ್ದಳು. ನಮ್ಮಲ್ಲಿಯ ಆಳುಮಕ್ಕಳು ಕೂಡ ಆಕೆಯನ್ನು ಕಾಣಬಾರದು ಎಂದು ತವರಿನಿಂದ ಇಬ್ಬರು ಸೇವಿಕೆಯರನ್ನು ಆಕೆ ಕರೆತಂದಿದ್ದಳು. ಸ್ನಾನಗೃಹಕ್ಕೆ ಹೋಗುವಾಗ ಎಡಬಲದಲ್ಲಿ ಅವರಿಬ್ಬರು ಬಟ್ಟೆಗಳನ್ನು ಹಿಡಿದು ಮರೆಮಾಡಬೇಕು. ನನ್ನ ಹೆಂಡತಿ ಮನೆಗೆ ಬಂದಾಗ ಇದೆಲ್ಲವೂ ನಡೆಯುತ್ತಿದ್ದಿತಾದ್ದರಿಂದ ಆಕೆಯೂ ಹಾಗೆಯೆ ನಡೆದುಕೊಳ್ಳಬೇಕಾದದ್ದು ಅನಿವಾರ್ಯವಾಗಿತ್ತು. ರಜೆಯಲ್ಲಿ ಹಳ್ಳಿಗೆ ಬಂದಾಗ ನಾನು ಹೊರಗಡೆಯ ಕೋಣೆಯಲ್ಲಿ ಮಲಗಿರುತ್ತಿದ್ದೆ. ನಡುರಾತ್ರಿಯಾದ ಮೇಲೆ ನನ್ನ ತಾಯಿ ಕಳಿಸಿದ ಆಳುಮಗಳು ಬಂದು ನನ್ನನ್ನು ಎಚ್ಚರಿಸಿದಾಗ ನಾನು ಎದ್ದು ಹೆಂಡತಿಯನ್ನು ಕಾಣಬೇಕು. ಬೆಳಗಾಗುವುದರಲ್ಲಿ ಮತ್ತೆ ನಾನು ನನ್ನ ಹೊರ ಕೋಣೆಯಲ್ಲಿರಬೇಕು.

ಹೀಗಾಗಿ ಗಂಡಹೆಂಡಿರು ನಾವು ಹೆಚ್ಚು ಕಡಿಮೆ ದೂರವಾಗಿಯೆ ಇರುತ್ತಿದ್ದೆವು. ನಮ್ಮ ಮದುವೆಯಾದ ಮೊದಲ ನಲುವತ್ತೈದು ವರ್ಷಗಳ ಅವಧಿಯಲ್ಲಿ ನಲುವತ್ತೈದು ತಿಂಗಳಾದರೂ ನಾವು ಕೂಡಿ ಇದ್ದ ಜ್ಞಾಪಕ ನನಗಿಲ್ಲ. ಒಂದು ಸಲ ಮದುವೆಯಾದ ಹೊಸದರಲ್ಲಿ ನನ್ನ ಹೆಂಡತಿಗೆ ಕಾಲರಾ ಬೇನೆ ಬಂದಿತು. ನನ್ನ ಮನಃಸ್ಥಿತಿ ಏನಿದ್ದರೂ ಪರದಾ ಪದ್ಧತಿಯ ಮೂಲಕ ನಾನು ಆಕೆಯನ್ನು ಹೋಗಿ ನೋಡುವ ಹಾಗಿದ್ದಿಲ್ಲ. ಸುದೈವದಿಂದ ನನ್ನ ತಂದೆ ಕೊಟ್ಟ ಔಷಧಿ ಪರಿಣಾಮಕಾರಿಯಾಯಿತು. ಇಲ್ಲವಾದರೆ ಅಂದಿಗೇ ನಮ್ಮಲ್ಲಿಯ ಪರದೆ ಪದ್ಧತಿ ಕೊನೆಗೊಳ್ಳಬಹುದಾಗಿತ್ತು.

## ವಿದ್ಯಾರ್ಥಿ ದಶೆ

ಛಪರಾ ಶಾಲೆಯಲ್ಲಿ ನನ್ನ ಓದುಬರೆಹ ಪ್ರಗತಿಪರವಾಗಿ ಮುಂದುವರಿಯಿತು. ಮೇಲ್ತರಗತಿಗಳಲ್ಲಿ ಬಂದ ಹಾಗೆ ಶಿಕ್ಷಕರಿಂದ ಉತ್ತೇಜನವೂ ದೊರೆಯಿತು. ರಸಿಕಲಾಲ ರಾಯ ಎಂಬ ಒಬ್ಬ ಬಂಗಾಲಿ ಶಿಕ್ಷಕರು ನನ್ನಲ್ಲಿ ವಿಶೇಷ ಆಸ್ಥೆಯನ್ನು ವಹಿಸುತ್ತಿದ್ದರು. ಎಂಟ್ರನ್ಸ್ ಪರೀಕ್ಷೆಗೆ ನಾನು ಓದುತ್ತಿದ್ದಾಗ ಪರಿಪರಿಯಿಂದ ನನ್ನನ್ನು ಹುರಿದುಂಬಿಸಿ ಇಡೀ ವಿಶ್ವವಿದ್ಯಾಲಯಕ್ಕೆ ಮೊದಲನೆಯ ಹತ್ತರಲ್ಲಿ ನಾನೊಬ್ಬನಾದರೆ ತಿಂಗಳಿಗೆ ೨೦ ರೂಪಾಯಿಗಳ ವಿದ್ಯಾರ್ಥಿವೇತನವನ್ನು ಪಡೆದು ಕಾಲೇಜು ಸೇರಬಹುದು ಎಂದು ಹೇಳುತ್ತಿದ್ದರು. ಬಂಗಾಲ, ಬಿಹಾರ, ಓಡಿಸಾ, ಆಸಾಮು, ಬರ್ಮಾ ಮುಂತಾದ ಪ್ರದೇಶಗಳನ್ನು ತನ್ನ ಕಕ್ಷೆಯಲ್ಲಿ ಒಳಗೊಂಡ ಕಲಕತ್ತಾ ವಿಶ್ವವಿದ್ಯಾಲಯದ ಈ ಪ್ರಥಮ ಪರೀಕ್ಷೆಯಲ್ಲಿ ಅಷ್ಟನ್ನು ಸಾಧಿಸುವುದು ಸಾಮಾನ್ಯವಾಗಿ ತೋರಲಿಲ್ಲ ನನಗೆ. ಆದರೆ ರಾಯ ಶಿಕ್ಷಕರು ಒಂದೊಂದು ಸಲ ನಾನಿದ್ದಲ್ಲಿಗೆ ಬಂದು ಅನೇಕ ವಿಷಯಗಳನ್ನು ಹೇಳಿಕೊಡುತ್ತಿದ್ದರು. ಪಠ್ಯ ಪುಸ್ತಕಗಳ ಜೊತೆಯಲ್ಲಿ ಸಾಮಾನ್ಯಜ್ಞಾನವೂ ಬೆಳೆಯುವಂತೆ ನೂರೆಂಟು ವಿಷಯಗಳನ್ನು ಕುರಿತು ಪ್ರಸ್ತಾಪಿಸುತ್ತಿದ್ದರು. ಅನಾರೋಗ್ಯದ ಮೂಲಕ ತೊಂದರೆಯಾದರೂ ಎಂಟ್ರನ್ಸ್ ಪರೀಕ್ಷೆಯನ್ನು ಮುಗಿಸಿಕೊಂಡು ಹಳ್ಳಿಗೆ ಹಿಂದಿರುಗಿದೆ. ಸಕಾಲದಲ್ಲಿ ಪರಿಣಾಮಗಳು ಪ್ರಕಟವಾದುವು. ಇಡೀ ವಿಶ್ವವಿದ್ಯಾಲಯಕ್ಕೆ ಮೊದಲಿಗನಾಗಿ ತೇರ್ಗಡೆ

ಯಾಗಿದ್ದೆ.

ಕಾಲೇಜಿಗಾಗಿ ಕಲಕತ್ತೆಗೆ ಬಂದು ನನ್ನ ಅಣ್ಣನಿರುತ್ತಿದ್ದ ಎಡನ್ ಹಿಂದು ಹಾಸ್ಟೆಲ್‌ನಲ್ಲಿಯೇ ಇರುವ ವ್ಯವಸ್ಥೆಯನ್ನು ಮಾಡಲಾಯಿತು. ಇಡೀ ವರ್ಷ ಅನಾರೋಗ್ಯ ಕಾಡಿತು. ಹಾಸ್ಟೆಲ್ ಡಾಕ್ಟರರ ಪರಿಶ್ರಮ ಉಪಯೋಗವಾಗದಾಗ ಡಾಕ್ಟರ್ ನೀಲ ರತನ ಸರಕಾರರು ನನಗೆ ತುಂಬ ಕ್ವಿನೈನ್ ಕುಡಿಯಿಸಿ ಚಳಿಜ್ವರದಿಂದ ಬಿಡುಗಡೆ ಮಾಡಿದರು. ಆ ಒಂದು ವರ್ಷದಲ್ಲಿ ನಾನು ಕುಡಿದ ಕ್ವಿನೈನ್ ಮೂಲಕವೆ ನನಗೆ ಆಮೇಲೆ ದಮ್ಮಿನ ವಿಕಾರವಾಯಿತು ಎಂದು ಹೋಮಿಯೋಪಥಿಯವರ ಅಭಿಪ್ರಾಯವಾಗಿದೆ. ಏನಿದ್ದರೂ ನಾನು ಗುಣ ಹೊಂದಿ ಎಫ್. ಎ. ಪರೀಕ್ಷೆಯಲ್ಲಿ ಮತ್ತೆ ಮೊದಲಿಗನಾಗಿ ಪಾಸಾಗುವಂತಾಯಿತು. ಕಾಲೇಜಿನ ಮೊದಲ ವರ್ಷ ಜಗದೀಶ ಚಂದ್ರ ಬೋಸರು ಭೌತಶಾಸ್ತ್ರವನ್ನು, ಪಿ.ಸಿ ರೇ ಅವರು ರಸಾಯನಶಾಸ್ತ್ರವನ್ನು ಹೇಳುತ್ತಿದ್ದರು. ಎಫ್. ಎ. ಆದ ಮೇಲೆ ವಿಜ್ಞಾನವನ್ನೇ ವಿಶೇಷವಾಗಿ ಓದಬೇಕೆಂದಿದ್ದ ನನಗೆ ಗಣಿತದಲ್ಲಿ ನಾನು ಪಡೆದ ಗುಣಗಳಿಂದ ಉತ್ತೇಜನ ಸಿಕ್ಕಲಿಲ್ಲ. ಬಿ. ಎ. ಗೆ ಇಂಗ್ಲೀಷ್ ಮತ್ತು ತತ್ವಶಾಸ್ತ್ರಗಳನ್ನು ತೆಗೆದುಕೊಳ್ಳಲೇಬೇಕಾಗುತ್ತಿತ್ತು. ಇದರ ಜೊತೆಯಲ್ಲಿ ಅರ್ಥಶಾಸ್ತ್ರ, ಮತ್ತು ಇತಿಹಾಸಗಳನ್ನು ಆಯ್ದುಕೊಂಡು ಓದನ್ನು ಮುಂದುವರಿಸಿದೆ. ಆದರೆ ಎಫ್. ಎ. ಆದನಂತರ ಮೊದಲಿನ ಹಾಗೆ ಬರೀ ಓದಿನ ಕಡೆಗೆ ಲಕ್ಷ್ಯ ಸೇರದಾಯಿತು. ಇದಕ್ಕೆ ಮುಖ್ಯ ಕಾರಣ ಕಲಕತ್ತೆಯ ವಾತಾವರಣ ಎಂದೇ ಹೇಳಬೇಕು. ಸಾಮಾಜಿಕ ಮತ್ತು ರಾಜಕೀಯ ವಿಚಾರಗಳು ನನ್ನಲ್ಲಿ ಮೂಡಿ ಜಾಗ್ರತವಾದ ಕಾಲ ಅದು.

ಯುವಕರ ಶೀಲಸಂವರ್ಧನೆಯಾಗಬೇಕು, ಅವರಿಗೆ ದೇಶದ ಮತ್ತು ಪ್ರಪಂಚದ ಪರಿಜ್ಞಾನ ಉಂಟಾಗಬೇಕೆನ್ನುವ ಉದ್ದೇಶದಿಂದ ಸರ್ ಆಶುತೋಷ ಮುಕರ್ಜಿ ಮತ್ತು ವಿವೇಕಾನಂದರ ಸಹಪಾಠಿಯಾಗಿದ್ದ ಸತೀಶಚಂದ್ರ ಮುಕರ್ಜಿ ಎನ್ನುವವರು ಡಾನ್ ಸೊಸೈಟಿ ಎಂಬ ಸಂಘವನ್ನು ಪ್ರಾರಂಭಿಸಿದ್ದರು. ಆನಿ ಬೆಸಂಟ್, ನಿವೇದಿತಾ ಮುಂತಾದವರಿಂದ ಉಪನ್ಯಾಸಗಳನ್ನೇರ್ಪಡಿಸಲಾಗುತ್ತಿತ್ತು. ಸದಸ್ಯರಾದವರು ಯಾವ ವಂತಿಗೆಯನ್ನೂ ಕೊಡಬೇಕಾಗಿರಲಿಲ್ಲ. ಆದರೆ ಕೇಳಿದ ಉಪನ್ಯಾಸಗಳ ಸಂಗ್ರಹ ಬರೆದು ತೋರಿಸಬೇಕಾಗುತ್ತಿತ್ತು. ಆ ಸಂಘದ ಸದಸ್ಯನಾಗಿ ಅನೇಕ ಉಪನ್ಯಾಸಗಳನ್ನು ಕೇಳಿದಾಗ ನನ್ನ ಅಂತರಂಗದ ಕ್ಷಿತಿಜ ಕಾಲೇಜಿನ ಜೀವನವನ್ನು ಮೀರಿ ವಿಸ್ತಾರಗೊಂಡ ಹಾಗೆ ಭಾಸವಾಗತೊಡಗಿತು. ವಂಗ ವಿಭಜನೆಯ ಚಳುವಳಿಯ ಮೂಲಕ ವಿದ್ಯಾರ್ಥಿಗಳಲ್ಲಿ ಹೊಸ ಚೈತನ್ಯ ಮೂಡಿನಿಂತಿತ್ತು. ಅನೇಕರು ಕಾಲೇಜು ಬಿಡುವ ಯೋಚನೆಯಲ್ಲಿದ್ದರು. ನಾನು ದುಡುಕಲಿಲ್ಲ. ವ್ಯಾಸಂಗವನ್ನು ನಿಧಾನವಾಗಿ ಮುಂದುವರಿಸುತ್ತಿದ್ದೆ. ಆದರೆ ಮನಸ್ಸು ನೂರು ವಿಷಯುಗಳನ್ನರಸುತ್ತಿತ್ತು. ಹೊಸ ಉದ್ವೇಗಗಳಿಗೆ ಒಳಗಾಗುತ್ತಿತ್ತು. ಬಿ. ಎ. ಪರೀಕ್ಷೆಯ ಸಿದ್ಧತೆ ನಡೆದಾಗ ತತ್ವಶಾಸ್ತ್ರದ ಕಡೆಗೆ ಗಮನ ಕೊಡಲಾಗಲೇ ಇಲ್ಲ. ಅಧ್ಯಾಪಕರು ತರಗತಿಗಳಲ್ಲಿ ಹೇಳಿದ್ದನ್ನೆ ಅವಲಂಬಿಸಿಕೊಂಡು ಹೋದೆ. ಪರಿಣಾಮ ಹೊರಬಿದ್ದಾಗ ನಾನೇ ದಿಗಿಲುಪಡುವಂತಾಗಿತ್ತು. ಇತಿಹಾಸ ಮತ್ತು ಇಂಗ್ಲೀಷಿನಲ್ಲಿ ನಾನು ಪಡೆದ ಗುಣಗಳು ತತ್ವಶಾಸ್ತ್ರದಲ್ಲಿಯ ಕೊರತೆಯನ್ನು ತುಂಬಿಕೊಂಡು ಹೋಗಿದ್ದವು. ವಿಶ್ವವಿದ್ಯಾಲಯಕ್ಕೆ ಮತ್ತೆ ಮೊದಲಿಗನಾಗಿದ್ದೆ.

ಎಂ. ಎ. ಮತ್ತು ಬಿ. ಎಲ್. ಅಭ್ಯಾಸಕ್ಕಾಗಿ ಕಲಕತ್ತೆಗೆ ಬಂದಾಗ ನನ್ನ ಕಾರ್ಯಕ್ಷೇತ್ರ ವಿಸ್ತಾರಗೊಳ್ಳುವುದರಲ್ಲಿತ್ತು. ಸ್ವದೇಶಿ ಆಂದೋಲನದಲ್ಲಿ ಇನ್ನೂ ಹೆಚ್ಚಾಗಿ ಭಾಗವಹಿಸಲು ಅನುಕೂಲವಾಗುವಂತೆ ಬಿಹಾರ ವಿದ್ಯಾರ್ಥಿ ಸಮ್ಮೇಳನವನ್ನು ಏರ್ಪಡಿಸುವುದೆಂದು ನಾವು

ಕೆಲವರು ನಿರ್ಣಯಿಸಿದೆವು. ಪಾಟ್ನಾದಲ್ಲಿ ಬ್ಯಾರಿಸ್ಟರ್ ಶರ್ಫುದ್ದೀನರ ಅಧ್ಯಕ್ಷತೆಯಲ್ಲಿ ಸಮ್ಮೇಳನ ನಡೆಯಬೇಕೆಂದು ಗೊತ್ತಾಯಿತು. ಹಾಗೆ ಮೊದಲಾದ ಈ ಸಮ್ಮೇಳನ ಮುಂದೆ ಬಹುಕಾಲ ಮುಂದುವರೆಯಿತು. ಅದರ ಅಧ್ಯಕ್ಷತೆಯನ್ನು ಸಚ್ಚಿದಾನಂದ ಸಿಂಹ, ಆನಿ ಬೆಸಂಟ, ದೀನಬಂಧು ಆಂಡ್ರೂಸ್, ಮಹಾತ್ಮಾ ಗಾಂಧಿಯಂಥವರು ವಹಿಸಿದರು. ಈ ಸಮ್ಮೇಳನ ಸಾರ್ವಜನಿಕ ಸಂಘಟನೆಯಲ್ಲಿ ಮತ್ತು ಭಾಷಣ ಕಲೆಯಲ್ಲಿ ಅನೇಕರಿಗೆ ಮಾರ್ಗದರ್ಶಕವಾಯಿತು. ಮುಂದಿನ ಹದಿನೈದು ವರ್ಷಗಳಲ್ಲಿ ಪ್ರಕಾಶಕ್ಕೆ ಬಂದ ಮುಖಂಡರೆಲ್ಲರೂ ಈ ಸಮ್ಮೇಳನದಲ್ಲಿ ದುಡಿದ ವಿದ್ಯಾರ್ಥಿಗಳು. ಗಾಂಧೀಜಿಯವರು ಬಿಹಾರಕ್ಕೆ ಮೊದಲ ಸಲ ಬಂದಾಗ ಮತ್ತು ಅಸಹಕಾರ ಚಳುವಳಿಯನ್ನು ಹೂಡಿದಾಗ ಅವರಿಗೆ ಬೆಂಬಲಿಗರಾಗಿ ನಿಂತ ಎಲ್ಲರನ್ನು ಸ್ಫೂರ್ತಿಗೊಳಿಸಿದ ಸಂಸ್ಥೆಯೆಂದರೆ ಈ ವಿದ್ಯಾರ್ಥಿಸಮ್ಮೇಳನ ಎಂಬಲ್ಲಿ ಎಷ್ಟು ಮಾತ್ರವೂ ಅತಿಶಯೋಕ್ತಿಯಲ್ಲ.

ದಾದಾಭಾಯಿ ನೌರೋಜಿಯವರ ಅಧ್ಯಕ್ಷತೆಯಲ್ಲಿ ಕಲಕತ್ತೆಯಲ್ಲಿ ಸೇರಿದ ೧೯೦೬ರ ಅಖಿಲ ಭಾರತ ಕಾಂಗ್ರೆಸ್ ಅಧಿವೇಶನದಲ್ಲಿ ಸ್ವಯಂಸೇವಕನೆಂದು ಕೆಲಸ ಮಾಡಿದೆ. ಕಾಂಗ್ರೆಸಿನಲ್ಲಿ ಎಡಬಲ ಪಕ್ಷಗಳಾಗಿದ್ದವು. ಟಿಳಕ, ಲಾಜಪತರಾಯ, ಬಿಪಿನ ಚಂದ್ರ ಪಾಲ, ಅರವಿಂದ ಘೋಷ ಮುಂತಾದವರು ಎಡ ಪಕ್ಷದವರಾದರೆ ಗೋಖಲೆ, ಫಿರೋಜಶಾಹ ಮೇಥಾ, ಸುರೇಂದ್ರನಾಥ ಬಾನರ್ಜಿ ಬಲಪಕ್ಷಕ್ಕೆ ಸೇರಿದ್ದರು. ಈ ಪಕ್ಷಗಳ ವಿರೋಧವನ್ನು ಕಡಿಮೆಮಾಡುವುದಕ್ಕೆಂದು ನೌರೋಜಿಯವರನ್ನು ವಿಶೇಷವಾಗಿ ನಿಮಂತ್ರಿಸಲಾಗಿತ್ತು. ಈ ಅಧಿವೇಶನದಲ್ಲಿಯೆ ಮೊತ್ತಮೊದಲು ನಾನು ಜಿನ್ನಾ, ಮಾಲವೀಯ, ಮತ್ತು ಸರೋಜನಿ ನಾಯ್ಡು ಅವರ ಭಾಷಣಗಳನ್ನು ಕೇಳಿದ್ದು. ೧೯೧೧ ರಲ್ಲಿ ಕಲಕತ್ತೆಯಲ್ಲಿ ಮತ್ತೆ ಅಧಿವೇಶನ ಸೇರುವವರೆಗೆ ನಾನು ಕಾಂಗ್ರೆಸ್ ಸದಸ್ಯನಾಗಿರಲಿಲ್ಲ. ೧೯೧೧ ರಲ್ಲಿ ಏ ಆಯ್ ಸಿ ಸಿ ಯ ಸದಸ್ಯನಾಗಿ ಚುನಾಯಿತನಾದೆ. ಅಂದಿನಿಂದ ಇಂದಿನ ವರೆಗೆ ಆ ಸಂಬಂಧ ಬಹು ವಿಧವಾಗಿ ಬೆಳೆದುಬಂದಿದೆ.

## ಇಂಗ್ಲಂಡಿಗೆ ಹೋಗಲಿಲ್ಲ

ಬಿ. ಎ. ಆದನಂತರ ಸರಕಾರಿ ಕೆಲಸಕ್ಕೆ ಸೇರಬಾರದು ಎಂದೇ ಎಂ. ಎ., ಬಿ. ಎಲ್. ದ ಯೋಚನೆಮಾಡಿ ಕಲಕತ್ತೆಗೆ ಬಂದಿದ್ದೆ. ಆದರೆ ಇಂಗ್ಲಂಡಿಗೆ ಹೋಗಿ ಆಯ್. ಸಿ. ಎಸ್ ಯಾಕಾಗಬಾರದು ಎಂಬ ಯೋಚನೆ ಒಂದೊಂದು ಸಲ ಒತ್ತಾಯಿಸುತ್ತಿತ್ತು. ಕೊನೆಗೆ ಹೋಗುವುದೆಂದು ಗೊತ್ತು ಮಾಡಿಕೊಂಡು ಸಚ್ಚಿದಾನಂದ ಸಿಂಹ, ಮುನ್ಶಿ ಈಶ್ವರ ಶರಣ ಮುಂತಾದವರ ಸಹಾಯದ ಆಶ್ವಾಸನವನ್ನು ಪಡೆದೆ. ಮನೆಯಲ್ಲಿ ಈ ವಿಷಯವನ್ನೆತ್ತಿದರೆ ಆಗದು ಎಂದು ಅಣ್ಣನೊಡನೆ ಗುಪ್ತವಾಗಿ ಆಲೋಚನೆ ಮಾಡಿ ಇಬ್ಬರೂ ನನಗಾಗಿ ಸಿದ್ಧತೆಗಳನ್ನು ಮುಂದುವರಿಸುತ್ತಿದ್ದೆವು. ಅಗತ್ಯವಾದ ಹಣ ಕೂಡಿತು. ಒಂದೆರಡು ವಿದೇಶೀಯ ಬಟ್ಟೆಯ ಸೂಟುಗಳನ್ನೂ ಮಾಡಿಸಿಯಾಯಿತು. ಹಡಗು ಹತ್ತಿದ ಮೇಲೆ ಮನೆಯವರಿಗೆ ಹೇಳತಕ್ಕದ್ದೆಂದು ಗೊತ್ತುಮಾಡಿಕೊಂಡಿದ್ದೆವು. ಆದರೆ ಅಲ್ಹಾಬಾದಕ್ಕೆ ಬಂದಾಗ ನನ್ನ ಮಾವನವರ ಸಂಬಂಧಿಕರಿಗೆ ಇದರ ಸುಳಿವು ಹತ್ತಿ ನನ್ನ ಮನೆಗೆ ತಂತಿ ಕಳಿಸಿದರು. ನಾನು ಕಲಕತ್ತೆಗೆ ಹಿಂತಿರುಗುವಷ್ಟರಲ್ಲಿ ಮನೆಯಿಂದ ಕರೆಬಂದಿತ್ತು–ತಂದೆಯವರಿಗೆ ಮೈಯಲ್ಲಿ ಸ್ವಸ್ಥವಿಲ್ಲ ಎಂದು. ಜೀರಾದೇಯಿಗೆ ಹೋಗಿ ನೋಡಿದರೆ ತಂದೆಗೆ ನಿಜವಾಗಿ ಅನಾರೋಗ್ಯವಿತ್ತು. ನಾವು ನಡಸಿದ "ಒಳಸಂಚಿ" ಗಾಗಿ ಅಣ್ಣನನ್ನು ಹಳಿದು, ನೀನು ಹೊರಟುಹೋದರೆ ತಮ್ಮ ಕತೆ ಮುಗಿಯಿತು ಎಂದು ಹೇಳಿದರು. ಎಲ್ಲ ಸಿದ್ಧತೆಗಳಾಗಿದ್ದರೂ ನನ್ನ ಇಂಗ್ಲಂಡ್ ಪ್ರವಾಸ ಅಲ್ಲಿಗೆ ಮುಗಿಯಿತು.

ನನ್ನ ಗೆಳೆಯನಾಗಿದ್ದ ಶುಕದೇವ ಪ್ರಸಾದ

ನಿಗೂ ತುಂಬಾ ಆಸೆಯಿತ್ತು ಇಂಗ್ಲಂಡಿಗೆ ಹೋಗಬೇಕೆಂದು. ತಂದೆಯವರಿಂದ ತಂತಿ ಬರುವ ಮುನ್ನಾ ದಿನ ನಾವಿಬ್ಬರೂ ಒಬ್ಬ ಜ್ಯೋತಿಷಿಯನ್ನು ಕೇಳಿದ್ದೆವು. ನಾನು ಹೋಗುವುದಕ್ಕೆ ಅವಕಾಶವಿದೆಯೆಂದೂ ಆತ ಕೂಡಲೆ ಹೊರಡುತ್ತಾನೆಂದೂ ಹೇಳಿದ್ದನ್ನು ಕೇಳಿಕೊಂಡು ಜ್ಯೋತಿಷಿಯನ್ನು ನಗೆಯಾಡಿದ್ದೆವು. ಆದರೆ ನಾನು ಹಳ್ಳಿಯಿಂದ ಹಿಂದಿರುಗಿದಾಗ ಜ್ಯೋತಿಷಿಯ ಭವಿಷ್ಯವೇ ನಿಜವಾಯಿತು. ನನ್ನ ಬಟ್ಟೆ, ನನಗಾಗಿ ಬಂದ ಧನಸಹಾಯ ಎರಡನ್ನೂ ಉಪಯೋಗಿಸಿಕೊಂಡು ಶುಕದೇವ ಪ್ರಯಾಣ ಬೆಳೆಯಿಸಿದ!

ತಂದೆಯವರ ಅನಾರೋಗ್ಯ ಹೆಚ್ಚುತ್ತ ಹೋಗಿ ಮಾರ್ಚ ೧೯೦೭ರಲ್ಲಿ ಅವರು ನಿಧನ ಹೊಂದಿದರು. ಅದೇ ವರ್ಷ ನನ್ನ ಮಗ ಮೃತ್ಯುಂಜಯನ ಜನ್ಮವಾದದ್ದು. ಮನೆಯ ವಹಿವಾಟನ್ನು ನನ್ನ ಅಣ್ಣ ನೋಡಿಕೊಳ್ಳುತ್ತಿದ್ದನಾದರೂ ಮುಂದೆ ನಾನೇನು ಮಾಡಬೇಕೆನ್ನುವ ಪ್ರಶ್ನೆ ನನ್ನೆದುರು ನಿಂತಿತು. ವಕೀಲ ವೃತ್ತಿಯ ಕಡೆಗೆ ಮನಸ್ಸು ಹರಿಯುತ್ತಿದ್ದಿಲ್ಲ. ಅದೇ ಡಿಸೆಂಬರ್ ತಿಂಗಳಲ್ಲಿ ಎಂ. ಎ. ಪರೀಕ್ಷೆ ಮುಗಿಯಿಸಿದೆ. ಉಳಿದ ಪರೀಕ್ಷೆಗಳ ಹಾಗೆ ಒಂದನೆಯ ನಂಬರ ಸಿಕ್ಕಲಿಲ್ಲ. ನಾನು ಅದಕ್ಕಾಗಿ ಓದಿದ್ದೂ ಅಷ್ಟಕ್ಕಷ್ಟೆಯಾಗಿತ್ತು. ವಕೀಲ ವೃತ್ತಿ ಅನಿಶ್ಚಿತವೆಂದು ತೋರುತ್ತಿದ್ದುದರಿಂದ ಮುಜಫ್ಫರಪುರ ಕಾಲೇಜಿನಲ್ಲಿ ಹತ್ತು ತಿಂಗಳು ಅಧ್ಯಾಪಕನಾಗಿ ಕೆಲಸ ಮಾಡಿದೆ. ಆದರೆ ಮತ್ತೆ ಕಲಕತ್ತೆಗೆ ಹೋಗಿ ವಕೀಲಿ ಪರೀಕ್ಷೆ ಮುಗಿಸಿ ಆ ವೃತ್ತಿಯನ್ನವಲಂಬಿಸುವುದೇ ಒಳ್ಳೆಯದೆಂದು ತೋರಿತು.

## ವಕೀಲಿ ಜೀವನದ ಆರಂಭ

ಮಾರ್ಚ ೧೯೦೯ರಲ್ಲಿ ಮೊದಲ ಲಾ ಪರೀಕ್ಷೆ ಮುಗಿಯಿಸಿದೆ. ಆದರೆ ವಕೀಲ ವೃತ್ತಿಯನ್ನಾರಂಭಿಸಬೇಕಾದರೆ ಎರಡು ವರ್ಷ ಹಿರಿಯ ವಕೀಲರೊಬ್ಬರೊಡನೆ ಕೆಲಸ ಮಾಡಿ ಇನ್ನೊಂದು ಪರೀಕ್ಷೆಗೆ ಕಟ್ಟಬೇಕು. ಹಿಂದುಗಡೆಯಲ್ಲಿ ನ್ಯಾಯಮೂರ್ತಿ ಸುಹ್ರವರ್ದಿ ಎಂದು ಹೆಸರಾದ ಜಹಾದುರ್ ರಹೀಂ ಜಾಹಿದ ಅವರೊಡನೆ ಕೆಲಸಕ್ಕೆ ಪ್ರಾರಂಭಿಸಿದೆ. ಅವರು ಇಂಗ್ಲಂಡಿಗೆ ಹೊರಟು ಹೋದ ನಂತರ ಖಾನ್ ಬಹಾದೂರ ಶಮ್ಸುಲ್ ಹುದಾ ಅವರೊಡನೆ ಕೆಲಸ ಮಾಡಲಾರಂಭಿಸಿದೆ ಖಾನ್ ಬಹಾದೂರರು ನಿಷ್ಣಾತ ವಕೀಲರು. ಮುಂಜಾವಿನಿಂದ ಸಂಜೆಯ ವರೆಗೆ ದುಡಿಯಬೇಕಾಗುತ್ತಿತ್ತು. ನಾನು ಇರುವುದೊಂದು ಕಡೆ, ಊಟ ಇನ್ನೊಂದು ಕಡೆ, ಕೆಲಸ ಮೂರನೆಯ ಕಡೆ. ಇದಲ್ಲದೆ ನ್ಯಾಯಮೂರ್ತಿ ದಿಗಂಬರ ಚಟರ್ಜಿಯವರ ಮಗನಿಗೆ ಪಾಠ ಬೇರೆ ಹೇಳುತ್ತಿದ್ದೆ. ಹೀಗಾಗಿ ಮುಂಜಾನೆ ಏಳರಿಂದ ರಾತ್ರಿ ಹತ್ತರ ವರೆಗೆ ಎಡೆಬಿಡದೆ ದುಡಿಯಬೇಕಾಗುತ್ತಿತ್ತು. ತನ್ನ ಈ ಓಡಾಟವನ್ನು ನೋಡಲಾಗದೆ ನನ್ನನ್ನು ತುಂಬ ಆತ್ಮೀಯತೆಯಿಂದ ಕಾಣುತ್ತಿದ್ದ ಖಾನ್ ಬಹಾದೂರರು ನಾನು ತಮ್ಮಲ್ಲಿಯೆ ಇರುವಂತೆ ವ್ಯವಸ್ಥೆ ಮಾಡಿಕೊಟ್ಟರು. ಒಂದು ಸಲ ಬಕ್ರೀದ ಹಬ್ಬ ಬಂದಾಗ ಅಲ್ಲಿ ಗೋಹತ್ಯೆ ನಡೆಯಬಹುದೆಂದು ಅವರಿಗೆ ಹೇಳದೆಯೆ ನಾಲ್ಕು ದಿನ ಮಾಯವಾದೆ. ತಿರುಗಿ ಬಂದಾಗ ಖಾನ್‌ಬಹಾದೂರರು ತುಂಬ ವ್ಯಥೆಯಿಂದ ಕೇಳಿದರು: "ನೀನು ಹೊರಟು ಹೋದದ್ದು ಯಾಕೆ ಎನ್ನುವುದು ನನಗೆ ಗೊತ್ತು. ಆದರೆ ನೀನು ನನ್ನನ್ನು ಅರ್ಥ ಮಾಡಿಕೊಂಡಿಲ್ಲ. ನಿನ್ನ ಹಾಗೆ ನನಗೆ ಬೇಕಾದಷ್ಟು ಹಿಂದುಗಳು ಮಿತ್ರರಾಗಿದ್ದಾರೆ. ಮನೆಯಲ್ಲಿ ಹಿಂದು ಆಳು ಮಕ್ಕಳಿದ್ದಾರೆ. ಇಷ್ಟೆಲ್ಲ ಜನರ ಮನಸ್ಸನ್ನು ನೋಯಿಸಿ ನಾನು ಗೋಹತ್ಯೆ ಮಾಡಬಹುದೆ? ಅಂಥ ಕೆಲಸ ಇಲ್ಲಿ ಎಂದಿಗೂ ನಡೆಯುವುದಿಲ್ಲ" ಎಂದು ಹೇಳಿದಾಗ ನನಗೆ ನಾಚಿಕೆಯಾಯಿತು.

ಆಗಸ್ಟ್ ೧೯೧೧ರಲ್ಲಿ ನಾನು ಸ್ವತಂತ್ರವಾಗಿ ವೃತ್ತಿಯನ್ನು ಪ್ರಾರಂಭ ಮಾಡಿದೆ. ನಾನ-

ಹೈಕೋರ್ಟಿನಲ್ಲಿ ನಡಸಿದ ಆ ಕೇಸನ್ನು ಖಾನ್ ಬಹಾದೂರರು ಕೊಟ್ಟಿದ್ದರಲ್ಲದೆ ಅದನ್ನು ನಾನು ನಡಸುವಾಗ ಬಂದು ಹತ್ತಿರ ಕುಳಿತಿದ್ದರು. ಬಂದ ಕೇಸುಗಳನ್ನು ತುಂಬ ಪರಿಶ್ರಮದಿಂದ ನೋಡಿ ಕೊಂಡು ಹೋಗುತ್ತಿದ್ದೆನಾದ್ದರಿಂದ ನಾಲ್ಕಾರು ತಿಂಗಳುಗಳಲ್ಲಿಯೆ ಹೊಸ ಕೇಸುಗಳು ಬರಹತ್ತಿ ವೃತ್ತಿಯಲ್ಲಿ ಪ್ರಗತಿ ಸಾಧ್ಯವಾಯಿತು. ಸರ್ ಆಶುತೋಷ ಮುಕರ್ಜಿಯವರ ಎದುರು ನಾನು ನಡಸಿದ ಒಂದು ಕೇಸು, ಅದನ್ನು ನಾನು ನಿರ್ವ ಹಿಸಿದ ರೀತಿ ಅವರನ್ನು ತುಂಬ ಸೆಳೆದಿರಬೇಕು. ಅದಾದ ಒಂದೆರಡು ದಿನಗಳ ನಂತರ ವಿಶ್ವವಿದ್ಯಾ ಲಯದ ಉಪಕುಲಪತಿಗಳೂ ಆಗಿದ್ದ ಅವರು, ನಾನು ಲಾ ಕಾಲೇಜಿನಲ್ಲಿ ಅಧ್ಯಾಪಕನಾಗಬೇ ಕೆಂದು ಸೂಚಿಸಿದರು. ಆ ಕೆಲಸವನ್ನು ಒಪ್ಪಿ ಕೊಂಡೆ. ಎರಡು ಕಡೆಗಳಲ್ಲಿಯೂ ತೃಪ್ತಿಕರ ವಾಗಿ ಕೆಲಸವನ್ನು ಸಾಗಿಸಿಕೊಂಡು ಹೋಗಿ ಆ ಕಾಲದ ಅನೇಕ ಹಿರಿಯ ವಕೀಲರ ಮತ್ತು ನ್ಯಾಯಾಧೀಶರ ಮನ್ನಣೆಯನ್ನು ಪಡೆದೆ. ಅದೇ ಕಾಲಕ್ಕೆ ನನ್ನ ಜೀವನಪ್ರವಾಹವನ್ನು ಬೇರೊಂದು ದಾರಿಯಲ್ಲಿ ನಡಸಬಹುದಾಗಿದ್ದ ಘಟನೆಯೊಂದು ನಡೆಯಿತು. ಅದೆಂದರೆ ನಾನು ಗೋಪಾಲ ಕೃಷ್ಣ ಗೋಖಲೆಯವರನ್ನು ಕಂಡದ್ದು.

## ಗೋಖಲೆಯವರೊಡನೆ

ತಾವು ಅದೇ ಸ್ಥಾಪಿಸಿದ ಸರ್ವಂಟ್ಸ್ ಆಫ್ ಇಂಡಿಯಾ ಸೊಸೈಟಿಗೆ ನಾನು ಬಂದು ದೇಶ ಸೇವೆ ಮಾಡಬೇಕೆಂದು ಸೂಚಿಸುತ್ತ ಗೋಖಲೆ ಯವರು ಹೇಳಿದರು: "ನಿಮ್ಮ ವೃತ್ತಿಯಲ್ಲಿ ಬೇಕಾದಷ್ಟು ಯಶಸ್ಸನ್ನು, ಐಶ್ವರ್ಯವನ್ನು ಗಳಿಸಿ ನೀವು ಸುಖವಾಗಿರಬಹುದು. ಆದರೆ ನಿಮ್ಮಂಥ ಬುದ್ಧಿವಂತರು ದೇಶಕಾರ್ಯಕ್ಕಾಗಿ ಮುಂದಾಗದಿದ್ದರೆ ಆ ಕೆಲಸವನ್ನು ಯಾರು ಮಾಡಬೇಕು? ನನ್ನ ವಿದ್ಯಾಭ್ಯಾಸ ಮುಗಿದಾಗ ನನ್ನ ಮನೆಯವರು ಕೂಡ ದೊಡ್ಡದಾಗಿ ಆಶಾ ಗೋಪುರಗಳನ್ನು ಕಟ್ಟಿಕೊಂಡಿದ್ದರು. ನಾನು ದೇಶಸೇವೆಗೆ ತೊಡಗಿದಾಗ ಅವರೆಲ್ಲರಿಗೂ ತುಂಬ ನಿರಾಶೆಯಾಯಿತು. ನನ್ನ ಅಣ್ಣ ಎಷ್ಟೋ ಕಾಲ ನನ್ನೊಡನೆ ಮಾತನಾಡಲಿಲ್ಲ. ಆದರೆ ನಿಧಾನವಾಗಿ ಅವರೆಲ್ಲರಿಗೂ ನನ್ನ ಕೆಲಸದ ಮಹತ್ವ ಅರ್ಥವಾಯಿತು. ಹತ್ತಿರದವರಿಗೆ ದುಃಖವಾಗುತ್ತದೆ ನಿಜ. ಅಕಸ್ಮಾತ್ತಾಗಿ ಸತ್ತು ಹೋದರೆ ಅವರೇನು ಮಾಡುತ್ತಾರೆ?''

ಅವರ ಮಾತು ನನ್ನ ಹೃದಯದಲ್ಲಿ ಕೋಲಾ ಹಲವನ್ನೆಬ್ಬಿಸಿತು. ಹತ್ತು ದಿನ ನಿದ್ರೆ ನೀರಡಿ ಕೆಗಳ ಪರಿವೆ ಇಲ್ಲದೆ ಯೋಚಿಸಿದೆ. ತಡೆಯ ಲಾಗದ ದುಃಖವನ್ನು ಅಣ್ಣನೆದುರು ತೋಡಿ ಕೊಂಡೆ. ಆದರೆ ನನ್ನ ಅಕ್ಕನ ಮಾತು ಕೊನೆಯ ನಿರ್ಣಯವನ್ನು ಹೇಳಿತು. "ಗುಪ್ತವಾಗಿ ಪರದೇಶಕ್ಕೆ ಹೋಗಬೇಕೆಂದು ತಂದೆಯನ್ನು ನೋಯಿಸಿದೆ. ಈಗ ವೃತ್ತಿಯನ್ನು ಬಿಟ್ಟು ಸಂನ್ಯಾಸವನ್ನು ಸ್ವೀಕರಿಸಿ ಅಣ್ಣನನ್ನು ಗೋಳು ಹುಯ್ದುಕೊಳ್ಳಬೇಡ'' ಎಂದು ನೇರವಾಗಿ ಹೇಳಿದಳು. ನನಗೆ ತುಂಬ ನಿರಾಶೆಯಾಯಿತು. ಅದನ್ನು ನುಂಗಿಕೊಂಡು ಗೋಖಲೆಯವರಿಗೆ ಹಾಗೆ ತಿಳಿಸಿದೆ. ಅವರಿಗೂ ನಿರಾಶೆಯಾಯಿತು. ಆದರೆ ನಾನಾಗ ಹಾಗೆ ಮಾಡಿದ್ದೇ ಸರಿ ಎಂದು ಈಗ ತೋರುತ್ತದೆ.

ಮುಜಪ್ಫರಪುರ ಕಾಲೇಜಿನಲ್ಲಿ ನನ್ನ ಸಹಾ ಧ್ಯಾಪಕನಾಗಿದ್ದ ವೈದ್ಯನಾಥ ನಾರಾಯಣ ಸಿಂಹನೂ ಕಲಕತ್ತೆಯಲ್ಲಿ ವಕೀಲಿಯನ್ನಾರಂಭಿ ಸಿದ್ದ. ಹಳೆಯ ಗೆಳೆತನ ಮತ್ತೆ ಚಿಗುರಿತು. ನಾವಿಬ್ಬರೂ ಎಂ. ಎಲ್. ಪರೀಕ್ಷೆಗಾಗಿ ಓದ ಬೇಕೆಂದು ಆತ ಒತ್ತಾಯ ಮಾಡತೊಡಗಿದ. ಎಂ. ಎ. ಮತ್ತು ಬಿ. ಎಲ್. ಪರೀಕ್ಷೆಗಳಲ್ಲಿ ಮೊದಲ ಸ್ಥಾನವನ್ನು ಕಳೆದುಕೊಂಡ ನಾನು ಎಂ. ಎಲ್. ಪರೀಕ್ಷೆಯಲ್ಲಿ ಅದನ್ನು ಗಳಿಸಬೇ ಕೆಂದು ಆತನ ಒತ್ತಾಸೆ. ಒಪ್ಪಿ ಇಬ್ಬರೂ

ಓದತೊಡಗಿದೆವು. ಡಿಸೆಂಬರ್ ೧೯೧೫ರಲ್ಲಿ ಪರೀಕ್ಷೆ. ತುಂಬ ಓದಿ ಓದಿ ನಾನು ಖಾಯಿಲೆ ಬಿದ್ದೆ. ಪರೀಕ್ಷೆ ಕೈಬಿಟ್ಟುಬಿಡುತ್ತೇನೆಂದುಕೊಂಡೆ. ಮಾರ್ಚ ೧೯೧೬ ರಲ್ಲಿ ಪಾಟನಾ ಹೈಕೋರ್ಟು ಪ್ರಾರಂಭವಾಗುವುದಿತ್ತು. ನಾವು ಅಲ್ಲಿಗೆ ಹೋಗಬೇಕಾದ್ದರಿಂದ ಇದೇ ಕೊನೆಯ ಅವಕಾಶವೆಂದು ಮತ್ತೆ ಚೇತರಿಸಿ ಓದಿ ಪರೀಕ್ಷೆಗೆ ಕುಳಿತೆ. ವೈದ್ಯನಾಥ ಎರಡನೆಯ ತರಗತಿಯಲ್ಲಿ, ನಾನು ಮೊದಲ ತರಗತಿಯಲ್ಲಿ ತೇರ್ಗಡೆ ಹೊಂದಿದೆವು.

ಪಾಟನಾ ಹೈಕೋರ್ಟು ಪ್ರಾರಂಭವಾದಾಗ ಅಲ್ಲಿಗೆ ಸ್ಥಳಾಂತರಿಸಿ ವಕೀಲಿಯನ್ನು ಮುಂದು-ವರಿಸಿದೆ. ವಕೀಲಿಯ ಕೆಲಸಗಳ ಜೊತೆಯಲ್ಲಿ ಸಾರ್ವಜನಿಕ ಚಟುವಟಿಕೆಗಳಲ್ಲಿಯೂ ಭಾಗವಹಿಸತೊಡಗಿದ್ದೆ. ನಾನು ಕಲಕತ್ತೆಯಲ್ಲಿರುತ್ತಿದ್ದಾಗ ಹಿಂದೀ ಸಮ್ಮೇಲನದ ಸಂಸ್ಥಾಪಕರಾದ ಅನೇಕ ಹಿಂದೀ ವಿದ್ವಾಂಸರ ಸಂಪರ್ಕ ಬಂದಿತ್ತು. ಅಖಿಲ ಭಾರತ ಸಮ್ಮೇಲನವೊಂದಿರಬೇಕೆಂದು ನಿರ್ಣಯವಾಗಿ ಮಾಲವೀಯರ ಅಧ್ಯಕ್ಷತೆಯಲ್ಲಿ ಬನಾರಸದಲ್ಲಿ ಮೊದಲ ಸಮ್ಮೇಲನ ಜರುಗಿತು. ಹೀಗಾಗಿ ಹಿಂದೀ ಸಮ್ಮೇಲನದೊಡನೆ ನನ್ನ ಸಂಪರ್ಕ ಮೊದಲಾದಂದಿನಿಂದ ಅದು ಬೆಳೆದು ಬಂದಿದೆ. ೧೯೧೨ ರಲ್ಲಿ ಕಲಕತ್ತೆಯಲ್ಲಿ ಬದ್ರೀನಾರಾಯಣ ಚೌಧುರಿಯವರ ಅಧ್ಯಕ್ಷತೆಯಲ್ಲಿ ಸೇರಿದ ಸಮ್ಮೇಳನದ ಕಾರ್ಯದರ್ಶಿಯಾಗಿ ಅಖಿಲ ಭಾರತ ಸಮ್ಮೇಲನವನ್ನು ಸಂಘಟಿಸುವ ಅನುಭವವನ್ನು ನಾನು ಪಡೆಯುವಂತಾಗಿತ್ತು. ೧೯೧೪ ರಲ್ಲಿ ಬಂಗಾಲ ಬಿಹಾರಗಳಲ್ಲಿ ನೆರೆಹಾವಳಿಯಿಂದ ವಿಪರೀತ ಕೇಡು ಸಂಭವಿಸಿದಾಗ ವಿದ್ಯಾರ್ಥಿ ಸಮ್ಮೇಲನದಿಂದ ಕಾರ್ಯಕರ್ತರನ್ನು ಕಲೆ ಹಾಕಿ ಪಾಟನಾದಲ್ಲಿ ಪರಿಹಾರ ಕಾರ್ಯವನ್ನು ಕೈಕೊಂಡೆ. ಇಡೀ ಹಗಲು ಪರಿಹಾರ ಕಾರ್ಯ ಮಾಡಿ ರಾತ್ರಿ ರೈಲು ನಿಲ್ದಾಣದಲ್ಲಿ ಬಂದು ಮಲಗಬೇಕಾಗುತ್ತಿತ್ತು. ಒಂದು ರಾತ್ರಿ ತೀರ ದಣಿದು ನಿದ್ರೆ ಹೋದ ನನ್ನ ಕಾಲುಗಳನ್ನು ನನ್ನ ಮಿತ್ರ ಶಂಭುಶರಣ ಒತ್ತುತ್ತಿದ್ದಾಗ ನನಗೆ ಎಚ್ಚರವಾದ ನೆನಹು ಇಂದಿಗೂ ಅಚ್ಚಳಿಯದೆ ಉಳಿದಿದೆ. ಹೀಗೆ ಪರಿಹಾರ ಕಾರ್ಯದಿಂದ ಮೊದಲಾದದ್ದೆ ಮುಂದೆ ಬಿಹಾರ ಸೇವಾ ಸಮಿತಿಯಾಗಿ ಬೆಳೆದು ನಿಂತಿತು ಎನ್ನುವುದೊಂದು ಹೆಮ್ಮೆಪಡಬೇಕಾದ ಸಂಗತಿಯೆ ಸರಿ.

## ಗಾಂಧೀಜಿಯ ಪ್ರಥಮ ಸಂದರ್ಶನ

೧೯೧೬ ರಲ್ಲಿ ಲಕ್ನೋದಲ್ಲಿ ಸೇರಿದ ಕಾಂಗ್ರೆಸ್ ಅಧಿವೇಶನ ಅನೇಕ ದೃಷ್ಟಿಯಿಂದ ಮಹತ್ವದ್ದು. ಕಾಂಗ್ರೆಸ್‌ನಲ್ಲಿಯ ಎಡಬಲ ಪಕ್ಷಗಳು ಒಂದಾದದ್ದು ಆಗ. ದಕ್ಷಿಣ ಆಫ್ರಿಕಾದಲ್ಲಿ ಸತ್ಯಾಗ್ರಹವನ್ನು ಯಶಸ್ವಿಯಾಗಿಸಿಕೊಂಡು ಹಿಂದಿರುಗಿದ ಗಾಂಧೀಜಿಯವರು ಕಾಂಗ್ರೆಸ್ ಅಧಿವೇಶನಕ್ಕೆ ಬಂದದ್ದು ಅದೇ ಬಾರಿ. ನಾನವರನ್ನು ಮೊದಲ ಬಾರಿ ನೋಡಿದ್ದು ಆಗ. ಪ್ರತ್ಯಕ್ಷ ಸಂಪರ್ಕ ಬರಲು ಇನ್ನೂ ಅವಕಾಶವಾಯಿತು. ಕಲಕತ್ತೆಯಲ್ಲಿ ಸೇರಿದ ಎ. ಆಯ್. ಸಿ. ಸಿ. ಸಭೆಯಲ್ಲಿ ಅವರ ಹತ್ತಿರವೇ ನಾನು ಕುಳಿತಿದ್ದರೂ ಎಲ್ಲರ ಹಾಗೆ ನಾನಾದರೂ ಅವರು ಕಾಂಗ್ರೆಸ್ ಕಾರ್ಯದರ್ಶಿಯಾಗಬೇಕೆಂದು ಬಯಸಿದ್ದರೂ ಅವರೊಡನೆ ಮಾತನಾಡಿರಲಿಲ್ಲ. ಲಕ್ನೋ ಅಧಿವೇಶನಕ್ಕೆ ಬಿಹಾರದಿಂದ ಅನೇಕರು ಬಂದಿದ್ದರೂ ನನ್ನ ಮಿತ್ರ ವ್ರಜಕಿಶೋರ ಪ್ರಸಾದ ಮತ್ತು ಚಂಪಾರನದಲ್ಲಿ ನೀಲಿ ಬೆಳೆಯುತ್ತಿದ್ದ ರೈತರ ಗೋಳನ್ನು ನಿವೇದಿಸಲೆಂದು ಬಂದ ರಾಜಕುಮಾರ ಶುಕ್ಲನೆಂಬ ಬಬ್ಬನು ಸಾಕಿಖ್ಯವಾಗಿದ್ದರು. ಅದೇ ಸ್ಥಾಪನೆಯಾಗಬೇಕಿದ್ದ ಪಾಟನಾ ವಿಶ್ವವಿದ್ಯಾಲಯ ಮಸೂದೆಯ ವಿರುದ್ಧ ಒಂದು ಗೊತ್ತುವಳಿಯನ್ನು, ಚಂಪಾರನದಲ್ಲಿಯ ಬಿಳಿಯ ವಸಾಹತುಗಾರರು ನಡಸಿದ ಸುಲಿಗೆಯ ವಿರುದ್ಧ ಇನ್ನೊಂದು ಗೊತ್ತುವಳಿಯನ್ನು ಅಧಿವೇಶನದಲ್ಲಿ ಮಂಡಿಸ

ಬೇಕಾಗಿತ್ತು. ಗೊತ್ತುವಳಿಗಳು ಅಂಗೀಕೃತ ವಾದವು. ಆದರೆ ಚಂಪಾರನದಲ್ಲಿಯ ಅತ್ಯಾಚಾರಗಳನ್ನು ಪ್ರತ್ಯಕ್ಷವಾಗಿ ತಾವು ನೋಡಿದಾಗಲೇ ಮುಂದಿನ ಕಾರ್ಯಕ್ರಮವನ್ನು ಕೈಕೊಳ್ಳುವುದೆಂದು ಗಾಂಧೀಜಿಯವರು ರಾಜಕುಮಾರನಿಗೆ ತಿಳಿಸಿದ ಪ್ರಕಾರ ಆತನೊಂದಿಗೆ ಅವರು ಪಾಟನಾಕ್ಕೆ ತೆರಳಿದರು.

ಈ ಕಾರ್ಯಕ್ರಮ ನನಗೆ ತಿಳಿಯದು. ನಾನು ಜಗನ್ನಾಥಪುರಿಗೆ ಹೊರಟು ಹೋದೆ. ರಾಜಕುಮಾರ ಗಾಂಧೀಜಿಯವರನ್ನು ಪಾಟನಾದಲ್ಲಿಯ ನಮ್ಮ ಮನೆಗೆ ಕರೆದುಕೊಂಡು ಹೋದ. ಅವರು ಒಬ್ಬ ಬಡ ಪಕ್ಷಕಾರನಿರಬೇಕೆಂದು ನನ್ನ ಆಳು ಗಾಂಧೀಜಿಯವರನ್ನು ಹೊರಗಿನ ಒಂದು ಕೋಣೆಯಲ್ಲಿರುವಂತೆ ಹೇಳಿದ. ಆದರೆ ಮಜಹರುಲ್ ಹಕ್‌ರು ಗಾಂಧೀಜಿಯವರನ್ನು ತಮ್ಮಲ್ಲಿಗೆ ಕರೆದುಕೊಂಡು ಹೋದರು. ಅವರೆಲ್ಲರೂ ಮುಜಪ್ಫರಪುರಕ್ಕೆ ತೆರಳಿದರು. ಗಾಂಧೀಜಿಯವರು ಚಂಪಾರನ ಅತ್ಯಾಚಾರಗಳ ಪರಿಶೀಲನೆಗಾಗಿ ಮುಂದುವರಿಯಬಾರದೆಂದು ಜಿಲ್ಹಾ ಮ್ಯಾಜಿಸ್ಟ್ರೇಟರು ಪ್ರತಿಬಂಧಕಾಜ್ಞೆಯನ್ನು ಹೊರಡಿಸಿದರು. ಅವರು ಅದನ್ನು ಪ್ರತಿಭಟಿಸಿದಾಗ ಅವರ ಮೇಲೆ ಕೇಸು ಹಾಕಲಾಯಿತು. ನಾನು ಪಾಟನಾಕ್ಕೆ ಹಿಂದಿರುಗಿದಾಗ ಗಾಂಧೀಜಿಯವರಿಂದ ನನಗೊಂದು ಸುದೀರ್ಘವಾದ ತಂತಿ ಬಂದಿತು. ದರಭಂಗಾದಿಂದ ವ್ರಜಕಿಶೋರ ಪ್ರಸಾದನನ್ನು ಬರಮಾಡಿಕೊಂಡು, ಅನುಗ್ರಹ ನಾರಾಯಣ ಸಿಂಹ ಮತ್ತು ಶಂಭು ಶರಣರೊಡನೆ ಗಾಂಧೀಜಿಯವರಿದ್ದ ಮೋತೀಹಾರಿಗೆ ಬಂದೆ. ಅವರ ಪ್ರಥಮ ದರ್ಶನದಿಂದ ನನ್ನ ಮೇಲೆ ವಿಶೇಷ ಪ್ರಭಾವವಾಗಲಿಲ್ಲ.

## ಚಂಪಾರನ

ಕೋರ್ಟಿನಲ್ಲಿ ಕೊಡಬೇಕಾಗಿದ್ದ ತಮ್ಮ ಹೇಳಿಕೆಯನ್ನು ಗಾಂಧೀಜಿಯವರು ಸಿದ್ಧಪಡಿಸುತ್ತಿದರು. ಇಂಗ್ಲಂಡಿನಿಂದ ಭಾರತಮಿತ್ರ ಎಚ್. ಎಸ್. ಪೋಲಕರು ಅಲ್ಲಿಗೆ ಬಂದಿದ್ದರು ಕೆಲವೊಂದು ವಿವರಗಳನ್ನು ನನಗೆ ಹೇಳಿ ಉಳಿದುದನ್ನೆಲ್ಲ ಧರಣೀಧರ ಮತ್ತು ರಾಮನವಮಿ ಅವರು ಹೇಳುತ್ತಾರೆಂದು ತಿಳಿಸಿ ಪೋಲಕ್‌ರವರೊಡನೆ ಮಾತಿಗೆ ತೊಡಗಿದರು. ಚಂಪಾರನದಲ್ಲಿ ಗಾಂಧೀಜಿಯವರಿಗೆ ಭಾಷೆಯ ತೊಂದರೆಯಾಗಬಹುದೆಂದು ವ್ರಜಕಿಶೋರ ಪ್ರಸಾದ ಆ ಇಬ್ಬರು ವಕೀಲರನ್ನು ಕಳುಹಿಸಿಕೊಟ್ಟಿದ್ದ. ಪೋಲೀಸರು ತಮ್ಮ ಮೇಲೆ ಕೇಸು ಹಾಕಿದ ಕೂಡಲೆ ಗಾಂಧೀಜಿಯವರು ಅವರಿಬ್ಬರನ್ನು ಕೇಳಿದ್ದರು: ತಾವು ಜೇಲಿಗೆ ಹೋದರೆ ಮುಂದೆ ಕೆಲಸದ ಗತಿ ಏನು ಎಂದು. ಕೆಲಸವನ್ನು ತಾವು ಮುಂದುವರಿಸುತ್ತೇವೆ ಎಂದು ಬಾಯಿಂದ ಹೇಳಿದ್ದರೂ ಆ ಆಶ್ವಾಸನದ ಇತ್ಯರ್ಥಗಳ ಬಗ್ಗೆ ಅವರು ತುಂಬಾ ಕಳವಳಕ್ಕೊಳಗಾಗಿದ್ದರು. ಬೇರೆ ಪ್ರಾಂತದಿಂದ ಬಂದು ಚಂಪಾರನದ ಕಿಸಾನರ ಬಗೆಯಲ್ಲಿ ದುಡಿದು ಜೇಲಿಗೆ ಹೋಗಲು ಗಾಂಧೀಜಿಯವರು ಸಿದ್ಧರಾಗಿದ್ದಾಗ ತಾವು ಹಿಂತೆಗೆದರೆ, ಅಥವಾ ಕೆಲಸವನ್ನು ನಿಲ್ಲಿಸಿದರೆ ತುಂಬ ಅನ್ಯಾಯವಲ್ಲದೆ ಪ್ರಾಂತಕ್ಕೆಯೆ ಅಗೌರವ. ಆದರೆ ಕೆಲಸವನ್ನು ಮುಂದುವರಿಸಬೇಕಾದರೆ ಎಲ್ಲವನ್ನೂ ಬಿಟ್ಟು ಅಲ್ಲಿಯೇ ಉಳಿಯಬೇಕು. ಜೇಲಿಗೆ ಹೋಗಬೇಕೂ ಆಗಬಹುದು.

ಮೋತಿಹಾರಿಗೆ ಬರುವಾಗ ಇಂಥ ಸಮಸ್ಯೆಯನ್ನು ಎದುರಿಸಬೇಕಾಗಬಹುದೆಂದು ನನಗೂ ತೋರಿರಲಿಲ್ಲ. ಆದರೆ ಒಂದು ನಿಲುಗಡೆಗೆ ಬರಲು ತಡವಾಗಲಿಲ್ಲ. ತಮಗೆ ಸಂಬಂಧವಿರದ ಚಂಪಾರನಕ್ಕೆ ಬಂದು ಗಾಂಧೀಜಿಯವರು ನಡೆದುಕೊಂಡ ರೀತಿಯಿಂದ ನಾವು ಪರಾವೃತ್ತರಾಗುವುದು ಸಾಧ್ಯವೇ ಇರಲಿಲ್ಲ. ಕೊನೆಗೆ ನಾವು ಮೂವರೂ ಎಂಥ ಪ್ರಸಂಗ ಬಂದರೂ ಕೆಲಸವನ್ನು ಮುಂದುವರಿಸುತ್ತೇವೆಂದು ಗಾಂಧೀಜಿಯವರಿಗೆ ಹೇಳಿದಾಗ ಅವರಿಗೆ ಹಿಡಿಸಲಾರದ ಸಂತೋಷ. "ಹಾಗಿದ್ದರೆ ವಿಜಯ ಖಂಡಿತ" ಎಂದು ಹೇಳಿ ಕಾರ್ಯಕರ್ತ

ರನ್ನು ಮೂರು ಗುಂಪುಗಳನ್ನಾಗಿ ಮಾಡಿ ತಾವು ಜೇಲಿಗೆ ಹೋದ ನಂತರ ಮೊದಲನೆಯ ಗುಂಪಿಗೆ ಮಜಹರುಲ್ ಹಕ್ ಅವರನ್ನು, ಎರಡನೆಯದಕ್ಕೆ ಬ್ರಜಕಿಶೋರ ಪ್ರಸಾದನನ್ನು, ಮೂರನೆಯದಕ್ಕೆ ನನ್ನನ್ನು ನಾಯಕನನ್ನಾಗಿ ನೇಮಿಸಿದರು. ಹೀಗಾಗಿ ಮೋತಿಹಾರಿಗೆ ಬಂದ ಕೆಲವು ಗಂಟೆಗಳಲ್ಲಿ ನಮ್ಮ ಬದುಕಿನಲ್ಲಿಯೆ ಒಂದು ಮಹತ್ತರವಾದ ಬದಲಾವಣೆಯುಂಟಾಯಿತು. ಗಾಂಧೀಜಿಯವರ ಸ್ಫೂರ್ತಿಯಿಂದ ಚಂಪಾರನದ ಕಿಸಾನರ ದುಃಖನಿವಾರಣೆಗಾಗಿ ಆಗ ನಾವು ಏನನ್ನೂ ಮಾಡಲು ಸಿದ್ಧರಾದೆವು.

ಚಂಪಾರನ ಸತ್ಯಾಗ್ರಹ ಮತ್ತು ಗಾಂಧೀಜಿಯವರು ಅಲ್ಲಿ ಮಾಡಿದ ಕ್ರಾಂತಿಯನ್ನು ಕುರಿತು ನಾನು ಬರೆದ "ಚಂಪಾರನಮೇ ಮಹಾತ್ಮಾ ಗಾಂಧೀ" ಗ್ರಂಥದಲ್ಲಿ ಸವಿಸ್ತರವಾಗಿ ಬರೆದಿದ್ದೇನೆ. ಅದನ್ನು ಇಲ್ಲಿ ಸ್ಥೂಲವಾಗಿ ವಿವರಿಸಬೇಕು.

ಚಂಪಾರನ ಜಿಲ್ಲೆಯಲ್ಲಿಯ ಬಿಳಿಯ ವಸಾಹತುಗಾರರು ನೀಲಿಯನ್ನು ಬೆಳೆಯುತ್ತಿದ್ದ ರೈತರನ್ನು ಪರಿಪರಿಯಾಗಿ ಶೋಷಿಸತೊಡಗಿದ್ದರು. ಸರಕಾರಕ್ಕೆ ಸಲ್ಲಬೇಕಿದ್ದ ತೆರಿಗೆಗಳನ್ನು ತಾವು ಒಟ್ಟಾಗಿ ಕೊಡುವಂತೆ ಗೊತ್ತುಮಾಡಿಕೊಂಡು ಒಂದು ಬಗೆಯ ರಾಜ್ಯವನ್ನೇ ಅವರು ಅಲ್ಲಿ ನಡೆಸಿದ್ದರು. ರೈತರು ಗುಲಾಮರಂತಾಗಿದ್ದರು.

ಪರಿಸ್ಥಿತಿಯ ಪರಿಶೀಲನೆಗೆ ಗಾಂಧೀಜಿಯವರು ಬಂದಿದ್ದಾರೆಂದು ತಿಳಿದ ಕೂಡಲೆ ಜಿಲ್ಲೆಯ ಮೂಲೆಮೂಲೆಗಳಿಂದ ತಮ್ಮ ಕಷ್ಟನಷ್ಟಗಳ ಕತೆಗಳನ್ನು ಹೊತ್ತುಕೊಂಡು ಕಿಸಾನರು ಬರತೊಡಗಿದರು. ವಸಾಹತುಗಾರರು ನಡೆಸುತ್ತಿದ್ದ ಅತ್ಯಾಚಾರಗಳನ್ನು, ಕೊಲೆಸುಲಿಗೆಗಳನ್ನು, ಶೋಷಣೆಗಳ ರೀತಿಗಳನ್ನು ಪರಿಪರಿಯಾಗಿ ವಿವರಿಸಿದರು. ಗಾಂಧೀಜಿಯವರ ಬರವಿನಿಂದ ಅವರಿಗೆ ಧೈರ್ಯ ಬಂದಿತ್ತು. ಅವರೆಲ್ಲರ ಹೇಳಿಕೆಗಳನ್ನು ನಾವು ಸಮಗ್ರವಾಗಿ ಬರೆದುಕೊಳ್ಳಬೇಕೆಂದು ಗಾಂಧೀಜಿ ಹೇಳಿದರು. ಹೆಜ್ಜೆಹೆಜ್ಜೆಗೆ ಸರಕಾರದವರು ಅಡ್ಡಿ ಆತಂಕಗಳನ್ನುಂಟುಮಾಡುತ್ತಿದ್ದರು. ಪೋಲೀಸರು, ಪ್ರತಿಬಂಧಕಾಜ್ಞೆಗಳು ನಿತ್ಯಕ್ರಮವಾದ ಹಾಗಿದ್ದವು. ಆದರೆ ಯಾವುದನ್ನೂ ಲೆಕ್ಕಿಸದೆ ಕೆಲಸ ಮುಂದುವರಿಯಿತು. ಮುಂದಿನ ಪರಿಣಾಮವೇನೇ ಆದರೂ ನಡೆದ ಈ ಪರಿಶೀಲನೆಯಿಂದ ಅಲ್ಲಿಯ ರೈತರಲ್ಲಿ ಹೊಸ ಉತ್ಸಾಹ ಮೂಡಿತ್ತು. ಧೈರ್ಯವಾಗಿ ಬಂದು ತಮ್ಮ ಹೇಳಿಕೆಗಳನ್ನು ಕೊಡುತ್ತಿದ್ದರು. ನಮ್ಮ ಕೆಲಸ ನಡೆಯದ ಹಾಗೆ ಬಿಳಿಯರು ಅನೇಕ ತಂತ್ರಗಳನ್ನು ಹೂಡುತ್ತಿದ್ದರು. ಒಂದು ಕಡೆಯಲ್ಲಿ ಒಬ್ಬ ವಸಾಹತುಗಾರ ತನ್ನ ಆಡಳಿತದಲ್ಲಿ ಎಲ್ಲವೂ ಸರಿಯಾಗಿದೆ ಎಂದು ತೋರಿಸಲೆಂದು ಒಂದು ನಾಟಕವನ್ನು ಹೂಡಿದ್ದ. ಹತ್ತಾರು ರೈತರನ್ನು ಬೆದರಿಸಿ ತಾವು ಸುಖವಾಗಿದ್ದೇವೆ ಎಂದು ಸಾರ್ವಜನಿಕವಾಗಿ ಅವರು ಹೇಳುವಂತೆ ಮಾಡಿದ್ದ. ಆದರೆ ಸಭೆಯ ಮಧ್ಯದಿಂದ "ಅದೆಲ್ಲ ಸುಳ್ಳು ಮಾತು, ಕಲಿಕೆಯ ಮಾತು" ಎಂದು ಕೂಗೆದ್ದು ಕುತಂತ್ರ ಬಯಲಾಯಿತು.

ನಮ್ಮ ಪರಿಶೀಲನೆ ಮುಂದುವರಿಯುತ್ತಿದ್ದ ಹಾಗೆ ವಸಾಹತುಗಾರರಿಗೆ, ಸರಕಾರದ ಅಧಿಕಾರಿಗೆ ಭಯವಾಯಿತು. ರೈತರ ಮೇಲಿನ ತಮ್ಮ ಹಿಡಿತ ಇಲ್ಲವಾಗುತ್ತಿದ್ದುದರ ಅರಿವು ಅವರಿಗಾಯಿತು. ಪ್ರಾಂತ ಸರಕಾರದ ವರೆಗೆ ದೂರುಗಳು ಹೋದವು. ಗಾಂಧೀಜಿಯವರು ಸರಕಾರಕ್ಕೆ ಒಂದು ತಾತ್ಪೂರ್ತಿಕವಾದ ವರದಿಯನ್ನೊಪ್ಪಿಸಿದರು. ನಮ್ಮ ಕೆಲಸ ನಡೆದೇ ಇತ್ತು. ಕೊನೆಗೆ ಗಾಂಧೀಜಿಯವರನ್ನೊಳಗೊಂಡ ಒಂದು ವಿಚಾರಣಾ ಸಮಿತಿಯನ್ನು ಗವರ್ನರರು ನೇಮಿಸಿದರು. ರೈತರ ಪರವಾಗಿ ಗಾಂಧೀಜಿಯವರು ನಾವು ಸಂಗ್ರಹಿಸಿದ ವಿವರಗಳ ಮೇಲಿಂದ ಹೇಳಿಕೆಯನ್ನು ಸಾದರಪಡಿಸಿದರು. ಸಮಿತಿಯ ಶಿಫಾರಸುಗಳು ಒಮ್ಮತದವಾದರೆ ಪರಿಹಾರ ಬೇಗನೆ ಸಿಕ್ಕುತ್ತದೆಂದು ಹಾಗೆಯೆ ವರದಿಯನ್ನು ಸಿದ್ಧಪಡಿಸಿ ಸರಕಾರಕ್ಕೆ ಒಪ್ಪಿಸಲಾಯಿತು ತಿಂಗಳು

ಗಟ್ಟಲೆ ನಡೆದ ಈ ವಿಚಾರಣೆಯ ಪರಿಣಾಮವಾಗಿ ರೈತರಿಗೆ ಕೆಲವೊಂದು ಪರಿಹಾರ ದೊರಕಿತು. ಅವರ ಎಲ್ಲ ಬೇಡಿಕೆಗಳಿಗೆ ಸಮಾಧಾನ ಸಿಕ್ಕದಿದ್ದರೂ ಅವರ ಸಂಘಟಿತ ಸಾಮರ್ಥ್ಯದ ಮತ್ತು ಅವರಲ್ಲಿ ಹೊಸದಾಗಿ ಮೂಡಿದ ಧೈರ್ಯದ ಎದುರು ವಸಾಹತುಗಾರರಿಗೆ ಅಲ್ಲಿ ಬಹುಕಾಲ ಉಳಿಗಾಲವಿಲ್ಲ ಎನ್ನುವುದು ಸ್ಪಷ್ಟವಾಯಿತು. ಹೀಗೆಂದೇ ಚಂಪಾರನ ಸತ್ಯಾಗ್ರಹ ಮುಂದಿನ ಸತ್ಯಾಗ್ರಹಗಳಿಗೊಂದು ಮುನ್ನುಡಿಯಾದಂತಾಯಿತು. ಸತ್ಯಾಗ್ರಹತಂತ್ರದ ಸಾಮರ್ಥ್ಯ-ಸಾಧ್ಯತೆಗಳ ದಿಗ್ದರ್ಶನ ನಮಗೆಲ್ಲರಿಗೂ ಆಯಿತು.

## ಗಾಂಧೀ ಪ್ರಭಾವ

ಗಾಂಧೀಜಿಯವರ ಜೊತೆಯಲ್ಲಿ ಅನುದಿನವೂ ಕೆಲಸ ಮಾಡುತ್ತಿದ್ದ ಹಾಗೆ ನಮ್ಮ ಜೀವನ ಕ್ರಮವೇ ಬದಲಾಯಿತು. ಜಾತಿಮತಪಂಥಗಳ ನಿರ್ಬಂಧಗಳನ್ನು ಪಾಲಿಸುತ್ತಿದ್ದ ನಾನು ಅವನ್ನು ಬಿಟ್ಟುಕೊಡುವಂತಾಯಿತು. ಒಂದೇ ಉದ್ದೇಶದಿಂದ ಪ್ರೇರಿತರಾದವರೆಲ್ಲ ಒಂದೇ ಜಾತಿ ಎಂದು ಗಾಂಧೀಜಿಯವರು ಹೇಳುತ್ತಿದ್ದರು. ನಮ್ಮ ಕೆಲಸಗಳನ್ನು ನಾವೇ ಮಾಡಿಕೊಳ್ಳುವುದು; ಅನಗತ್ಯವಾದ ಅನುಕೂಲಗಳನ್ನು ಬಿಟ್ಟುಕೊಡುವುದು; ಮೂರನೆಯ ವರ್ಗದಲ್ಲಿಯೆ ಪ್ರವಾಸ ಮಾಡುವುದು ಮುಂತಾದ ಬದಲಾವಣೆಗಳನ್ನು ನಾವು ಮರುಯೋಚನೆ ಇಲ್ಲದೆ ಅಂಗೀಕರಿಸಿದೆವು.

ಚಂಪಾರನದಲ್ಲಿ ಗಾಂಧೀಜಿಯವರ ಜೊತೆಯಲ್ಲಿ ಕೆಲಸ ಮಾಡಹೋದ ನಾವೆಲ್ಲರೂ ವಕೀಲರು; ಆ ವೃತ್ತಿಯನ್ನು ಬಿಟ್ಟುಕೊಡಬೇಕಾಗಬಹುದೆಂದು ಕನಸುಮನಸ್ಸಿನಲ್ಲಿಯೂ ಇರಲಿಲ್ಲ. ಆದರೆ ಕೆಲಸ ಮುಗಿದು ನಾವು ಹಿಂದಿರುಗಿದಾಗ ಆ ವೃತ್ತಿಯಲ್ಲಿ ಆಸ್ಥೆ ಉಳಿದಿರಲಿಲ್ಲ. ನಮ್ಮ ದೃಷ್ಟಿ ಬದಲಾಗಿತ್ತು. ಬೇರೆ ಯೋಚನೆಗಳು ಮನಸ್ಸನ್ನಾವರಿಸಿದ್ದವು. ಬೇರೆ ಕನಸುಗಳನ್ನು ಕಾಣುತ್ತಿದ್ದೆವು. ಹತ್ತು ತಿಂಗಳ ನಂತರ ಹಿಂದಿರುಗಿ ಮತ್ತೆ ನನ್ನ ವಕೀಲಿಯನ್ನಾರಂಭಿಸಿದೆ. ಸತ್ಯಾಗ್ರಹದ ತತ್ವ ಪೂರ್ತಿಯಾಗಿ ನನ್ನ ಮೇಲೆ ಪರಿಣಾಮ ಮಾಡಿತ್ತು. ಸುಳ್ಳು ಕೇಸುಗಳನ್ನು ಹಿಡಿಯುತ್ತಿರಲಿಲ್ಲ. ಎದುರಾಳಿಗೆ ಸಮಗ್ರವಾಗಿ ಅವಕಾಶ ಕೊಟ್ಟು ನನ್ನ ಕೇಸಿನ ಸಮರ್ಥನೆ ಮಾಡಿಕೊಳ್ಳುತ್ತಿದ್ದೆ. ಎಷ್ಟೋ ಸಲ ಕೆಲವು ಇಂಗ್ಲೀಷ್ ನ್ಯಾಯಾಧೀಶರು ಎದುರಾಳಿಯ ಪರವಾಗಿ ಹೇಗೆ ವಾದಿಸಬಹುದು ಎಂದು ಕೇಳುತ್ತಿದ್ದರು. ಅದನ್ನು ವಿವರಿಸಿ ಆಮೇಲೆ ನನ್ನ ಪರವಾಗಿ ಹೇಳಬಹುದಾದದ್ದನ್ನು ಹೇಳುತ್ತಿದ್ದೆ. ಗಾಂಧೀಜಿಯವರ ಪ್ರಭಾವ ನನ್ನ ಮೇಲೆ ಅಷ್ಟಾಗಿತ್ತು!

ಮುಂದೆ ಬ್ರಿಟಿಶ್ ಸರಕಾರ ಮೊಂಟೆಗೂ-ಚೆಮ್ಸಫೋರ್ಡ ಸುಧಾರಣೆಗಳನ್ನು ಸಾರಿದಾಗ ಅವುಗಳ ಬಗೆಯಲ್ಲಿ ಮುಖಂಡರಲ್ಲಿ ಭಿನ್ನಾಭಿಪ್ರಾಯದ ಧೋರಣೆಗಳು ತಲೆದೋರಿದವು. ಆ ಪ್ರಯೋಗವನ್ನು ಮಾಡಿ ನೋಡಬಾರದೇಕೆ ಎನ್ನುವ ಅಭಿಪ್ರಾಯ ನನ್ನದಾಗಿತ್ತು. ಆ ದೃಷ್ಟಿಯಿಂದ ಪ್ರಾಂತಸಭೆಯ ಚುನಾವಣೆಯಲ್ಲಿ ಭಾಗವಹಿಸಬೇಕೆಂದು ಯೋಚಿಸಿದ್ದೆ. ಆದರೆ ಯುದ್ಧಕಾಲದಲ್ಲಿಯ ಹಾಗೆಯೆ ಜನತೆಯನ್ನು ಹಿಡಿತದಲ್ಲಿಟ್ಟುಕೊಳ್ಳುವ ದೃಷ್ಟಿಯಿಂದ ಮತ್ತು ರಾಜಕೀಯ ಆಂದೋಲನವನ್ನು ಹತ್ತಿಕ್ಕುವ ದೃಷ್ಟಿಯಿಂದ ಯೋಜಿಸಲ್ಪಟ್ಟ ರೌಲಟ್ ಕಾನೂನಿನ ವಿರುದ್ಧ ದೇಶದಾದ್ಯಂತವೂ ಪ್ರತಿಭಟನೆಗೆ ಪ್ರಾರಂಭವಾಯಿತು. ಜಾಲಿಯನ್‌ವಾಲಾದ ದುರಂತ ದೇಶವನ್ನು ರೇಗಿಸಿತು. ಕಲಕತ್ತಾ ಅಧಿವೇಶನದಲ್ಲಿ ದೇಶದಾದ್ಯಂತವೂ ಸತ್ಯಾಗ್ರಹವನ್ನಾಚರಿಸತಕ್ಕದ್ದೆಂದು ನಿರ್ಣಯವಾಯಿತು.

ಈ ಪರಿಸ್ಥಿತಿಯಲ್ಲಿ ನಾನು ಚುನಾವಣೆಗಳ ಯೋಚನೆಯನ್ನೂ ವಕೀಲಿಯ ವೃತ್ತಿಯನ್ನೂ ಬಿಟ್ಟುಕೊಟ್ಟು ಕಾಂಗ್ರೆಸ್ ಕಾರ್ಯಕ್ರಮದಲ್ಲಿ ಭಾಗವಹಿಸುವುದೆಂದು ನಿರ್ಣಯಿಸಿದೆ. ಇದಕ್ಕನುಸಾರವಾಗಿ ಕೈಯಲ್ಲಿದ್ದ ಕೇಸುಗಳನ್ನು ಕೊನೆಗಾಣಿಸುವುದೆಂದೂ ಹೊಸದಾಗಿ ಕೇಸು

ಗಳನ್ನು ತೆಗೆದುಕೊಳ್ಳುವ ಹಾಗಿಲ್ಲವೆಂದೂ ಸರಕಾರದ ಸಂಬಂಧವಿದ್ದ ಸಂಸ್ಥೆಗಳಿಂದ ದೂರವಾಗುವುದೆಂದೂ ಗೊತ್ತುಮಾಡಿದೆ.

ಕೆಲ ಕಾಲದಿಂದ ನಾನು ಪಾಟ್ನಾ ವಿಶ್ವವಿದ್ಯಾಲಯದ ಸಿನೇಟ ಮತ್ತು ಸಿಂಡಿಕೇಟಿನ ಸದಸ್ಯನಾಗಿದ್ದೆ. ಅವಕ್ಕೆ ರಾಜೀನಾಮೆಯನ್ನು ಕೊಟ್ಟೆ.

ಸತ್ಯಾಗ್ರಹ ಕಾರ್ಯಕ್ರಮದ ಅಂಗವಾಗಿ ದೇಶೀಯ ವಿದ್ಯಾಸಂಸ್ಥೆಗಳನ್ನು ಸ್ಥಾಪಿಸಬೇಕಾಗಿದ್ದಿತು. ಆದ್ದರಿಂದ ಮುಂದೆ ಕೆಲವು ಕಾಲ ನಾನು ಬಿಹಾರ ವಿದ್ಯಾಪೀಠದ ಸ್ಥಾಪನೆಗಾಗಿ ಹೆಣಗಿದೆ. ಗಾಂಧೀಜಿಯವರು ಬಿಹಾರದಲ್ಲಿ ಸಂಚಾರ ಮಾಡಿ ಐವತ್ತು ಸಾವಿರ ರೂಪಾಯಿ ಕಲೆ ಹಾಕಿ ಕೊಟ್ಟರು. ಮಜಹರುಲ್ ಹಕ್‌ರನ್ನು ಉಪಕುಲಪತಿಗಳನ್ನಾಗಿ ಮಾಡಿ ವಿದ್ಯಾಪೀಠವನ್ನು ಗಾಂಧೀಜಿಯವರೇ ಉದ್ಘಾಟಿಸಿದರು. ಅದೇ ಕಾಲಕ್ಕೆ ಪಾಟ್ನಾ ಎಂಜನಿಯರಿಂಗ್ ಸ್ಕೂಲಿನ ವಿದ್ಯಾರ್ಥಿಗಳು ಸಂಪು ಹೂಡಿ ತೊಂದರೆಗೊಳಗಾಗಿದ್ದರು. ಮಜಹರುಲ್ ಹಕ್‌ರು ತಮಗಾಗಿ ಗಂಗಾತೀರದಲ್ಲಿ ಕಟ್ಟಿಸುತ್ತಿದ್ದ ಭವ್ಯ ಬಂಗಲೆಯನ್ನು ವಿದ್ಯಾರ್ಥಿಗಳ ವಸತಿಗೃಹವನ್ನಾಗಿಸಿ "ಸದಾಕತ್ ಆಶ್ರಮ"ವನ್ನು ಪ್ರಾರಂಭಿಸಿದರು. ಹಿಂದು ಮುಸ್ಲಿಂ ಐಕ್ಯಕ್ಕಾಗಿ ಜೀವನವನ್ನೇ ಮುಡಿಪಾಗಿಸಿ ದುಡಿಯುತ್ತಿದ್ದ ಹಕ್ಕರು ಆಶ್ರಮದಲ್ಲಿಯೆ ಬಂದು ಇರತೊಡಗಿದರು.

ನಾಗಪುರ ಕಾಂಗ್ರೆಸ್ ಅಧಿವೇಶನದಲ್ಲಿ ಸತ್ಯಾಗ್ರಹದ ಕಾರ್ಯಕ್ರಮ ನಿಶ್ಚಿತವಾಯಿತು. ಈ ಕಾರ್ಯಕ್ರಮವನ್ನು ಕಾರ್ಯಗತವಾಗಿಸುವ ಸಿದ್ಧತೆಗಳನ್ನು ಬಿಹಾರದಲ್ಲಿ ಮಾಡುವುದೆಂದು ನಾನು ಪ್ರಾಂತದಾದ್ಯಂತವೂ ಸಂಚಾರವನ್ನು ಕೈಕೊಂಡೆ. ಕೆಲವೆಡೆಯಲ್ಲಿ ವಿರೋಧ - ವಿಮರ್ಶೆ ಕಂಡುಬರುತ್ತಿದ್ದರೂ ಚಂಪಾರನದ ಯಶಸ್ಸಿನಿಂದ ಜನ ಉತ್ಸಾಹಿತರಾಗಿದ್ದರು. ವಸಂತಪುರ ದೆಂಬಲ್ಲಿ ಸತ್ಯಾಗ್ರಹ ಪ್ರಾರಂಭಮಾಡುವುದೆಂದೂ ಗೊತ್ತಾಗಿತ್ತು.

ಕಾಂಗ್ರೆಸಿನ ಆದೇಶದ ಮೇರೆಗೆ ನನ್ನ ಮತ್ತು ನನ್ನ ಅಣ್ಣನ ಮಕ್ಕಳನ್ನು ಸರಕಾರೀ ಶಾಲೆಗಳಿಂದ ಬಿಡಿಸಲಾಯಿತು. ಅಣ್ಣನ ಮಗನಾದ ಜನಾರ್ದನನನ್ನು ಕೀರ್ತ್ಯಾನಂದ ಕಬ್ಬಿಣ ಕಾರಖಾನೆಗೆ ಸೇರಿಸಲಾಯಿತು. ಮೃತ್ಯುಂಜಯ ಬಿಹಾರ ವಿದ್ಯಾಪೀಠವನ್ನು ಸೇರಿದ. ಜನಾರ್ದನ ಮುಂದೆ ಶಿಷ್ಯವೃತ್ತಿಯನ್ನು ಪಡೆದು ಲೋಹಶಾಸ್ತ್ರದ ಅಭ್ಯಾಸವನ್ನು ಲಂಡನ್‌ನಲ್ಲಿ ಮುಂದುವರಿಸಿದ. ಮೃತ್ಯುಂಜಯ ವಿದ್ಯಾಪೀಠದ ಪದವಿಯನ್ನು ಪಡೆದ. ಧನಂಜಯನನ್ನು ಛಪರಾ ರಾಷ್ಟ್ರೀಯ ಶಾಲೆಯಲ್ಲಿ ಸೇರಿಸಲಾಯಿತು. ಹೀಗಾಗಿ ನಮ್ಮ ಮನೆತನದ ಮಟ್ಟಿಗೆ ಕಾಂಗ್ರೆಸ್ ಕಾರ್ಯಕ್ರಮವನ್ನು ಪೂರ್ತಿಯಾಗಿ ಕಾರ್ಯಗತಗೊಳಿಸಲಾಯಿತು.

ದೇಶದಲ್ಲಿ ಎಲ್ಲ ಕಡೆಯಲ್ಲಿಯೂ ಸತ್ಯಾಗ್ರಹದ ಸಿದ್ಧತೆಗಳು ಭರದಿಂದ ಸಾಗಿದ್ದವು. ಪ್ರಿನ್ಸ್ ಆಪ್ ವೇಲ್ಸರು ಭಾರತಕ್ಕೆ ಬರುವರೆಂಬ ಸುದ್ದಿ ಪ್ರತಿಭಟನೆಯನ್ನು, ಹರತಾಳಗಳನ್ನು ಕೆರಳಿಸಿತು. ಅಹಮದಾಬಾದ ಅಧಿವೇಶನದಲ್ಲಿ ಸತ್ಯಾಗ್ರಹಕ್ಕೆ ಕರೆ ಕೊಡುವರೆಂದು ನಿರೀಕ್ಷಿಸಲಾಗಿತ್ತು. ಮೊದಲಿಗೆ ಲೋಕಮಾನ್ಯರ ನಿಧನ ಆಮೇಲೆ ಚೌರಿಚೌರಾ ಎಂಬಲ್ಲಿ ನಡೆದ ದುರ್ಘಟನೆಯಿಂದಾಗಿ ಸತ್ಯಾಗ್ರಹದ ಕಾರ್ಯಕ್ರಮವನ್ನು ನಿಧಾನವಾಗಿ ಮುಂದೂಡಲಾಯಿತು. ಹುರಿಗೊಂಡ ಜನತೆಗೆ ಕೆಲಮಟ್ಟಿಗೆ ನಿರಾಶೆಯಾಯಿತು. ಆದರೆ ಪೂರ್ತಿಯಾಗಿ ಅಹಿಂಸೆಯನ್ನವಲಂಬಿಸದೆ ಸತ್ಯಾಗ್ರಹವನ್ನು ಪ್ರಾರಂಭಿಸುವ ಹಾಗಿಲ್ಲ ಎಂದು ಗಾಂಧೀಜಿಯವರು ಹಟಹಿಡಿದರು. ಅಲ್ಲಲ್ಲಿ ಪ್ರತಿಭಟನೆ, ಹರತಾಳ, ಧ್ವಜವಂದನೆಗಳು ನಡೆಯುತ್ತಿದ್ದರೂ ಸಾರ್ವತ್ರಿಕವಾದ ಸತ್ಯಾಗ್ರಹಕ್ಕಾಗಿ ಆದೇಶ ಬರಲೇ ಇಲ್ಲ. ಇದರ ಪರಿಣಾಮವಾಗಿ ಕಾಂಗ್ರೆಸ್ಸಿಗರಲ್ಲಿಯೆ ಗುಂಪುಗಳು ಹುಟ್ಟಿಕೊಂಡು ಕೌನ್ಸಿಲ್ ಚುನಾವಣೆಗಳಲ್ಲಿ ಭಾಗವಹಿಸಬೇಕು-ಬಾರದು ಎಂದು ಪ್ರತಿಪಾದಿಸುವ ಪಂಗಡಗಳಿಗೆ ಅನುವಾಯಿತು.

ಇದಕ್ಕೆ ಸರಿಸಮನಾಗಿ ಹಿಂದೂ ಮುಸ್ಲಿಂ ಮೈತ್ರಿಯು ಶಿಥಿಲವಾಗುತ್ತ ನಡೆದಿತ್ತು. ಮುಲ್ತಾನದಲ್ಲಿ ಭಯಂಕರವಾದ ಗಲಭೆಯಾಗಿತ್ತು.

ದಿಲ್ಲಿಯಲ್ಲಿ ಇನ್ನಿತರ ಕಡೆಗಳಲ್ಲಿ ಅದೇ ಕತೆ ಪುನರವತರಿಸಿತ್ತು. ಹೀಗಾಗಿ ಕಾಂಗ್ರೆಸಿನ ಆದೇಶದ ಪ್ರಕಾರ ಖಾದಿ ಪ್ರಚಾರದಂಥ ರಚನಾತ್ಮಕ ಕೆಲಸಗಳನ್ನು ಮಾಡಿಕೊಂಡು ಹೋಗುವುದರ ಹೊರತು ಬೇರೆ ದಾರಿ ನಿಷ್ಠಾವಂತ ಕಾರ್ಯಕರ್ತರಿಗೆ ಉಳಿದಿರಲಿಲ್ಲ.

## ಖಾದಿ ಕಾರ್ಯ

ಈ ಕಾಲದಲ್ಲಿ ನಾನು ತೊಡಗಿಕೊಂಡ ಮುಖ್ಯ ಕಾರ್ಯವೆಂದರೆ ಖಾದೀ ಪ್ರಚಾರ ಮತ್ತು ಅದರ ಉತ್ಪಾದನ ಕೇಂದ್ರಗಳ ಸಂಘಟನೆ. ಅದರ ಜೊತೆಯಲ್ಲಿ ಉಳಿದ ಅನೇಕ ಕೆಲಸಗಳೂ ನಡೆಯುತ್ತಿದ್ದವು. ಛಪರಾ ಜಿಲ್ಲೆಯಲ್ಲಿ ನೆರೆಹಾವಳಿಯಿಂದ ಸಂತ್ರಸ್ತರಾದವರಿಗೆ ಪರಿಹಾರವನ್ನು ಒದಗಿಸುವುದಾಯಿತು. ಮಹಾತ್ಮರ ಅಭ್ಯಂತರವಿಲ್ಲದ್ದರಿಂದ ಪಾಟ್ನಾ ನಗರಸಭೆಯ ಕಾರ್ಯಾಧ್ಯಕ್ಷನಾಗಿ ಒಂದೆರಡು ಸುಧಾರಣೆಗಳನ್ನು ಮಾಡಲು ಸಾಧ್ಯವಾಯಿತು. ಮುಖ್ಯವಾಗಿ ಊರಲ್ಲಿಯ ಹೊಲಸು ಚರಂಡಿಗಳಿಂದ ಮತ್ತು ತಗ್ಗು ಪಾಯಖಾನೆಗಳಿಂದ ಬಾವಿಗಳ ನೀರು ಮಲಿತುಹೋಗಿತ್ತು. ಕುಡಿಯುವ ನೀರನ್ನು ನದಿಯಿಂದ ತರಬೇಕಾಗುತ್ತಿತ್ತು. ನಳದ ಯೋಜನೆಯನ್ನು ಸಿದ್ಧಪಡಿಸಿದರೆ ಪ್ರತಿಗಾಮಿ ಶಕ್ತಿಗಳು ಎದುರಾಗುತ್ತಿದ್ದವು. ಹೊಲಸು ಕೇರಿಗಳ ಸುಧಾರಣೆಯನ್ನು ಮಾಡುವ ಮತ್ತು ಹರಿಜನರ ಸ್ಥಿತಿಗತಿಗಳನ್ನು ಸುಧಾರಿಸುವ ಕಾರ್ಯ ಕೆಲಮಟ್ಟಿಗೆ ಸಾಧ್ಯವಾಯಿತು. ಯಾವುದಕ್ಕೂ ಹಣದ ಅಡಚಣೆಯುಂಟಾಗುತ್ತಿತ್ತು. ಹೊಸದಾದ ಕರಭಾರಕ್ಕೆ ಸದಸ್ಯರು ಒಪ್ಪುತ್ತಿರಲಿಲ್ಲ. ವಾದ್ದರಿಂದ ಹೆಜ್ಜೆಹೆಜ್ಜೆಗ ಕೆಲಸ ಕುಂಠಿತವಾಗುತ್ತಿತ್ತು. ಒಟ್ಟಿನಲ್ಲಿ ಪಾಟ್ನಾ ನಗರಸಭೆಯ ನನ್ನ ಅಧಿಕಾರಾವಧಿಯಲ್ಲಿ ಸಾಧ್ಯವಾದ ಒಂದು ಕೆಲಸವೆಂದರೆ ಊರಿಗೆ ವಿದ್ಯುದ್ದೀಪಗಳನ್ನು ಒದಗಿಸಿದ್ದು. ದೀಪಗಳು ಬೆಳಗಿದ್ದು ನಾನು ಅಧಿಕಾರತ್ಯಾಗ ಮಾಡಿದ ಮೇಲಾದರೂ ಅದರ ಎಲ್ಲ ಪೂರ್ವಸಿದ್ಧತೆಗಳನ್ನು ನಾನಿರುವಾಗಲೆ ಮಾಡಲಾಗಿತ್ತು.

ಖಾದೀ ಕೆಲಸದ ಸಂಘಟನೆಯಲ್ಲಿ ನನಗೆ ತುಂಬ ಆಸ್ಥೆಯಾದ್ದರಿಂದ ಆ ಕೆಲಸಕ್ಕಾಗಿ ಅನೇಕ ಕಡೆಗಳಲ್ಲಿ ಪ್ರವಾಸ ಮಾಡಿ ಪ್ರಚಾರ ಮಾಡಿದೆ. ಆಸಾಮ ಪ್ರಾಂತದಲ್ಲಿಯ ಪ್ರವಾಸದ ಫಲವಾಗಿ ಅಲ್ಲಿ ಖಾದಿಯ ಪ್ರಚಾರವನ್ನು ತುಂಬ ಯಶಸ್ವಿಯಾಗಿ ಮಾಡಲು ಸಾಧ್ಯವಾಯಿತು. ಆಂಧ್ರ, ತಮಿಳುನಾಡಿನಲ್ಲಿ ಪ್ರಚಾರ ಮಾಡುತ್ತಿದ್ದಾಗಿನ ನನ್ನ ಭಾಷಣಗಳನ್ನು ಪುಸ್ತಕರೂಪವಾಗಿ ಪ್ರಕಟಿಸಲಾಯಿತು. ಅನೇಕ ಕಡೆಗಳಲ್ಲಿ ಖಾದೀ ಪ್ರದರ್ಶನಗಳ ಏರ್ಪಾಡುಗಳನ್ನು ಮಾಡಿ ಅದನ್ನು ಜನಪ್ರಿಯವಾಗಿಸುವ ಯತ್ನಗಳನ್ನು ಮಾಡಿದೆ. ಗಯಾ, ಜಮಶೆಡಪುರಗಳಲ್ಲಿಯ ಪ್ರದರ್ಶನಗಳು ವಿದೇಶೀಯರ ಲಕ್ಷ್ಯವನ್ನೂ ಸೆಳೆಯುವಂತಾಗಿದ್ದವು. ಇದರ ಪರಿಣಾಮವಾಗಿ ಕಾಂಗ್ರೆಸ್ ಅಧಿವೇಶನದ ಜೊತೆಯಲ್ಲಿ ಹೆಚ್ಚುಕಡಿಮೆ ಯಾವಾಗಲೂ ಖಾದೀ ಪ್ರದರ್ಶನದ ಏರ್ಪಾಡಾಗುವ ಪದ್ಧತಿಯೆ ಪ್ರಚಾರದಲ್ಲಿ ಬಂದ ಹಾಗಾಗಿತ್ತು. ಈ ಕಾರ್ಯದಲ್ಲಿ ಮುಖ್ಯವಾಗಿ ಸಂಘಟನೆಯ ದೋಷಗಳು, ಲೆಕ್ಕಪತ್ರದ ಗೊಂದಲಗಳಿಂದಾಗಿ ಯಾವಾಗಲೂ ತೊಂದರೆಯಾಗುತ್ತಿತ್ತು. ಈ ದೋಷಗಳನ್ನು ತಡೆಯಲೆಂದೆ ಅಖಿಲ ಭಾರತ ಚರಖಾ ಸಂಘವು ಸ್ಥಾಪಿತವಾಗಿ ಬಿಹಾರ ಪ್ರಾಂತದ ಮಟ್ಟಿಗೆ ನಾನು ಅದರ ಪ್ರತಿನಿಧಿಯಾಗಿ ನೇಮಿಸಲ್ಪಟ್ಟೆ. ಸ್ವರಾಜ್ಯ ಫಂಡಿನಿಂದ ಧನಸಹಾಯ ಪಡೆದು ಮಧುಬನಿ ಎಂಬಲ್ಲಿ ಒಂದು ಖಾದೀ ಉತ್ಪಾದನಾ ಕೇಂದ್ರವನ್ನು ತೆರೆದು ಯಶಸ್ವಿಯಾಗಿ ನಡೆಸಿಕೊಂಡು ಬರಲು ಸಾಧ್ಯವಾಯಿತು.

ಖಾದೀ ಪ್ರಚಾರದಲ್ಲಿ ನಾನು ತೊಡಗಿದಾಗಿನ ಒಂದು ಸಂಗತಿ ನನ್ನ ಮನಸ್ಸಿನಲ್ಲಿ ಅಚ್ಚಳಿಯದೆ ಉಳಿದಿದೆ. ಸಾರನ ಜಿಲ್ಲೆಯ ಬಖನಸಿಂಗ ಎಂಬವ ಖಾದೀ ಭಕ್ತ. ಆಸ್ತಿಪಾಸ್ತಿಗಳನ್ನು

ಕಳೆದುಕೊಂಡು ಬಡವನಾಗಿದ್ದರಿಂದ ಚರಖಾ ಸಂಘದವರು ಆತನಿಗೆ ಕೆಲಸವನ್ನು ಒದಗಿಸಿ ಕೊಟ್ಟಿದ್ದರು. ಕ್ರಮವಾಗಿ ಆತನಿಗೆ ಚಿತ್ತ ಭ್ರಮೆಯಾಗಿ ನೂಲುವಾಗ ಹಾಡುವುದರಿಂದ ಮೊದಲಾಗಿ ಹೆಚ್ಚುಕಡಿಮೆ ಹುಚ್ಚು ಹಿಡಿದ ಹಾಗಾಯಿತು. ತನಗೆ ಹಾವು ಕಡಿಯುತ್ತದೆ ಎಂಬ ಭ್ರಮೆ ಆತನನ್ನು ಯಾವಾಗಲೂ ಕಾಡುತ್ತಿತ್ತು. ಆತನ ಚೀರಾಟ ಕೂಗಾಟಗಳ ಮೂಲಕ ಆತನನ್ನು ಒಂದೊಂದು ಸಲ ಕೋಣೆಯಲ್ಲಿ ಬಂಧಿಸಬೇಕಾಗುತ್ತಿತ್ತು. ಹೀಗೆ ಒಮ್ಮೆ ಆತನನ್ನು ಬಂಧಿಸಿದಾಗ ಒಳಗಿನಿಂದ ಹಾವು ಹಾವು ಎಂದು ಕೂಗಾಟಕ್ಕೆ ಪ್ರಾರಂಭಿಸಿದ. ಅದೇನೂ ಹೊಸದಾಗಿರಲಿಲ್ಲವಾದ್ದರಿಂದ ಕೆಲ ಹೊತ್ತು ಯಾರೂ ಲಕ್ಷ ಕೊಡಲಿಲ್ಲ. ಆದರೆ ಕೂಗಾಟ ತೀರ ಹೆಚ್ಚಾದ್ದರಿಂದ ಬಾಗಿಲು ತೆರೆದು ನೋಡಿದಾಗ ಆತ ನಿಜವಾಗಿಯೂ ಒಂದು ದೊಡ್ಡ ನಾಗರ ಹಾವಿನೊಡನೆ ಗುದ್ದಾಡುತ್ತಿದ್ದ. ಹಾವು ಆತನನ್ನು ಕಚ್ಚಿತ್ತು. ಆದರೆ ತಾನು ಸಾಯುವ ಮೊದಲು ಹಾವನ್ನು ಹಿಚುಕಿ ಕೊಂದಿದ್ದ.

ಗಂಡ ನಿಧನವಾದಾಗ ಆತನ ಹೆಂಡತಿ ರಾಮಸೂರತ ಸತಿ ಹೋಗಬೇಕೆಂದಳು. ಅದನ್ನು ತಪ್ಪಿಸಲೆಂದು ಆಕೆಯನ್ನು ಕೋಣೆಯಲ್ಲಿ ಬಂಧಿಸಬೇಕಾಗಿ ಬಂದಿತು. ಮೂರು ದಿನ ಸುಮ್ಮನಾಗಿಯೆ ಇದ್ದಳು. ನಾಲ್ಕನೆಯ ದಿನ ಆಕೆಯ ಸುಳಿವೇ ಕೇಳಲಿಲ್ಲ. ಬಾಗಿಲು ತೆರೆದು ನೋಡಿದಾಗ ಆಕೆ ಒಂಟಿಕ್ಕೆಯ ಮೇಲೆ ಇಡೀ ದೇಹದ ಭಾರವನ್ನು ನಿಲ್ಲಿಸಿ ಕುಳಿತಿದ್ದ ಹಾಗಿತ್ತು. ಹತ್ತಿರ ಹೋಗಿ ನೋಡಿದರೆ ಎರಡನೆಯ ಕೈಯಲ್ಲಿ ಗೀತೆಯ ಪುಸ್ತಕವಿದ್ದು ದೇಹವೆಲ್ಲವೂ ಸುಟ್ಟು ಹೋಗಿತ್ತು. ಮುಖಕ್ಕೆ ಮಾತ್ರ ಉರಿ ತಗಲಿರಲಿಲ್ಲ. ಹತ್ತಿರದ ಮೂಲೆಯಲ್ಲಿ ಸೇರಿಸಲಾಗಿದ್ದ ಖಾದೀ ಸಂಗ್ರಹಕ್ಕೆ ಯಾವ ಅಪಾಯವೂ ಆಗಿರಲಿಲ್ಲ. ನಡೆದ ವಿಚಿತ್ರ ಯಾರಿಗೂ ಅರ್ಥವಾಗಲಿಲ್ಲ. ಮುಂದೆ ಎಷ್ಟೋ ಕಾಲ ಆ ಸ್ಥಳವನ್ನು ಜನರು ಪುಣ್ಯಭೂಮಿಯೆಂದೆಣಿಸುತ್ತಿದ್ದರು.

## ವರದಕ್ಷಿಣೆ

ಇದೇ ಸುಮಾರಿಗೆ ಎಂದರೆ ೧೯೨೮ರಲ್ಲಿ ನನ್ನ ಅಣ್ಣನ ಮಗಳಿಗೆ ಮತ್ತು ನನ್ನ ಮಗ ಮೃತ್ಯುಂಜಯನಿಗೆ ಮದುವೆ ಮಾಡುವುದೆಂದು ಗೊತ್ತಾಯಿತು. ವರದಕ್ಷಿಣೆಯನ್ನು ತೆಗೆದುಕೊಳ್ಳುವ ಹಾಗಿಲ್ಲವೆಂದು ನಾವು ನಿರ್ಧಾರಮಾಡಿಕೊಂಡಿದ್ದರೂ ನಮ್ಮ ಮನೆಯ ಹೆಣ್ಣುಮಗಳನ್ನು ತಂದುಕೊಳ್ಳುವವರು ಕೇಳುತ್ತಿರಲಿಲ್ಲ. ಹೀಗಾಗಿ ಮೃತ್ಯುಂಜಯನಿಗೆ ವರದಕ್ಷಿಣೆಯನ್ನು ತೆಗೆದುಕೊಳ್ಳದೆ ಸಮಾರಂಭವನ್ನು ಸಾದಾ ರೀತಿಯಲ್ಲಿ ನಡೆಸಿಕೊಂಡು ಹೋಗುವುದು ಸಾಧ್ಯವಾದರೂ ನನ್ನ ಅಣ್ಣನ ಮಗಳಿಗಾಗಿ ವರದಕ್ಷಿಣೆ ಕೊಡುವುದಾಗಲಿ ಹುಚ್ಚು ವಿಜೃಂಭಣೆಗಾಗಿ ಹಣ ಹಾಳಾಗುವುದಾಗಲಿ ತಪ್ಪಲಿಲ್ಲ. ಈ ಬಗೆಯಲ್ಲಿ ಸುಧಾರಣೆಯಾಗಬೇಕೆಂದು ಬೇಕಾದಷ್ಟು ಪ್ರಯತ್ನಿಸಿದರೂ ಉಪಯೋಗವಾಗಲಿಲ್ಲ. ಈ ಪ್ರಯತ್ನಕ್ಕೆಂದೇ ಒಂದೆರಡು ಸಲ ಕಾಯಸ್ಥ ಸಮ್ಮೇಳನದ ಅಧ್ಯಕ್ಷನಾಗಲು ಒಪ್ಪಿ ವರದಕ್ಷಿಣೆ ಕೊಡುವವರ ಮತ್ತು ಕೊಳ್ಳುವವರ ಮದುವೆಗಳಿಗೆ ಯಾರೂ ಹೋಗಬಾರದೆಂದು ಗೊತ್ತುವಳಿಗಳನ್ನು ಮಾಡಲಾಯಿತು. ಆದರೆ ಜನ ಹಟಹಿಡಿಯದಿದ್ದರೆ ಗೊತ್ತುವಳಿಗಳಿಂದೇನಾಗಬೇಕು?

೧೯೨೭ ರಲ್ಲಿ ಬ್ರಿಟಿಶ್ ಸರಕಾರವು ಸೈಮನ್ ಕಮಿಶನ್‌ನನ್ನು ನೇಮಕ ಮಾಡಿದಾಗ ದೇಶದ ರಾಜಕೀಯದಲ್ಲಿ ಹೊಸ ಚೈತನ್ಯ ಕಾಣಿಸತೊಡಗಿತು. ಮೊಂಟೇಗೂ-ಚೆಮ್ಸ್‌ಫೋರ್ಡ ಸುಧಾರಣೆಗಳ ಕಾರ್ಯಾಚರಣೆಯನ್ನು ಕುರಿತು ಹತ್ತು ವರ್ಷಗಳ ನಂತರ ವರದಿಯಾಗಬೇಕಿತ್ತು. ಸರ್‌ಜಾನ್ ಸೈಮನ್‌ರ ಅಧ್ಯಕ್ಷತೆಯಲ್ಲಿ ಭಾರತಕ್ಕೆ ಬರಲಿದ್ದ ಈ ಸಮಿತಿಯಲ್ಲಿ ಬರೀ ಬಿಳಿಯ ಸದಸ್ಯರಿದ್ದರು. ಸಲಹೆ ಕೊಡುವುದರ ಹೊರತು ಭಾರತೀಯರಿಗೆ ಆ ಸಮಿತಿಯಲ್ಲಿ ಸ್ಥಾನವಿರಲಿಲ್ಲ. ಆದ್ದರಿಂದ ಸೈಮನ್ ಸಮಿತಿಗೆ ಬಹಿಷ್ಕಾರ ಹಾಕುವುದೆಂದು ಒಟ್ಟಿನಲ್ಲಿ ಕಾಂಗ್ರೆಸ್ ನಿಲುಮೆಯಾಯಿತು. ಕಾಂಗ್ರೆಸ್ಸಿನ ಮದ್ರಾಸ ಅಧಿವೇಶನದಲ್ಲಿ ಸೈಮನ್

ಸಮಿತಿಯ ಬಗೆಯಲ್ಲಿ ಕೈಕೊಳ್ಳಬೇಕಾದ ಕಾರ್ಯಕ್ರಮ ನಿರ್ಣಯವಾಗಬೇಕಿತ್ತು.

ಮದರಾಸ ಅಧಿವೇಶನವನ್ನು ಮುಗಿಯಿಸಿ ಕೊಂಡು ನಾನು ಮನೆಯವರೊಡನೆ ದಕ್ಷಿಣ ಹಿಂದುಸ್ಥಾನದ ಕ್ಷೇತ್ರಯಾತ್ರೆಯನ್ನು ಕೈಕೊಂಡೆ. ಮದುರೆ, ರಾಮೇಶ್ವರಗಳಾದ ಮೇಲೆ ನಾನೊಬ್ಬನೆ ಸಿಲೋನ ಸಂಚಾರವನ್ನು ಮುಗಿಯಿಸಿದೆ. ಒಂದು ಕಾಲಕ್ಕೆ ಛಪರಾದಲ್ಲಿ ಕಾಂಗ್ರೆಸ್ ಕಾರ್ಯ ಕರ್ತನಾಗಿದ್ದು ಈಗ ರಾಹುಲ ಸಾಂಕೃತ್ಯಾಯನ ಎಂಬ ಹೆಸರಿನಲ್ಲಿ ಹೆಸರಾಗಿದ್ದ ದಾಮೋದರದಾಸ ಆಗ ಸಿಲೋನನಲ್ಲಿ ಪಾಲಿ ಸಾಹಿತ್ಯದ ಅಭ್ಯಾಸ ಮಾಡುತ್ತಿದ್ದ. ನನ್ನ ಸಿಲೋನ ಕಾರ್ಯಕ್ರಮವ ನ್ನೆಲ್ಲ ಆತನೆ ನಡಸಿಕೊಟ್ಟ. ಸುಂದರವಾದ ವನರಾಜಿಗಳಿಂದ ಶೋಭಿಸುವ ಆ ನಾಡು ನಯನ ಮನೋಹರವಾಗಿದೆ. ಕ್ಯಾಂಡಿಯಲ್ಲಿಯ ಭವ್ಯ ದೇವಾಲಯವನ್ನು, ಸೀತಾಲಯ ಎಂಬಲ್ಲಿಯ ಅಶೋಕವಾಟಿಕೆಯನ್ನು ನೋಡಿ ಅನುರಾಧಾ ಪುರಕ್ಕೆ ಬಂದು ತಲುಪಿದಾಗ ರಾತ್ರಿಯಾಗಿತ್ತು. ಬೋಧಿ ವೃಕ್ಷದಡಿಯಲ್ಲಿ ಭಿಕ್ಕುವೊಬ್ಬ ಪ್ರವಚನ ನಡಸಿದ್ದ. ಶ್ರೋತೃಗಳೆಲ್ಲರೂ ಶಾಂತಚಿತ್ತರಾಗಿ ಕೇಳುತ್ತಿದ್ದರು. ಆ ಬೋಧಿವೃಕ್ಷ ಅಶೋಕನ ಮಗನಾದ ಮಹೇಂದ್ರನು ತಂದು ನೆಟ್ಟ ಗಿಡವೆಂದೂ ಅಲ್ಲಿ ಉರಿಯುತ್ತಿದ್ದ ಮಣ್ಣಿನ ಹಣತೆಯು ಆತ ಹೊತ್ತಿಸಿದ್ದು ಎಂದು ಹೇಳಿದರು. ಗಯಾದಲ್ಲಿಯ ಬೋಧಿವೃಕ್ಷವು ಅಂದಿನ ವೃಕ್ಷವೇ ಎಂದು ಹೇಳಲಾಗದಂತೆ ಈ ವೃಕ್ಷವಾದರೂ ಅದೇ ಎಂದು ಹೇಳಲಾಗುವುದಿಲ್ಲ. ಆದರೆ ಆ ಹಣತೆಯ ದೀಪವನ್ನು ಎರಡು ಸಾವಿರ ವರ್ಷಗಳಾಚೆಯಿಂದ ಉರಿಸಿಕೊಂಡು ಬಂದಿದ್ದಾರೆಂಬುದನ್ನು ನೆನೆದರೆ ರೋಮಾಂಚನವಾಗುತ್ತದೆ.

## ವಿದೇಶಯಾತ್ರೆ

ನಾನು ಪಾಟ್ನಾ ಹೈಕೋರ್ಟಿನಲ್ಲಿ ನಡೆಸಿದ ರಾಯ ಬಹಾದ್ದೂರ ಹರಿಪ್ರಸಾದ ಸಿಂಹ ಅವರ " ಬರ್ಮಾ ಕೇಸು " ಪ್ರಿವಿ ಕೌನ್ಸಿಲೆದುರು ವಿಚಾರಣೆಗೆ ಬರಲಿದ್ದುದರಿಂದ ನಾನು ಇಂಗ್ಲಂಡಿಗೆ ಹೋಗಲೇಬೇಕಾಯಿತು. ತುಂಬ ತೊಡಕಿನದಾಗಿದ್ದ ಆ ಕೇಸನ್ನು ನಾನು ಮೊದಲಿನಿಂದ ನಡೆಸಿದವನಾದ್ದರಿಂದ ನಾನು ಬರಲೇಬೇಕೆಂದು ಹರೀಜಿ ಹಟ ಹಿಡಿದರು ಪಾಶ್ಚಿಮಾತ್ಯ ವೇಷವಾಗಲಿ, ನಡೆಯ ರೀತಿಗಳಾಗಲಿ ನನಗೆ ಪರಿಚಿತವಿರಲಿಲ್ಲವಾದರೂ ನನಗೆ ಯಾವ ಆತಂಕವೂ ಎನಿಸಲಿಲ್ಲ. ಉಣ್ಣೆಯ ಬಟ್ಟೆಗಳನ್ನು ಮಾಡಿಸಿಕೊಂಡೆನಾದರೂ, ಪಾಶ್ಚಿಮಾತ್ಯ ವೇಷದ ರೀತಿಯಲ್ಲಿ ಮಾಡಿಸಲಿಲ್ಲ. ಎಲ್ಲಿ ಹೋದರೂ ನಾವು ನಾವೇ ಆಗಿರಬಹುದು. ಎನ್ನುವ ವಿಶ್ವಾಸ, ಹಾಗಿರಬೇಕು ಎನ್ನುವ ಅಭಿಮಾನ ನನ್ನದಾಗಿತ್ತು. ಉಡುಪಿನ ಹಾಗೆಯೆ ಊಟದ ವಿಚಾರದಲ್ಲಿಯೂ. ಇಂಗ್ಲಂಡಿನಲ್ಲಿ ನಾನು ಸುಮಾರು ಐದು ತಿಂಗಳ ಕಾಲ ಇದ್ದರೂ ಶಾಕಾಹಾರಿಯಾಗಿ, ತತ್ತಿಗಳನ್ನೂ ಮುಟ್ಟದೆ, ಇರುವುದು ಕಷ್ಟವಾಗಲಿಲ್ಲ. ಅಲ್ಲದೆ ನನಗಾಗಿ ಹರೀಜಿಯವರು ಬೇಕಾದ ಅನುಕೂಲಗಳನ್ನು ಮಾಡಲು ಸಿದ್ಧವಾಗಿದ್ದರು. ಹೊರಡುವಾಗ ಸಾಬರಮತಿಗೆ ಹೋಗಿ ಗಾಂಧೀಜಿಯವರ ಆಶೀರ್ವಾದ ಪಡೆದು ಮುಂಬಯಿಯಲ್ಲಿ ಹಡಗು ಹತ್ತಿದೆ. ದಾರಿಯಲ್ಲಿ ಕೈರೋ ನಗರವನ್ನೂ ಪಿರಾಮಿಡ್ಡುಗಳನ್ನೂ ನೋಡಿಕೊಂಡು ಮಾರ್ಸೆಲೆ ಮುಖಾಂತರ ಲಂಡನ್ ತಲುಪಿದೆ. ಅಲ್ಲಿ ತಲುಪಿದ ಹನ್ನೆರಡು ಗಂಟೆಗಳಲ್ಲಿ ಕೆಲಸದಲ್ಲಿ ತೊಡಗಿದೆ.

ನಮ್ಮ ಪರವಾಗಿ ವಾದಿಸಬೇಕಾಗಿದ್ದ ಅಪ್‌ಜಾನ್ ಎಂಬ ವಕೀಲ ಎಪ್ಪತ್ತೈದು ವರ್ಷದ ವೃದ್ಧನಾದರೂ ತನ್ನ ಕೆಲಸವನ್ನು ಒಂದಿಷ್ಟು ಬೇಸರಪಡದೆ, ವ್ಯರ್ಥ ಕಾಲಹರಣ ಮಾಡದೆ, ಸಲ್ಲದ ಪ್ರತಿಫಲವನ್ನು ಅಪೇಕ್ಷಿಸದೆ ಮಾಡುತ್ತಿರುವುದನ್ನು ನೋಡಿದಾಗ ನನಗೆ ಅಚ್ಚರಿಯಾಯಿತು. ಆ ಕೇಸಿನಲ್ಲಿಯ ಕಾಗದಪತ್ರಗಳು ಅಚ್ಚಾದ ೧೫,೦೦೦ ಪುಟಗಳಿಗೂ ಮಿಕ್ಕಿದ್ದವು ಅವುಗಳ ಸಂಗ್ರಹ ಟಿಪ್ಪಣಿಗಳನ್ನು ತಯಾರಿಸಿ ಕೊಡಬಹುದಾಗಿತ್ತು. ಹರೀಜಿಯವರು ಅಷ್ಟಕ್ಕಾಗಿ ಸಾವಿರಾರು ರೂಪಾಯಿ ಕೊಡಲು ಸಿದ್ಧರಾಗಿದ್ದರು.

ಆದರೆ ಆಪ್‌ಜಾನ್ ಒಪ್ಪಲಿಲ್ಲ. ಕೇಸನ್ನು ಹಿಡಿದ ಮೇಲೆ ಅದನ್ನು ಓದಿಕೊಳ್ಳುವ ಹೊಣೆ ನನ್ನದೇ; ಇನ್ನೊಬ್ಬರದಲ್ಲ. ಅದಕ್ಕಾಗಿ ಬೇರೆ ಹಣ ಕೊಡಬೇಕಾಗಿಲ್ಲವೆಂದು ಹೇಳಿ ಆ ಹದಿನೈದು ಸಾವಿರ ಪುಟಗಳನ್ನು ತಾನೇ ಓದಿಕೊಂಡು ತನ್ನ ಟಿಪ್ಪಣಿಗಳನ್ನು ತಾನೇ ತಯಾರಿಸಿಕೊಂಡ. ನಾನೂ ಒಬ್ಬ ವಕೀಲ ಎನ್ನುವುದು ಆತನಿಗೆ ಮೊದಲು ಗೊತ್ತಾಗಲಿಲ್ಲ. ಕೇಳಿದ ಪ್ರಶ್ನೆಗಳಿಗೆ ನಾನು ಕೊಡುತ್ತಿದ್ದ ಉತ್ತರಗಳನ್ನು ನೆನೆದು "ಪಕ್ಷಕಾರ ಚುರುಕಾಗಿದ್ದಾನೆ" ಎಂದಿದ್ದ. ಆದರೆ ನಾನು ವಕೀಲನೆಂದು ತಿಳಿದ ನಂತರ ಎಷ್ಟೋ ಟಿಪ್ಪಣಿಗಳನ್ನು ನನ್ನಿಂದ ಮಾಡಿಸಿಕೊಂಡ. ಕೇಸು ವಿಚಾರಣೆಗೆ ಬಂದಾಗ ನಮ್ಮ ವಾದದಲ್ಲಿ ವಿಶೇಷವಾದ ತಥ್ಯವಿಲ್ಲ ಎಂದು ಆಪ್‌ಜಾನ್ ಅಭಿಪ್ರಾಯಪಟ್ಟಾಗ ಹರೀಜಿಯವರು ಎದುರಾಳಿಗಳೊಡನೆ ಸಂಧಾನದ ಮಾತುಕತೆಗಳನ್ನು ನಡೆಸಿದರು. ಪ್ರೀವಿ ಕೌನ್ಸಿಲ್‌ವರೆಗೆ ಹೋದ ಕೇಸು ಕೊನೆಗೆ ಸಂಧಾನದಲ್ಲಿಯೆ ಮುಕ್ತಾಯವಾಯಿತು.

ಅಷ್ಟಾದ ಕೂಡಲೆ ನಾನು ತಿರುಗಿ ಹೊರಡುವ ಸಿದ್ಧತೆಗಳನ್ನು ಮಾಡಿಕೊಂಡು ವಿಯೆನ್ನಾದ ಹತ್ತಿರದ ಸಾಂಟಾಗ್ಸಬರ್ಗ ಎಂಬಲ್ಲಿ ಸೇರಲಿದ್ದ ಯುದ್ಧವಿರೋಧ ಸಮ್ಮೇಳನಕ್ಕೆಂದು ಅಲ್ಲಿಗೆ ಹೋದೆ. ಗಾಂಧೀಜಿಯವರ ಶಿಷ್ಯ ನಾನು ಎನ್ನುವುದು ತಿಳಿದಾಗ ಪ್ರತಿನಿಧಿಗಳು ನನಗೆ ಅನೇಕ ಕುತೂಹಲದ ಪ್ರಶ್ನೆಗಳನ್ನು ಕೇಳಿದರು. ಮೂರು ದಿನ ನಾಲ್ಕು ಭಾಷೆಗಳಲ್ಲಿ ನಡೆದ ಸಮ್ಮೇಳನ ಯುದ್ಧ ವಿರೋಧದ ಗೊತ್ತುವಳಿಯನ್ನಂಗೀಕರಿಸಿತು. ಪ್ರತಿನಿಧಿಗಳು ಆ ಬಗೆಯಲ್ಲಿ ಪ್ರಚಾರ ಕೈಕೊಳ್ಳಬೇಕೆಂದು ಗೊತ್ತಾಯಿತು.

ಸಾಂಟಾಗ್ಸಬರ್ಗದ ಹತ್ತಿರವೆ ಗಾಟ್ರ್ಜ ಎಂಬಲ್ಲಿ ಗಾಂಧೀಜಿಯವರಿಗೆ ಬೇಕಾದ ಡಾಕ್ಟರ ಮತ್ತು ಶ್ರೀಮತಿ ಸ್ಟಾಂಡೆನಾಥ್ ಎನ್ನುವವರಿರುತ್ತಿದ್ದರು. ಆಸ್ಟ್ರಿಯಾಕ್ಕೆ ನಾನು ಹೋದ ಪಕ್ಷದಲ್ಲಿ ಅವರನ್ನು ನಾನು ಕಾಣಬೇಕೆಂದು ಗಾಂಧೀಜಿಯವರು ಹೇಳಿದ್ದರಿಂದ ಅವರನ್ನು ಕಾಣಲೆಂದು ಅಲ್ಲಿಗೆ ಹೋದೆ. ಉಪಾಹಾರವಾದ ನಂತರ ಆ ದಂಪತಿಗಳು ಸಂಜೆಯ ಸುಮಾರಿಗೆ ಊರಲ್ಲಿಯ ಒಂದು ಸಭಾಗೃಹಕ್ಕೆ ಕರೆದೊಯ್ದರು. ಅಂದು ಅಲ್ಲಿ ಯುದ್ಧವಿರೋಧ ಸಮ್ಮೇಳನಕ್ಕೆ ಪ್ರತಿಯಾಗಿ ಒಂದು ಸಭೆ ನಡೆಯಬೇಕಾಗಿದ್ದಿತು. ಆ ಸಮ್ಮೇಳನಕ್ಕೆ ಬಂದವ ನಾನು ಎನ್ನುವುದು ಅಲ್ಲಿಯ ಕೆಲವರಿಗೆ ತಿಳಿದು ತಮ್ಮ ಕಾರ್ಯಕ್ರಮಕ್ಕೆ ವಿರುದ್ಧವಾಗಿ ಭಾಷಣ ಮಾಡಲು ಬಂದಿದ್ದೆನೆಂದ. ಭಾವಿಸಿದರು. ಕೆಲವು ನಿಮಿಷಗಳಲ್ಲಿ ಸಭಾಗೃಹದಲ್ಲಿಯ ಅನೇಕರು ನನ್ನ ಮೇಲೇರಿಬಂದರು. ಹೊಡೆದಾಟದಲ್ಲಿ ನನ್ನ ತಲೆಗೆ ಗಾಯವಾಯಿತು. ಸ್ಟಾಂಡೆನಾಥ್ ದಂಪತಿಗಳಿಬ್ಬರೂ ನನ್ನನ್ನು ಹೊಡೆತದಿಂದ ತಪ್ಪಿಸುವಾಗ ಏಟು ತಿಂಧರು. ನನ್ನನ್ನಲ್ಲಿಂದ ಪಾರು ಮಾಡಬೇಕಾದರೆ ಅವರಿಗೆ ಸಾಕುಬೇಕಾಯಿತು. ದಂಪತಿಗಳಿಬ್ಬರೂ ಗಾಂಧೀಜಿಯವರಿಗೆ ವಿವರವಾಗಿ ಬರೆದು ಕ್ಷಮೆ ಕೋರಿದರು. ಆ ಕತೆ "ಯಂಗ್ ಇಂಡಿಯಾ" ಪತ್ರಿಕೆಯಲ್ಲಿ ಪ್ರಕಟವಾಯಿತು.

ಅಲ್ಲಿಂದ ಸ್ವಿತ್ಸರಲಂಡಿಗೆ ಬಂದು ರೋಮೆ ರೋಲಾ ಅವರನ್ನು ಕಂಡೆ. ಆಮೇಲೆ ಬರ್ನ, ವಿಲ್, ನಿವ್‌ಚಾಟೆಲ್, ಲಾಸಾನ್, ಜನೀವಾ ನಗರಗಳನ್ನು ನೋಡಿಕೊಂಡು ಪ್ಯಾರೀಸಿಗೆ ಬಂದೆ. ನಿವ್‌ಚಾಟೇಲ್ ಪೇಟೆಯಲ್ಲಿ ಒಂದು ಕಡೆ ಕೈಮಗ್ಗದ ಬಟ್ಟೆಯನ್ನು ಕಂಡು ಅಂಗಡಿಯವಳನ್ನು ಮಾತನಾಡಿಸಿದಾಗ ಆಕೆ ಗಾಂಧೀಜಿಯವರ ಭಕ್ತಳೆನ್ನುವುದನ್ನು, ಅವರ ಎಲ್ಲ ಬರಹಗಳನ್ನು ಆಕೆ ಓದುತ್ತಿದ್ದಳೆನ್ನುವುದನ್ನು ಕೇಳಿ ಆಶ್ಚರ್ಯವಾಯಿತು.

ಪರದೇಶ ಪ್ರವಾಸವನ್ನು ಮುಗಿಯಿಸಿಕೊಂಡು ನಾನು ಹಿಂದಿರುಗುವ ವೇಳೆಗೆ ಸೈಮನ್ ಸಮಿತಿಯವರು ಪಾಟ್ನಾಕ್ಕೆ ಬರುವವರಿದ್ದರು ಅವರು ಬರುವ ಮುನ್ನಾದಿನ ಸಂಜೆ ಡಾಕ್ಟರ್ ಸಚ್ಚಿದಾನಂದ ಸಿಂಹರು ನನ್ನನ್ನು ಕರೆಯಿಸಿಕೊಂಡು ಪೋಲೀಸ್ ಇನ್ಸಪೆಕ್ಟರ್ ಜನರಲ್ ಸ್ಟೇನರು ನನ್ನೊಡನೆ ಮಾತನಾಡಬೇಕೆನ್ನುತ್ತಿದ್ದರೆಂದು

ಹೇಳಿದರು. ಸಮಿತಿಯವರು ಬಂದಾಗ ಪಂಜಾಬ ಮತ್ತು ಉತ್ತರಪ್ರದೇಶಗಳಲ್ಲಿ ನಡೆವ ದುರ್ಘಟನೆಗಳು ನಡೆಯಬಾರದು; ಪೋಲೀಸರಿಗೂ ಮತಪ್ರದರ್ಶಕರಿಗೂ ಘರ್ಷಣೆಯಾಗಬಾರದಂತೆ ಏನಾದರೂ ಒಂದು ಯೋಜನೆಯನ್ನು ಮಾಡಬೇಕೆಂದು ಸ್ಟೇನ್ ಸೂಚಿಸಿದಾಗ ಮತಪ್ರದರ್ಶಕರು ಗೊಂದಲ ಮಾಡುವುದಿಲ್ಲವೆಂದೂ, ತೊಂದರೆಯಾದರೆ ಅದು ಪೋಲೀಸಿನವರಿಂದಲೇ ಮೊದಲಾಗುತ್ತದೆ ಎಂದೂ ಹೇಳಿದೆ. ಮತಪ್ರದರ್ಶಕರ ಸಂಖ್ಯೆಯನ್ನು ಪರಿಮಿತವಾಗಿಸಬೇಕೆಂಬ ಸೂಚನೆಯನ್ನು ನಾನು ಒಪ್ಪಲಿಲ್ಲ. ಎಷ್ಟು ಜನ ಬರಬಹುದೆಂದು ಕೇಳಿದ್ದಕ್ಕೆ ಸುಮಾರು ಹತ್ತುಸಾವಿರ ಜನ ಬರಬಹುದು ಎಂದು ಹೇಳಿದೆ. ಒಂದು ಕಡೆಯಲ್ಲಿ ಸಮಿತಿಯನ್ನು ಸ್ವಾಗತಿಸುವವರು ಇನ್ನೊಂದು ಕಡೆ ವಿರೋಧ ಮತಪ್ರದರ್ಶಕರು ನಿಲ್ಲುವಂತೆ ಏರ್ಪಾಡು ಮಾಡಬೇಕೆಂದು ಸೂಚಿಸಿದೆ. ಈ ವ್ಯವಸ್ಥೆಯ ಮೂಲಕ ಎರಡು ಗುಂಪುಗಳಲ್ಲಿಯ ವ್ಯತ್ಯಾಸ ಸ್ಪಷ್ಟವಾಗಿ ಕಾಣಲಿ ಎಂದು ಆ ಸೂಚನೆಯನ್ನು ಒಪ್ಪಿದ್ದೆ.

ನಡೆದದ್ದೂ ಹಾಗೆಯೆ. ಬೆಳಗಿನ ಮೂರು ಗಂಟೆಯಿಂದಲೆ ಪ್ರಭಾತಫೇರಿಗಳು ಹೊರಟು ವಿಶೇಷ ರೈಲು ನಿಲ್ದಾಣಕ್ಕೆ ಬರುವ ಹೊತ್ತಿಗೆ ಮೂವತ್ತು ಸಾವಿರ ಮತಪ್ರದರ್ಶಕರು ಕರಿಯ ನಿಶಾನೆಗಳನ್ನು ಹಿಡಿದು ಒಂದು ಕಡೆಯಲ್ಲಿ ಶಾಂತವಾಗಿ ನಿಂತಿದ್ದರು. ಎದುರುಕಡೆಯಲ್ಲಿ ಹೆಚ್ಚಾಗಿ ಅಧಿಕಾರಿಗಳು, ಅವರ ಸಿಬ್ಬಂದಿಯವರು ಸೇರಿ ಇನ್ನೂರಕ್ಕೆ ಮೀರದ ಒಂದು ಗುಂಪು ನಿಂತಿತ್ತು! ಕಾರುಗಳನ್ನು, ಲಾರಿಗಳನ್ನು ಓಡಾಡಿಸಿ ಅಷ್ಟು ಜನರನ್ನು ಕೂಡಿಸಲಾಗಿತ್ತು. ಕರಿ ನಿಶಾನೆಗಳ ಪ್ರದರ್ಶನ, 'ಸೈಮನ್ ಹಿಂದಿರುಗು' ಎಂಬ ಘೋಷಣೆ ಇವುಗಳ ಹೊರತು ಏನೂ ನಡೆಯಲಿಲ್ಲ. ಎಲ್ಲವೂ ಸುಸೂತ್ರವಾಗಿ ಸಾಗಿತು.

ಇಂಗ್ಲಂಡಿನಿಂದ ನಾನು ಹಿಂತಿರುಗುತ್ತಿದ್ದಾಗ ನಾನೊಮ್ಮೆ ಬ್ರಹ್ಮದೇಶದ ಪ್ರವಾಸ ಕೈಕೊಳ್ಳಬೇಕೆಂದು ಹರಿಪ್ರಸಾದರು ಮಾಡಿದ ಸೂಚನೆಯನ್ನು ಒಪ್ಪಿದ್ದೆ. ಅದಕ್ಕನುಸಾರವಾಗಿ ನವಂಬರ ೧೯೨೮ರಲ್ಲಿ ರಂಗೂನಿಗೆ ಪ್ರಯಾಣ ಬೆಳಸಿದೆ. ನನ್ನ ಮತ್ತು ಆಂಧ್ರ ನಾಯಕರಾದ ನಾಗೇಶ್ವರರಾಯರ ಸನ್ಮಾನಾರ್ಥವಾಗಿ ರಂಗೂನ್ ನಗರಾಧ್ಯಕ್ಷರು ಒಂದು ಔತಣವನ್ನೇರ್ಪಡಿಸಿದ್ದರು. ಅದರ ವೈಶಿಷ್ಟ್ಯವೆಂದರೆ ದೇಶೀಯ ಪದ್ಧತಿಯ ಪ್ರಕಾರ ಯುರೋಪೀಯರನ್ನೊಳಗೊಂಡು ಎಲ್ಲರೂ ನೆಲದ ಮೇಲೆಯೆ ಕುಳಿತುಕೊಳ್ಳುವ ವ್ಯವಸ್ಥೆಯನ್ನು ಮಾಡಲಾಗಿತ್ತು. ಸಾಮಾನ್ಯವಾಗಿ ಯುರೋಪಿಯನ್ ಅತಿಥಿಗಳು ನಮ್ಮಲ್ಲಿಗೆ ಬಂದರೆ ನಾವು ನಮ್ಮ ರೀತಿಗಳನ್ನು ಬಿಟ್ಟು ಅವರ ಹಾಗೆಯೆ ವ್ಯವಸ್ಥೆಗಳನ್ನು ಮಾಡಲಪೇಕ್ಷಿಸುತ್ತೇವಲ್ಲದೆ ಅವರ ಹಾಗೆಯೆ ನಡೆದುಕೊಳ್ಳುವ ಯತ್ನವನ್ನೂ ಮಾಡುತ್ತೇವೆ. ನಮ್ಮ ನಡತೆ-ವ್ಯವಸ್ಥೆಗಳು ಕೃತ್ರಿಮವಾಗುತ್ತವಲ್ಲದೆ ನಮ್ಮ ಬದುಕಿನ ರೀತಿನೀತಿಗಳನ್ನು ನೋಡಬೇಕೆಂದ ಅಭ್ಯಾಗತರಿಗೆ ನಿರಾಶೆಯಾಗುತ್ತದೆ. ಇಂಥ ಸಂದರ್ಭಗಳಲ್ಲಿ ನಮ್ಮ ರೀತಿನೀತಿಗಳನ್ನು ಇದ್ದಕ್ಕಿದ್ದ ಹಾಗೆ ಅನುಸರಿಸುವಲ್ಲಿ ಯಾವ ನಾಚಿಕೆಯೂ ಇರಬೇಕಾದದ್ದಿಲ್ಲವೆನ್ನುವುದನ್ನು ಮರೆತುಬಿಡುತ್ತೇವೆ.

ರಂಗೂನಿನಿಂದ ಹಿಂದಿರುಗುವಾಗ ಹಡಗದಲ್ಲಿ ನನಗೆ ದಮ್ಮಿನಿಂದ ತೀರ ತೊಂದರೆಯಾಯಿತು. ಕೆಲವು ವರ್ಷಗಳಿಂದ ಆ ಬೇನೆ ನನ್ನನ್ನು ಕಾಡುತ್ತಿದ್ದರೂ ಈ ಸಲ ತೊಂದರೆ ಅಧಿಕವಾಗಿತ್ತು. ಹಿಂದಿರುಗಿದ ಕೂಡಲೆ ನಾನು ಮೋಂಘೀರದಲ್ಲಿ ಬಿಹಾರ ಪ್ರಾಂತದ ರಾಜಕೀಯ ಸಮ್ಮೇಳನದ ಅಧ್ಯಕ್ಷತೆಯನ್ನು ವಹಿಸಬೇಕಾಗಿತ್ತು. ಕಲಕತ್ತೆಯಲ್ಲಿ ನನ್ನ ಮಿತ್ರನಾದ ಜೋಗೇಂದ್ರನಾರಾಯಣ ಮಜುಮದಾರನ ಹತ್ತಿರ ಉಳಿದೆ. ಅಲೋಪಥಿ, ಆಯುರ್ವೇದ, ಹಕೀಮ ಎಲ್ಲರ ಔಷಧವನ್ನೂ ಇದುವರೆಗೆ ತೆಗೆದುಕೊಂಡಿದ್ದೆ.

ನನ್ನ ಮಿತ್ರನಿಗೆ ಹೋಮಿಯೋಪಥಿಯಲ್ಲಿ ನಂಬುಗೆ. ಅವನ ಸೂಚನೆಯ ಪ್ರಕಾರ ಒಬ್ಬ ಹೆಸರಾಂತ ಹೋಮಿಯೋಪಥಿ ಡಾಕ್ಟರನನ್ನು ಕರೆಸಲಾಯಿತು. ಎರಡು ತಿಂಗಳ ವರೆಗೆ ನಾನು ಬೇರೆ ಯಾವ ಔಷಧವನ್ನು ತೆಗೆದುಕೊಳ್ಳಬಾರದೆಂದು, ಮೊದಮೊದಲು ಬೇನೆ ಹೆಚ್ಚಾದರೂ

ಗಾಬರಿಯಾಗಬಾರದೆಂದು ಆತ ಹೇಳಿದ್ದನ್ನು ಒಪ್ಪಿದಾಗ ಆತ ಔಷಧ ಕೊಟ್ಟ. ಮುಂದೆ ಮೂರು ದಿನಗಳಲ್ಲಿ ಮೋಂಘೀರ ಭಾಷಣವನ್ನು ಬರೆದು ಅಲ್ಲಿಗೆ ಹೊರಟೆ. ದಾರಿಯಲ್ಲಿ ದಮ್ಮು ಬಲವಾಯಿತು. ನನ್ನ ಭಾಷಣವನ್ನು ಬೇರೆ ಯಾರೋ ಓದಿದರು. ಮುಂದಿನ ಮೂರು ವಾರಗಳಲ್ಲಿ ಲಾಹೋರಿನಲ್ಲಿ ಸೇರಲಿದ್ದ ಕಾಂಗ್ರೆಸ್ ಅಧಿವೇಶನದಲ್ಲಿ ಕಾಂಗ್ರೆಸಿನ ಕೊನೆಯ ಧ್ಯೇಯ ಯಾವುದು–ಪೂರ್ಣ ಸ್ವಾತಂತ್ರ್ಯವೊ ಅಥವಾ ವಸಾಹತು ಸ್ವರಾಜ್ಯವೊ ಎಂಬುದನ್ನು ನನ್ನ ಭಾಷಣದಲ್ಲಿ ಚರ್ಚಿಸಿದ್ದೆ. ಆದರೆ ಬೇನೆಯ ಮೂಲಕ ಮೋಂಘೀರ ಸಮ್ಮೇಳನದಲ್ಲಿ ಯಾವ ಗೊತ್ತುವಳಿಗಳು ಪಾಸಾದವೆನ್ನುವುದು ಕೂಡ ತಿಳಿಯಲಿಲ್ಲ. ನನ್ನ ಅಣ್ಣ ಬಂದು ಪಾಟ್ನಾಕ್ಕೆ ಕರೆದುಕೊಂಡು ಹೋದ. ಡಾ. ಬ್ಯಾನರ್ಜಿಯವರಿಗೆ ಗಾಬರಿಯಾಯಿತು. ಆದರೆ ಎರಡು ತಿಂಗಳು ನಾನು ಬೇರೆ ಔಷಧ ತೆಗೆದುಕೊಳ್ಳುವಹಾಗಿರಲಿಲ್ಲ. ಇನ್ನೊಂದು ದಿನ ಬಿಟ್ಟರೆ ಪರಿಸ್ಥಿತಿ ಚಿಂತಾಜನಕವಾಗುವುದೆಂದು ಹೇಳಿದರು. ಕಲಕತ್ತೆಯಿಂದ ಹೋಮಿಯೊಪಥಿ ಡಾಕ್ಟರನನ್ನು ಕರೆಯಿಸಲಾಯಿತು ಆತನ ಉಪಚಾರವೇ ಮುಂದುವರಿಯಿತು. ಮೂರನೆಯ ದಿನ ಬೇನೆ ಕಡಿಮೆಯಾಯಿತು. ಎಕ್ಸರೇಯಲ್ಲಿ ತೋರಿದ ಚಿಂತೆ ಮಾಯವಾಗಿತ್ತು. ಆದರೆ ಆ ಮೂರು ದಿನ ಕಲಕತ್ತೆಯ ಡಾಕ್ಟರು ನನಗೆ ಕೊಟ್ಟ ಔಷಧಿ ಬರೀ ನೀರಾಗಿತ್ತು ಎನ್ನುವುದು ನನಗೆ ಆ ಮೇಲೆ ತಿಳಿದಾಗ ಆಶ್ಚರ್ಯವೆನಿಸದಿರಲಿಲ್ಲ!

## ಸತ್ಯಾಗ್ರಹ

ಡಿಸೆಂಬರ ಕೊನೆಯ ವಾರದಲ್ಲಿ ಲಾಹೋರಿನಲ್ಲಿ ಸೇರಿದ ಕಾಂಗ್ರೆಸ್ ಅಧಿವೇಶನ ಪಂಡಿತ ಜವಾಹರಲಾಲ ನೆಹರೂರ ಅಧ್ಯಕ್ಷತೆಯಲ್ಲಿ ಸಂಪೂರ್ಣ ಸ್ವಾತಂತ್ರ್ಯದ ಗೊತ್ತುವಳಿಯನ್ನು ಸ್ವೀಕರಿಸಿತು. ಮುಂಬರುವ ಜನವರಿ ೨೬ನೆಯ ದಿನಾಂಕವನ್ನು ಸ್ವಾತಂತ್ರ್ಯ ದಿನವೆಂದು ದೇಶದಾದ್ಯಂತವೂ ಆಚರಿಸಬೇಕೆಂಬ ಆದೇಶದ ಮೇರೆಗೆ ಧ್ವಜವಂದನೆಗಳು ನಡೆದವು. ದೇಶದಲ್ಲಿ ಹೊಸ ಉತ್ಸಾಹ ಮೂಡಿದ ಹಾಗೆ ಕಾಣುತ್ತಿತ್ತು. ಗಾಂಧೀಜಿಯವರು ಉಪ್ಪಿನ ಸತ್ಯಾಗ್ರಹವನ್ನು ಹೂಡುವುದೆಂದು ನಿಶ್ಚಯಿಸಿದರು. ಅದರ ಸಿದ್ಧತೆಗಳಿಗಾಗಿ ಬಿಹಾರದಲ್ಲಿ ಸಂಚಾರ ಕೈಕೊಂಡೆ. ಮಹಾತ್ಮರ ದಾಂಡಿಯ ದಂಡಯಾತ್ರೆ ಪ್ರಾರಂಭವಾಯಿತು. ಎಪ್ರಿಲ್ ೬ರಂದು ಉಪ್ಪಿನ ಸತ್ಯಾಗ್ರಹ ಪ್ರಾರಂಭವಾಯಿತು. ಅದಕ್ಕೆ ಸರಿಸಮನಾಗಿ ಸರಕಾರದ ದಬ್ಬಾಳಿಕೆಯೂ ಪ್ರಾರಂಭವಾಯಿತು.

ಒಂದು ರಾತ್ರಿ ನಾನು ಮೋತಿಹಾರಿಯಿಂದ ಪಾಟ್ನಾಕ್ಕೆ ಹಿಂದಿರುಗುತ್ತಿದ್ದ ಹಾಗೆ ಸುಲ್ತಾನಗಂಜ (ಪಾಟ್ನಾ) ಪೋಲೀಸ ಸ್ಟೇಶನ್ನಿನೆದುರು ಸತ್ಯಾಗ್ರಹಿಗಳು ಬೀದಿಯ ಮಧ್ಯದಲ್ಲಿ ಮಲಗಿದ್ದರು. ಸುತ್ತಲೂ ಪೋಲೀಸ್ ಕಾವಲು. ಮರುದಿನ ಬೆಳಿಗ್ಗೆ ಅವರು ಉಪ್ಪು ತಯಾರಿಸಿ ಸತ್ಯಾಗ್ರಹ ಮಾಡುವವರಿದ್ದರು. ಬೆಳಿಗ್ಗೆ ನಾನು ಅಲ್ಲಿಗೆ ಬಂದಾಗ ಸಾವಿರಾರು ಜನರು ನೋಡಲೆಂದು ನೆರೆದಿದ್ದರು. ಅರ್ಧ ಗಂಟೆಯಲ್ಲಿ ಸತ್ಯಾಗ್ರಹಿಗಳು ಅಲ್ಲಿಂದ ಚದುರದಿದ್ದರೆ ಪರಿಣಾಮಗಳು ವಿಪರೀತವಾಗಬಹುದು ಎಂದು ಜಿಲ್ಲಾಧಿಕಾರಿಗಳು ನನಗೆ ಹೇಳಿ ಕಳುಹಿದರು. ತಮಗೆ ತಿಳಿದ ಹಾಗೆ ನಡೆದುಕೊಳ್ಳಬಹುದು ಎಂದು ನಾನು ಫೋನ್‌ನಲ್ಲಿ ಹೇಳಿದಾಗ ಸತ್ಯಾಗ್ರಹಿಗಳ ಮೇಲೆ ಮಾತ್ರವಲ್ಲದೆ ನೆರೆದ ಜನರ ಮೇಲೆಯೂ ನಿರ್ದಯವಾಗಿ ಲಾಠೀ ಪ್ರಹಾರವನ್ನು ಮಾಡಲಾಯಿತು. ಆದರೆ ಜನ ಬಗ್ಗಲಿಲ್ಲ. ಒಂದಾದ ಮೇಲೊಂದರಂತೆ ದಿನಕ್ಕೆ ನಾಲ್ಕೈದು ಬಾರಿ ಅದೇ ಪೋಲೀಸ್‌ಸ್ಟೇಶನ್ನಿನೆದುರು ಸತ್ಯಾಗ್ರಹ ನಡೆಯಲಾರಂಭವಾಯಿತು. ಮೊದಲು ಕೆಲವು ದಿನ ಲಾಠೀಪ್ರಹಾರ, ಆ ಮೇಲೆ ಬರೀ ಬಂಧನದ ಸತ್ರ ಪ್ರಾರಂಭವಾಯಿತು. ಯಾವುದಕ್ಕೂ ಜನರಾಗಲಿ, ಸತ್ಯಾಗ್ರಹಿಗಳ ಗುಂಪಾಗಲಿ ಮಣಿಯದಿದ್ದುದನ್ನು ನೋಡಿ ಪೋಲೀಸರು ಆ ಕಡೆಗೆ ಗಮನ ಕೊಡುವುದನ್ನೇ ಬಿಟ್ಟರು!

ಗುಜರಾತದ ಧರಸಾನಾಡಲ್ಲಿ ಅಬ್ಬಾಸ ತೈಯ

ಬಜಿ ಮತ್ತು ಸರೋಜಿನಿ ನಾಯಡು ಉಪ್ಪಿನ ಸತ್ಯಾಗ್ರಹವನ್ನು ಮುಂದುವರಿಸುತ್ತಿದ್ದ ಹಾಗೆ ಬಿಹಾರದ ಎಲ್ಲ ಕಡೆಗಳಲ್ಲಿ ಅದೇ ಕೆಲಸ ನಡೆಯುವಂತೆ ನಾನು ನೋಡಿಕೊಳ್ಳುತ್ತಿದ್ದೆ. ನಾನಾಗಿಯೇ ಉಪ್ಪನ್ನು ತಯಾರಿಸುತ್ತಿದ್ದಿಲ್ಲ. ಆದರೆ ತಯಾರಿಸಿದ ಉಪ್ಪನ್ನು ಲಿಲಾವು ಮಾಡುತ್ತಿದ್ದೆ. ಅದು ಕೂಡ ಅಪರಾಧವಾದರೂ ಪೋಲೀಸರು ನನ್ನನ್ನು ಬಂಧಿಸಿರಲಿಲ್ಲ.

ವಿದೇಶೀ ಬಟ್ಟೆಯ ಬಹಿಷ್ಕಾರದ ಕಾರ್ಯಕ್ರಮ ಬಿಹಾರದಲ್ಲಿ ಸುಗಮವಾಗಿ ಸಾಗಿತೆಂದೇ ಹೇಳಬೇಕು. ವರ್ತಕರು ತಾವಾಗಿಯೆ ಮುಂದೆ ಬಂದು ಇದ್ದ ಬಟ್ಟೆಯ ಸಂಗ್ರಹವನ್ನು ಸೀಲು ಹಾಕಿ ಮುಂದೆ ಕಾಂಗ್ರೆಸ್ಸು ಹೇಳಿದ ಹಾಗೆ ನಡೆದುಕೊಳ್ಳಲು ಒಪ್ಪುತ್ತಿದ್ದರು. ಕೆಲವೆಡೆಗಳಲ್ಲಿ ಪಿಕೆಟಿಂಗ್ ಮಾಡಬೇಕಾಗಿಯೂ ಬಂದಿತು. ಸಾಮಾನ್ಯವಾಗಿ ಈ ಪಿಕೆಟಿಂಗ್ ಕೆಲಸವನ್ನು ಹೆಂಗಸರು ಮಾಡಬೇಕೆಂದು ಗಾಂಧೀಜಿಯವರು ವಿಧಿಸಿದ್ದರು. ಪಿಕೆಟ್ ಮಾಡಬೇಕಾದ ಅಂಗಡಿಗಳೆದುರು ಹೆಂಗಸರನ್ನು ಬೆಳಗಿನಲ್ಲಿ ತಂದು ಬಿಟ್ಟು ಸಾಯಂಕಾಲ ಅವರನ್ನು ಮನೆಗೆ ಹಿಂದಿರುಗಿ ಕರೆದುಕೊಂಡು ಹೋಗುವ ಏರ್ಪಾಡನ್ನು ಮಾಡಲಾಗಿತ್ತು. ಒಂದು ಸಂಜೆ ಪಾಟ್ನಾದಲ್ಲಿ ಅದೇ ಮದುವೆಯಾದ ಒಬ್ಬ ಯುವತಿ ಮನೆಗೆ ಹಿಂದಿರುಗುವ ವೇಳೆಯಾದ್ದರಿಂದ ಕಾರ್ಯಕರ್ತರಿಗಾಗಿ ಕಾಯುತ್ತಿದ್ದಳು. ಆದರೆ ಕಾರ್ಯಕರ್ತರು ಮರೆತು ಬಿಟ್ಟಿದ್ದರು. ಇನ್ನೊಬ್ಬಳ ಗಂಡ ಆಕೆಯನ್ನು ತನ್ನ ಕಾರಿನಲ್ಲಿ ಕರೆದೊಯ್ಯುವೆನೆಂದು ಹೇಳಿದರೆ ಆಕೆಗೆ ತನ್ನ ಮನೆಯ ವಿಳಾಸ ಗೊತ್ತಿರಲಿಲ್ಲ. ಹೊರಗಿನಿಂದ ತನ್ನ ಮನೆಯನ್ನು ತಾನು ನೋಡಿರಲಿಲ್ಲವಾದ್ದರಿಂದ ಗುರುತು ಹಿಡಿಯುವುದು ಸಾಧ್ಯವಿಲ್ಲವೆಂದು ಹೇಳಿದಳು. ಕಾಗದದ ಮೇಲೆ ಗಂಡನ ಹೆಸರನ್ನು ಬರೆದು ತಿಳಿಸಿದಳು. ಆದರೆ ಅದು ಕೈಥೀ ಬರಹವಾದ್ದರಿಂದ ಆಕೆಯನ್ನು ಕರೆತಂದ ದಂಪತಿಗಳಿಗೆ ಅರ್ಥವಾಗಲಿಲ್ಲ. ಕೊನೆಗೆ ಆ ಬರಹವನ್ನು ಓದಿಸಿ ಗಂಡನನ್ನು ಶೋಧಿಸಿ ಆಕೆಯನ್ನು ಮನೆಗೆ ಕಳಿಸಿದಾಗ ರಾತ್ರಿಯಾಗಿತ್ತು. ಪರದಾ ಪದ್ಧತಿಯಿಂದ ಹೆಣ್ಣುಮಕ್ಕಳಿಗಾಗಬಹುದಾದ ಅನಾನುಕೂಲಗಳ ಜೊತೆಯಲ್ಲಿ ಎಂಥವರು ಕೂಡ ಬಂದು ದೇಶಕಾರ್ಯದಲ್ಲಿ ಸಹಕರಿಸಿದರು ಎನ್ನುವುದಕ್ಕೆ ಈ ನಿದರ್ಶನ ಸಾಕು.



ಗಾಯಾಳು ರಾಜೇಂದ್ರ

## ಲಾಠಿಯ ರುಚಿ

ಭಾಗಲಪುರ ಘಾಟಕ್ಕೆ ಹೋಗುವಲ್ಲಿಗೆ ರೇಲ್ವೆ ಜಂಕ್ಷನ್ ಬಿಹಪುರ ಎಂಬಲ್ಲಿ ಇನ್ನೊಂದು ಬಗೆಯ ಸತ್ಯಾಗ್ರಹ ನಡೆಯಿತು. ರೇಲ್ವೆ ನಿಲ್ದಾಣದ ಹತ್ತಿರ ಕೆಲವು ಕಾಂಗ್ರೆಸ್ ಕಾರ್ಯಕರ್ತರು ಒಂದು ಆಶ್ರಮವನ್ನು ನಡಸಿಕೊಂಡು ಹೋಗುತ್ತಿದ್ದರು ಹತ್ತಿರದಲ್ಲಿಯೆ ಇದ್ದ ಒಂದು ಗಾಂಜಾ ಅಂಗಡಿಯನ್ನವರು ಪಿಕೆಟ್ ಮಾಡಿದ್ದಕ್ಕಾಗಿ ಪೋಲೀಸರು ಅವರನ್ನು ಹೊರತಳ್ಳಿ ಆಶ್ರಮವನ್ನು ವಶಪಡಿಸಿಕೊಂಡರು. ಆಶ್ರಮವನ್ನು ತಿರುಗಿ ಪಡೆಯುವುದಕ್ಕಾಗಿ ದಿನದಿನವೂ ಸತ್ಯಾಗ್ರಹಿ

ಗಳ ಪಥಕಗಳು ಬಂದು, ಬಂಧಿತರಾಗಿ ಹೋಗುತ್ತಿದ್ದ ಸಮಾಚಾರ ನನಗೆ ತಿಳಿದಾಗ ನಾನು, ಅನಂತ ಪ್ರಸಾದ ಮತ್ತು ಕಮಲೇಶ್ವರೀ ಪ್ರಸಾದ ಎಂಬ ಇಬ್ಬರು ಎಂ. ಎಲ್. ಎ ಗಳು, ಮತ್ತು ಭಾಗಲಪುರದ ಹೆಸರಾದ ವಕೀಲರಾದ ಪಟಲ ಬಾಬು ಅವರನ್ನು ಕರೆದುಕೊಂಡು ಅಲ್ಲಿಗೆ ಹೋದೆ. ಪೋಲೀಸರು ಲಾಠೀ ಪ್ರಹಾರ ಮಾಡಿ ಸತ್ಯಾಗ್ರಹಿಗಳನ್ನು ನೋಡಬಂದ ಜನಸಮುದಾಯವನ್ನು ಚದುರಿಸಿದರು. ಮುಂದೆ ಪೋಲೀಸ ಅಧಿಕಾರಿಯು ದೂರದಲ್ಲಿ ನಿಂತಿದ್ದ ನಮ್ಮೆಡೆಗೆ ಬಂದು ನಮ್ಮನ್ನು ಲಾಠಿಗಳಿಂದ ಹೊಡೆಯಬೇಕೆಂದು ಹೇಳಿದ. ಲಾಠೀ ಪ್ರಹಾರ ನಡೆಯಿತು. ನಾಲ್ಕೈದು ಕಡೆಗಳಲ್ಲಿ ನನಗೆ ಗಾಯವಾಯಿತು. ರಾಮಗತಿ ಸಿಂಗ ಎನ್ನುವ ವಾಲಂಟಿಯರು ನಡುವೆ ಬಂದಿರದಿದ್ದರೆ ನನಗೆ ಇನ್ನೂ ಗಾಯವಾಗಬಹುದಿತ್ತು. ಅಬ್ದುಲ್ ಬಾರಿ ನೆತ್ತರು ಸುರಿಸುತ್ತ ನೆಲಕ್ಕೆ ಬೀಳುವಂತಾಯಿತು. ಪಟಲ ಬಾಬುಗಳನ್ನು ಬಂಧಿಸಲಾಯಿತು. ಹಾಗೆ ಲಾಠಿ ಪ್ರಹಾರಕ್ಕೆ ಆಜ್ಞೆ ಇತ್ತ ಪೋಲೀಸ್ ಅಧಿಕಾರಿ ಛಪರಾ ಶಾಲೆಯಲ್ಲಿ ನಾಲ್ಕು ವರ್ಷ ನನ್ನ ಸಹಪಾಠಿಯಾಗಿದ್ದ!

ನಮ್ಮ ಜೊತೆಯಲ್ಲಿ ಬಂದಿದ್ದ ಇಬ್ಬರೂ ಎಂ. ಎಲ್. ಎ.ಗಳು ವಿಧಾನ ಸಭೆಯಲ್ಲಿ ಈ ಸನ್ನಿವೇಶವನ್ನು ವಿವರಿಸಿ ತಮ್ಮ ರಾಜೀನಾಮೆಯನ್ನಿತ್ತರು. ಬಿಹಪುರದ ಸತ್ಯಾಗ್ರಹದ ಇನ್ನೊಂದು ಉಲ್ಲೇಖನೀಯವಾದ ಸಂಗತಿಯೆಂದರೆ ಲಾಠೀ ಪ್ರಹಾರವನ್ನು ಮಾಡಬೇಕಾಗಿದ್ದ ಪೋಲೀಸ ಪಡೆಯಲ್ಲಿಯೆ ಬಿಕ್ಕಟುಗಳು ಹುಟ್ಟುವುದಕ್ಕೆ ಮೊದಲಾದದ್ದು. ಅಬ್ದುಲ್ ಬಾರಿ ನೆಲಕ್ಕೆ ಬಿದ್ದ ಮೇಲೂ ಆತನನ್ನು ಹೊಡೆದ ಪೋಲೀಸ ಎರಡನೆಯ ಬಾರಿ ಲಾಠಿಯನ್ನು ಎತ್ತಿದಾಗ ಇನ್ನೊಬ್ಬ ಪೋಲೀಸ ಅದನ್ನು ತನ್ನ ಲಾಠಿಯಿಂದ ತಡೆದದ್ದನ್ನು, ಮೂರನೆಯವನೊಬ್ಬ ಬಂದು ಮೊದಲನೆಯವನನ್ನು ಗದರಿಸಿ ಹೊಡೆದದ್ದನ್ನು ಅಬ್ದುಲ್ ಬಾರಿಯೆ ನನಗೆ ಹೇಳಿದರು! ಮರುದಿನ ರಾಮವಿಲಾಸ ಶರ್ಮಾ ಎಂಬ ಕಾರ್ಯಕರ್ತನನ್ನು ಆಶ್ರಮದಲ್ಲಿಯ ಸಾಮಾನುಗಳ ಜಗೆಯಲ್ಲಿ ಆ ಪೋಲೀಸ ಅಧಿಕಾರಿಯ ಕಡೆಗೆ ಕಳಿಸಿದಾಗ ಶರ್ಮಾ ಆತನನ್ನು ಕುರಿತು ವ್ಯಂಗ್ಯವಾಗಿ, "ನೀವು ನಿನ್ನೆ ಲಾಠಿಯಿಂದ ಹೊಡೆಯಿಸಿದ ರಾಜೇಂದ್ರ ಬಾಬುಗಳು ನಿಮ್ಮ ಸಹಪಾಠಿಗಳಂತೆ. ಹಳೆಯ ಗೆಳೆಯನೊಡನೆ ಮಾತನಾಡಲಾಗಲಿಲ್ಲ ಎಂದು ತುಂಬ ವ್ಯಥೆಪಟ್ಟರು" ಎಂದು ಹೇಳಿದಾಗ ಪೋಲೀಸ ಅಧಿಕಾರಿಯ ಕಣ್ಣುಗಳು ತೇವಗೊಂಡವಂತೆ!

## ಪ್ರಥಮ ಕಾರಾವಾಸ

ಇದಾದ ನಂತರ ನಾನು ಬಹಳ ದಿನ ಹೊರಗೆ ಉಳಿಯುವುದಿಲ್ಲವೆನ್ನುವುದು ಸ್ಪಷ್ಟವಾಗಿತ್ತು. ಎಣಿಸಿದ ಹಾಗೆಯೆ ಮುಂದೆ ಕೆಲವೇ ದಿನಗಳಲ್ಲಿ ಛಪರಾ ಜಿಲ್ಹೆಯಲ್ಲಿ ಮೂರು ದಿನಗಳ ಸಂಚಾರವನ್ನು ಮುಗಿಯಿಸಿಕೊಂಡು ಅಣ್ಣನ ಮನೆಗೆ ಬರುತ್ತಿರುವಾಗ ದಾರಿಯಲ್ಲಿ ನನ್ನನ್ನು ಬಂಧಿಸಲಾಯಿತು. ಮನೆಗೆ ಬಂದು ಮುಂದೆ ಅರ್ಧ ಗಂಟೆಯಲ್ಲಿ ಪೋಲೀಸಕಾರ್ ಏರಿದೆ. ಅಲ್ಲಿಂದ ನನ್ನನ್ನು ಛಪರಾ ಜೇಲಿಗೆ ಕರೆದೊಯ್ಯಲಾಯಿತು. ಜೇಲಿನ ಮೊದಲ ಅನುಭವ ಅದು ನನಗೆ. ತಂದ ಊಟವನ್ನು ನಾನೊಬ್ಬನೆ ಬೇರೆಡೆಯಲ್ಲಿ ಕುಳಿತು ಉಣ್ಣುವುದಾದರೆ ಮನೆಯಿಂದ ಊಟ ತರಿಸಿಕೊಳ್ಳಬಹುದೆಂಬ ಸೂಚನೆಯನ್ನು ನಾನು ನಿರಾಕರಿಸಿದೆ. ಮುಂದೆ ಒಂದೆರಡು ದಿನಗಳಲ್ಲಿ ಮನೆಯಿಂದ ಮಾವಿನಹಣ್ಣುಗಳನ್ನು ಕಳುಹಿಸಿದ್ದರು. ನಾನೊಬ್ಬನೇ ತಿನ್ನಬಹುದಾದರೆ ತೆಗೆದುಕೊಳ್ಳಬಹುದೆಂದು ಹೇಳಿದ್ದರಿಂದ ಅದನ್ನು ಹಿಂದಿರುಗಿ ಕಳುಹಿಸಿದೆ. ನನ್ನ ವಿಚಾರಣೆಯನ್ನು ನಡಸಿದ ಮ್ಯಾಜಿಸ್ಟ್ರೇಟ ನಾನು ಪಾಟನಾದಲ್ಲಿ ವಕೀಲಿ ಮಾಡುತ್ತಿದ್ದಾಗ ನನ್ನ ಪಕ್ಷಕಾರನಾಗಿ ನನಗೆ ಪರಿಚಿತನಿದ್ದ. ನನ್ನ ಪರವಾಗಿ ವಾದಿಸಬೇಕಾದದ್ದೇನೂ ಇರಲಿಲ್ಲವಾದ್ದರಿಂದ ವಿಚಾರಣೆ ಸ್ವಲ್ಪದರಲ್ಲಿಯೆ ಮುಗಿದು ಪಿನಲ್ ಕೋಡಿನ ಯಾವುದೋ ಒಂದು ಕಲಮಿನನ್ವಯ ಆರು ತಿಂಗಳ ಶಿಕ್ಷೆ ವಿಧಿಸಲಾಯಿತು.

ವಿಚಾರಣೆ ಮುಗಿದ ನಂತರ ನನ್ನನ್ನು ಎಲ್ಲಿಗೆ ಕರೆದೊಯ್ಯಬಹುದೆನ್ನುವುದು ಐದಾರು ದಿನವಾದರೂ ನಿರ್ಣಯವಾಗಲಿಲ್ಲ. ಒಂದು ದಿನ ಡಿಸ್ಟ್ರಿಕ್ಟ

ಮ್ಯಾಜಿಸ್ಟ್ರೇಟರು ಸುತ್ತುಸುತ್ತಾಗಿ ಬಳಸುದಾರಿಗಳಿಂದ ನನ್ನನ್ನು ಹಜಾರಿಬಾಗ ಸೆಂಟ್ರಲ್ ಜೇಲಿಗೆ ಕರತಂದರು. ನೇರವಾಗಿ ಬಹಿರಂಗವಾಗಿ ತಂದಿದ್ದರೆ ದಾರಿಯಲ್ಲಿ ಮತಪ್ರದರ್ಶನಾದಿಗಳು ನಡೆಯಬಹುದೆಂದು ಹಾಗೆ ಮಾಡಲಾಗಿತ್ತು. ನಾವು ಹೊರಟಲ್ಲಿಂದ ಹಜಾರಿಬಾಗ ಪೂರ್ವಕ್ಕಾದರೂ ಕಾರು ಪಶ್ಚಿಮಕ್ಕೆ ಹೋಗಿತ್ತು. ಹೀಗಾಗಿ ನನ್ನನ್ನು ಎಲ್ಲಿಗೊಯ್ಯಲಾಯಿತೆಂದು ನನ್ನ ಅಣ್ಣನಿಗೂ ತಿಳಿಯದೆ ಹೋಯಿತಂತೆ.

ಹಜಾರಿಬಾಗ್ ಜೇಲಿನಲ್ಲಿ ಅನೇಕ ಮಿತ್ರರು, ಸಹಕಾರ್ಯಕರ್ತರು ಆಗಲೆ ಬಂದಿದ್ದರಿಂದ ಅಲ್ಲಿಯ ನನ್ನ ವಾಸ ಯಾವ ಬಗೆಯಲ್ಲಿಯೂ ತೊಂದರೆಯದಾಗಲಿಲ್ಲ. ಆಗಿನ ಕಾಲದಲ್ಲಿ ಕೈದಿಗಳ ವರ್ಗೀಕರಣದ ಪದ್ಧತಿ ಇರಲಿಲ್ಲ. ಓದಲು ಪುಸ್ತಕಗಳು ಸಿಕ್ಕುತ್ತಿದ್ದವು. ಇಷ್ಟೆ, ಆ ಪುಸ್ತಕಗಳು ಜೇಲ್ ಅಧಿಕಾರಿಗಳ ಕೈಯಲ್ಲಿ ಹಾಯ್ದು 'ಪಾಸ್' ಆಗಿ ಬರಬೇಕು ನಮಗೆ ಕೊಡಬಹುದಾದ ಪುಸ್ತಕಗಳನ್ನು ಪಾಸ್ ಮಾಡುವ ಪದ್ಧತಿ ವಿಚಿತ್ರವಾಗಿತ್ತು. ಪುಸ್ತಕದ ಹೆಸರಿನಲ್ಲಿ ಪಾಲಿಟಿಕ್ಸ್ ಅಥವಾ ಪೊಲಿಟಿಕಲ್ ಎಂಬ ಶಬ್ದಗಳಿದ್ದರೆ ಆ ಪುಸ್ತಕ ಕೊಡಲಾಗುತ್ತಿರಲಿಲ್ಲ. ಆ ಶಬ್ದಗಳಿಲ್ಲದೆ ರಾಜಕೀಯಕ್ಕೆ ಸಂಬಂಧಿಸಿದ ಬೇಕಾದಂಥ ಪುಸ್ತಕವೂ ಪಾಸಾಗುತ್ತಿತ್ತು. A Textbook of Political Economy ಎಂಬಂಥ ಅರ್ಥಶಾಸ್ತ್ರದ ಪಾಠ್ಯಪುಸ್ತಕ ಬೇಡಿದರೆ ಸಿಕ್ಕುತ್ತಿರಲಿಲ್ಲ; ಆದರೆ ABC of Communism ಆಗಲಿ, Theory of the Leisure Class ಆಗಲಿ ಸಹಜವಾಗಿಯೇ ಸಿಕ್ಕುತ್ತಿದ್ದವು. ಜೇಲಿನಲ್ಲಿದ್ದ ಆ ಕಾಲದಲ್ಲಿ ನಾನು ಗಾಂಧೀಜಿಯವರ ಲೇಖನಗಳನ್ನು ಬೇರೆ ಬೇರೆ ವಿಷಯಗಳಿಗೆ ಸಂಬಂಧಿಸಿದ ಹಾಗೆ ಒಂದು ಕ್ರಮದಲ್ಲಿ ಜೋಡಿಸಿ ಒಂದೊಂದು ವಿಷಯದ ಲೇಖನಮಾಲೆಗೆ ಮುನ್ನುಡಿ ಬರೆದು ಪ್ರಕಾಶನಕ್ಕೆ ಸಿದ್ಧಗೊಳಿಸಿದೆ. ಬಿಡುಗಡೆಯಾದ ನಂತರ ಹಸ್ತಪ್ರತಿಯನ್ನು ಸದಾಕತ್ ಆಶ್ರಮದಲ್ಲಿರಿಸಿದ್ದೆ. ಮುಂದೆ ಆಶ್ರಮವನ್ನು ಸರಕಾರದವರು ಝಡತಿ ಮಾಡಿದಾಗ ಮಾಯವಾದ ಹಸ್ತಪ್ರತಿ ಮಾಯವಾಗಿಯೆ ಹೋಯಿತು.

ನನ್ನ ಜೇಲುವಾಸದ ಅವಧಿ ಮುಗಿಯುವ ಸುಮಾರಿಗೆ ಮೊದಲನೆಯ ದುಂಡುಮೇಜಿನ ಪರಿಷತ್ತಿನ ಮಾತು ಬಂದಿತ್ತು. ರಾಮ್ಸೆ ಮ್ಯಾಕ್ಡೋನಲ್ಡರ ಬ್ರಿಟಿಶ್ ಕೂಲಿಕಾರ ಮಂತ್ರಿಮಂಡಲ ಭಾರತದ ಸಮಸ್ಯೆಗೊಂದು ಪರಿಹಾರವನ್ನು ನೀಡಬಹುದು ಎಂಬ ನಿರೀಕ್ಷೆ ಬಲಗೊಳ್ಳುತ್ತಲಿತ್ತು. ನನ್ನ ಬಿಡುಗಡೆಯಾದ ಕೂಡಲೆ ನಾನು ಮೊದಲು ಮುಂಬಯಿಗೆ, ಆಮೇಲೆ ಅನಾರೋಗ್ಯದಿಂದ ಬಳಲುತ್ತಿದ್ದ ಮೋತೀಲಾಲರ ಕಡೆಗೆ ಹೋದೆ. ಮೊದಲನೆಯ ದುಂಡುಮೇಜಿನ ಪರಿಷತ್ತಿನಲ್ಲಿ ಕಾಂಗ್ರೆಸ್ಸು ಭಾಗವಹಿಸಿರಲಿಲ್ಲ. ನಾನು ಅಲ್ಹಾಬಾದಿಗೆ ಬಂದ ಕೆಲವೇ ದಿನಗಳಲ್ಲಿ ಪರಿಷತ್ತು ವಿಫಲವಾಗುವುದರಲ್ಲಿತ್ತು.

## ಬಿಡುಗಡೆ ಮತ್ತು ಬಂಧನ

ಮೋತೀಲಾಲರ ಆರೋಗ್ಯ ದಿನದಿನವೂ ಕೆಡುತ್ತಲಿದ್ದಿತು. ಅವರ ಕೊನೆಯ ದಿನಗಳಲ್ಲಿ ಅವರ ಹತ್ತಿರ ಇರುವ ಭಾಗ್ಯ ನನ್ನದಾಗಿತ್ತು. ಅವರ ಅನಾರೋಗ್ಯದ ನಿಮಿತ್ತ ಜವಾಹರಲಾಲರನ್ನು ಬಿಡುಗಡೆ ಮಾಡಲಾಗಿತ್ತು. ತಮ್ಮ ಊದಿಕೊಂಡ ಮುಖವನ್ನು ಕುರಿತು, "ನಾನು ಇನ್ನು ಮೇಲೆ ಸೌಂದರ್ಯ ಸ್ಪರ್ಧೆಯಲ್ಲಿ ಭಾಗವಹಿಸುವವನಿದ್ದೇನೆ" ಎಂದು ಮೋತೀಲಾಲರು ಹೇಳಿದ ಮಾತಿಗೆ ಯಾರೂ ನಗುವಂತಿರಲಿಲ್ಲ. ಉಪಚಾರಕ್ಕಾಗಿ ಮರುದಿನ ಅವರನ್ನು ಲಖನೋಕ್ಕೆ ಕರೆದೊಯ್ಯಲಾಯಿತು. ಲಖನೋಕ್ಕೆ ತಲುಪಿದ್ದೇ ಅವರ ದೇಹಾವಸಾನವಾಯಿತು.

ಲಾರ್ಡ್ ಐರ್ವಿನರೊಡನೆ ಮಾಡಿಕೊಂಡ ಸಂಧಾನದ ಪರಿಣಾಮವಾಗಿ ಗಾಂಧೀಜಿಯವರು ಸತ್ಯಾಗ್ರಹವನ್ನು ಹಿಂತೆಗೆದುಕೊಂಡರು. ಕಾಂಗ್ರೆಸಿನ ಏಕಮೇವಾದ್ವಿತೀಯ ಪ್ರತಿನಿಧಿಯಾಗಿ ಎರಡನೆಯ ದುಂಡು ಮೇಜಿನ ಪರಿಷತ್ತಿನಲ್ಲಿ ಭಾಗವಹಿಸಲು ಲಂಡನ್ನಿಗೆ ತೆರಳಿದರು. ಆದರೆ ಆಮಂತ್ರಿತರಾದ ಪ್ರತಿನಿಧಿಗಳ ಪ್ರಮಾಣವನ್ನು

ಸಮಸಿಸಿದಾಗಲೆ ಪರಿಷತ್ತು ಯಾವ ನಿಲುಗಡೆಗೂ ಬರಲಾರದೆನ್ನುವುದು ಸ್ಪಷ್ಟವಾಗಿತ್ತು. ಮ್ಯಾಕ್‌ಡೋನಲ್ಡರು ಕೊಡಮಾಡಿದ ಜಾತೀಯ ಐತೀರ್ಪನ್ನು ಜೀವವಿರುವವರೆಗೂ ಪ್ರತಿಭಟಿಸುವೆನೆಂದು ಗಾಂಧೀಜಿಯವರು ಹೇಳಿ ಬರಿಗೈಯಿಂದ ಹಿಂದಿರುಗಿದರು. ಹಿಂದಿರುಗಿದಾಗ ಅವರನ್ನು ಸೆರೆಹಿಡಿಯಲಾಯಿತು. ದೇಶದಲ್ಲಿ ದಬ್ಬಾಳಿಕೆ ಎಂದಿಲ್ಲದ ಪ್ರಮಾಣದಲ್ಲಿ ಪ್ರಾರಂಭವಾಯಿತು. ಐರ್ವಿನ್ ಸಂಧಾನದಿಂದುಂಟಾದ ಆಶಾಮಯವಾದ ವಾತಾವರಣ ಬದಲಾಗಿ ಸರಕಾರ ಕಾಂಗ್ರೆಸಿನ ಮೇಲೆ ಸೇಡು ತೀರಿಸಿಕೊಳ್ಳುತ್ತಿದ್ದ ಹಾಗಿತ್ತು. ಐರ್ವಿನ್‌ರ ಸಂಧಾನ ಪ್ರಯತ್ನಗಳು ಅವರಿಗೆ, ಅಧಿಕಾರಿಗಳಿಗೆ ಸಮ್ಮತವಾಗಿರಲಿಲ್ಲ. ಐರ್ವಿನ್‌ರ ಬದಲಾಗಿ ವಿಲಿಂಗ್ಡನ್ನರು ಬಂದಾಗ ಕಾಂಗ್ರೆಸ್ಸನ್ನು ಪೂರ್ತಿಯಾಗಿ ಹತ್ತಿಕ್ಕುವುದೇ ಅವರ ಮುಖ್ಯ ಧೋರಣೆಯಾಗಿದ್ದ ಹಾಗಿತ್ತು. ಕಾಂಗ್ರೆಸನ್ನು, ಅದಕ್ಕೆ ಅಧೀನವಾದ ಸಂಸ್ಥೆಗಳನ್ನು ಅಕ್ರಮವೆಂದು ಸಾರಿ, ಅದರ ಆಸ್ತಿಪಾಸ್ತಿಗಳನ್ನೆಲ್ಲ ವಶಪಡಿಸಿಕೊಳ್ಳಲಾಯಿತು. ಜೇಲುಗಳು ಕಿಕ್ಕಿರಿದು ತುಂಬಿದವು. ಸಭೆ ಮೆರವಣಿಗೆಗಳಿಗೆ ದೇಶದಾದ್ಯಂತ ಪ್ರತಿಬಂಧವಾಯಿತು. ಕಾಂಗ್ರೆಸ್ ಸಂಸ್ಥೆಯನ್ನು, ರಾಷ್ಟ್ರೀಯ ಆಂದೋಲನವನ್ನು ಮುರಿದುಬಿಡುವ ಹಟವನ್ನು ವಿಲಿಂಗ್ಡನ್ ತೊಟ್ಟ ಹಾಗಿತ್ತು.

ಜಾತೀಯ ಐತೀರ್ಪಿನ ಪ್ರತಿಭಟನೆಗೆಂದು ಗಾಂಧೀಜಿಯವರು ಮರಣಾಂತಿಕ ಉಪವಾಸವನ್ನು ಯರವಡಾ ಜೇಲಿನಲ್ಲಿ ಪ್ರಾರಂಭಿಸಿದರು. ನಾನು ಪುಣೆಗೆ ಧಾವಿಸಿದೆ. ಅಲ್ಲಿ ಆಗಲೆ ಬಂದಿದ್ದ ರಾಜಗೋಪಾಲಾಚಾರಿ, ಮಾಲವೀಯ, ಥಕ್ಕರ ಬಾಪ್ಪಾ ಎಲ್ಲರೊಡನೆ ಸೇರಿ ಡಾ. ಅಂಬೇಡಕರರೊಡನೆ ಮಾತುಕತೆಗಾರಂಭಿಸಿ ಸಂಧಾನ ಮಾಡಿಕೊಂಡು ಗಾಂಧೀಜಿಯವರ ಉಪವಾಸ ಮುಕ್ತಾಯವಾಗುವಂತೆ ಮಾಡಿದೆವು. ಆ ಐತೀರ್ಪು ಒಟ್ಟಿನಲ್ಲಿ ಬೇರೆಬೇರೆ ಜಾತೀಯ ಗುಂಪುಗಳು ರಾಜಕೀಯ ಅಧಿಕಾರದ ದೃಷ್ಟಿಯಿಂದ ತಮ್ಮ ತಮ್ಮ ಬೇಡಿಕೆಗಳನ್ನು ಬೆಳೆಯಿಸಿ ಹಟಹಿಡಿದು ಐಕ್ಯಭಂಗಕ್ಕೆ ಕಾರಣವಾಗುವಂತಾಗಿದ್ದವು ಮುಸ್ಲಿಂರಿಗೆ ಕಾದಿಟ್ಟ ಸ್ಥಳಗಳಾದರೆ ತಮಗೇಕೆ ಬೇಡ ಎಂದು ಸಿಖರು, ಆಯಾಯ ಜಾತೀಯರಿಗೆ ಎಷ್ಟು ಸ್ಥಾನಗಳಿರಬೇಕು ಎನ್ನುವ ಪ್ರಶ್ನೆಗಳು ತಲೆದೋರಿದ್ದವು. ಈ ಬಿರುಕುಗಳನ್ನು ಸರಿಪಡಿಸಲೆಂದು ಅಲ್ಲಾಬಾದದಲ್ಲಿ ಡಾ. ಕಟಜು ಅವರ ಮನೆಯಲ್ಲಿ "ಯುನಿಟಿ ಕಾನ್ಫರೆನ್ಸ್" ಕರೆಯಲಾಗಿತ್ತು. ಅದರ ಪ್ರಯತ್ನ ಕೆಲಮಟ್ಟಿಗೆ ಯಶಸ್ವಿಯಾಗಿದ್ದು ಕಲ್ಕತ್ತೆಯಲ್ಲಿ ಮಾತುಕತೆಗಳು ಮುಂದುವರಿಯಬೇಕಾಗಿದ್ದಾಗ ಮುಸ್ಲಿಂರಿಗೆ ನೂರಕ್ಕೆ ಮೂವತ್ತುಮೂರರ ಪ್ರಾತಿನಿಧ್ಯವಿರಬೇಕೆಂದು ಬ್ರಿಟಿಶ ಸರಕಾರದ ಘೋಷಣೆಯ ಪರಿಣಾಮವಾಗಿ ಕಲ್ಕತ್ತೆಯ ಮಾತುಕತೆಗಳು ಮೊದಲಾಗುವ ಮೊದಲೆ ಮುಕ್ತಾಯವಾದಂತಾದವು.

ಜೇಲಿನ ಹೊರಗಡೆ ಉಳಿದು ಯಾವ ಪ್ರಯೋಜನವಾಗುವ ಹಾಗೆ ಕಾಣಲಿಲ್ಲ. ಕಾಂಗ್ರೆಸ್ ಸಂಸ್ಥೆಗಳ ಹೆಸರಿನಲ್ಲಿಯ ಹಣವನ್ನೆಲ್ಲ ಸರಕಾರ ವಶಪಡಿಸಿಕೊಂಡಿತ್ತು. ಹೊರಗಿದ್ದ ಕಾರ್ಯಕರ್ತರಿಗೆ ಹಣದ ಅಗತ್ಯವಿದ್ದಿತು. ಈ ಪ್ರಯತ್ನದಲ್ಲಿ ನಾನಿದ್ದಾಗ ಕಲಕತ್ತೆಯಲ್ಲಿ ಒಂದು ದಿನ ಬೀದಿಯಲ್ಲಿ ಹೊರಟಾಗ ಯಾರೋ ಒಬ್ಬರು ನನ್ನ ಹತ್ತಿರ ಬಂದು ನಾನು ಉಳಿದುಕೊಂಡಿದ್ದ ಮನೆಯ ವಿಳಾಸವನ್ನು ಕೇಳಿಕೊಂಡು ಮರುದಿನ ನನ್ನನ್ನು ಕಾಣಬಂದರು. ಅದು ಇದು ಮಾತನಾಡಿ ಆತ ಹೊರಡಬೇಕೆನ್ನುತ್ತಿದ್ದಾಗ ಕೆಳದನಿಯಲ್ಲಿ, "ಬಿಹಾರ ಮತ್ತು ಮದ್ರಾಸಿನಲ್ಲಿ ಕಾಂಗ್ರೆಸ್ ಕೆಲಸಕ್ಕಾಗಿ ಹಣವಿಲ್ಲದಾಗಿದೆಯಂತೆ, ಹೌದೆ?" ಎಂದು ಕೇಳಿದ ನಾನು ಹೌದು ಎಂದು ತಲೆಯಲ್ಲಾಡಿಸಿದಾಗ ಆ ವ್ಯಕ್ತಿ ನೋಟಿನ ಒಂದು ಕಟ್ಟನ್ನು ನನ್ನ ಕೈಯಲ್ಲಿಟ್ಟು ಹೊರಟುಹೋಯಿತು. ಎಣಿಸಿ ನೋಡಿದಾಗ ಹತ್ತು ಸಾವಿರ ರೂಪಾಯಿಗಳಿದ್ದವು? ಕಾಂಗ್ರೆಸ್ಸಿನ ಕೆಲಸಕ್ಕೆ ಹಣ ಈ ರೀತಿ ಬರುತ್ತಿತ್ತು.

೧೯೩೩ ಜನವರಿ. ಗಾಂಧೀಜಿಯವರ ಸೆರೆ

ಯಾಗಿ ೪ನೆಯ ದಿನಾಂಕಕ್ಕೆ ಒಂದು ವರ್ಷವಾಗುತ್ತಿತ್ತು. ಆ ದಿನವೇ ನಾನು ಮತ್ತೆ ಸೆರೆಯಾಗಬೇಕೆಂದು ಸಂಕಲ್ಪಿಸಿಕೊಂಡಿದ್ದೆ. ಆದರೆ ತಡೆಯಬೇಕಾಯಿತು. ಮುಂದೆ ಕೆಲವು ದಿನಗಳ ನಂತರ ಆಚಾರ್ಯ ಕೃಪಲಾನಿಯವರು ಕೆಲವು ಹಣ ಬೇಡಿದ್ದರಿಂದ ಯಾರ ಹೆಸರಿನಲ್ಲಿಯೊ ಒಂದು ಕಾಗದವನ್ನು ಬರೆದು ಕೊಟ್ಟೆ. ಅದನ್ನವರು ತೆಗೆದುಕೊಂಡು ಹೋಗುತ್ತಿದ್ದ ಹಾಗೆ ಪಾಟನಾ ನಿಲ್ದಾಣದಲ್ಲಿ ಅವರನ್ನು ಬಂಧಿಸಲಾಯಿತು. ನಾನು ಕೊಟ್ಟ ಕಾಗದವನ್ನು ಕೃಪಲಾನಿಯವರು ಹರಿದು ಹಾಕಿದರೂ ಪೋಲೀಸರು ತುಣುಕುಗಳನ್ನೆತ್ತಿಗೊಂಡು ಬಂಕೀಪುರ ಜೇಲಿನಲ್ಲಿ ಅವರ ಮೇಲೆ ಕೇಸು ಹಾಕಿದರು. ಆ ಕೇಸಿನ ವಿಚಾರಣೆ ನಡೆದಾಗ ನಾನು ಅಲ್ಲಿಗೆ ಹೋಗಿದ್ದೆ. ಜೇಲಿನಿಂದ ಹೊರಬರುತ್ತಿದ್ದ ಹಾಗೆ ನನ್ನನ್ನು ಬಂಧಿಸಿ ಒಳಗಡೆ ಬರಬೇಕೆಂದರು. ಕೃಪಲಾನಿಯವರಿಗೆ ಒಂದೂವರೆ ವರ್ಷ, ನನಗೆ ಹದಿನೈದು ತಿಂಗಳು ಶಿಕ್ಷೆಯಾಯಿತು.

ಜುಲೈ ತಿಂಗಳಲ್ಲಿ ಮೊದಲಾದ ಕಾಹಿಲೆ ನನ್ನನ್ನು ಮುಂದೆ ಆರು ತಿಂಗಳ ಕಾಲ ಬಳಲಿಸಿತು. ಹಜಾರಿಬಾಗ್‌ದಿಂದ ಬಂಕೀಪೂರ ಜೇಲಿಗೆ, ಜೇಲಿನಿಂದ ಹಾಸ್ಪಿಟಲಿಗೆ ಹೀಗೆ ಮೂರು ಸಾರೆ ಸ್ಥಳಾಂತರ ನನ್ನ ಚಿಂತಾಜನಕವಾಗಿದ್ದ ದೇಹಸ್ಥಿತಿಯ ಮೂಲಕ ಅಗತ್ಯವಾಯಿತು. ಪಾಟ್ನಾ ಹಾಸ್ಪಿಟಲ್‌ನಲ್ಲಿಯ ಡಾ॥ ಬಾನರ್ಜಿಯವರು ನನ್ನನ್ನು ಹೆಚ್ಚುಕಡಿಮೆ ಗುಣಪಡಿಸಿದ್ದರು. ಜೇಲಿಗೆ ಹಿಂದಿರುಗಿದ ಕೂಡಲೆ ಬೇನೆ ಮರುಕಳಿಸಿತು. ನಾನು ಹಾಸ್ಪಿಟಲ್ಲಿನಲ್ಲಿದ್ದರೆ ನನ್ನನ್ನು ಕಾಣಲು ಬಹಳ ಜನ ಬರುತ್ತಾರೆಂದು ನನ್ನನ್ನು ತಟ್ಟನೆ ಜೇಲಿಗೆ ಹಿಂದಿರುಗಿಸಿದ್ದರು. ಹೀಗೆ ಮೇಲಿಂದ ಮೇಲೆ ಸ್ಥಳಾಂತರಿಸುವುದಾದರೆ ನನಗೆ ಯಾವ ವೈದ್ಯಕೀಯ ಉಪಚಾರ ಬೇಕಾಗಿಲ್ಲವೆಂದು ಹೇಳಿದಾಗ ಅದನ್ನು ನಿಲ್ಲಿಸಿ ನನ್ನನ್ನು ಪೂರ್ತಿಯಾಗಿ ಗುಣವಾಗುವವರೆಗೆ ಪಾಟ್ನಾ ಹಾಸ್ಪಿಟಲ್‌ನಲ್ಲಿಯೆ ಇಡುತ್ತೇವೆಂದು ಹೇಳಿ ಹಾಗೆ ಮಾಡಿದರು.

## ಆ ಭೂಕಂಪ

ಈ ಸಲ ನನ್ನನ್ನು ಕಾಣಬಹುದಾದ ಜನರ ಮೇಲೆ ತುಂಬಾ ನಿರ್ಬಂಧಗಳನ್ನು ಹಾಕಲಾಗಿತ್ತು. ನನ್ನ ಹೆಂಡತಿ ಮತ್ತು ನನ್ನ ಸೊಸೆ ಮಾತ್ರ ನನ್ನನ್ನು ಬಂದು ಕಾಣುತ್ತಿದ್ದರಾದರೂ ಮಲಗಿದಲ್ಲಿಂದಲೆ ನಾನು ರಾಜಕೀಯ ಚಟುವಟಿಕೆಗಳನ್ನು ಮುಂದುವರಿಸುತ್ತಿದ್ದೆನೆಂಬ ಸಂಶಯ ಸರಕಾರಕ್ಕಿದ್ದ ಹಾಗಿತ್ತು. ಡಿಸೆಂಬರ್ ತಿಂಗಳ ಸುಮಾರಿಗೆ ನನ್ನ ಆರೋಗ್ಯದ ಬಗೆಯಲ್ಲಿ ಡಾಕ್ಟರರಿಗೆ ಚಿಂತೆಯಾಗಿರಬೇಕು. ಒಂದು ದಿನ ಮಧ್ಯಾಹ್ನ ಸರಕಾರವು ನನ್ನನ್ನು ಬಿಡುಗಡೆ ಮಾಡುವ ಆಜ್ಞೆಯನ್ನು ಒಂದೆರಡು ದಿನಗಳಲ್ಲಿ ಹೊರಡಿಸಲಿದೆ ಎಂಬ ಸಮಾಚಾರವನ್ನು ಸರ್ ಗಣೇಶ ಸಿಂಗ ದತ್ತರು ಹೇಳಿಕಳಿಸಿದರು.

ನನ್ನ ಸೊಸೆ ನನ್ನನ್ನು ನೋಡಬರುವಾಗ ಆಕೆಯ ನಾಲ್ಕು ವರ್ಷದ ಮಗುವನ್ನು ಜೊತೆಯಲ್ಲಿ ಬಿಡುತ್ತಿರಲಿಲ್ಲ. ಅದೇ ಸರಕಾರ ಈಗ ನನ್ನನ್ನು ಆರೋಗ್ಯದ ಕಾರಣಗಳಿಗಾಗಿ ಬಿಡುಗಡೆ ಮಾಡಬಯಸುತ್ತಿದೆ. ಸರಕಾರದ ಈ ವಿಚಿತ್ರ ರೀತಿಗಳನ್ನು ನೆನೆಯುತ್ತ ಬಿದ್ದುಕೊಂಡಾಗ ಅದೇ ನಿದ್ರೆ ಬರುವುದರಲ್ಲಿತ್ತು. ಬಲವಾಗಿ ನನ್ನ ಕಾಲು ಅಲುಗಾಡಿದ ಹಾಗಾಯಿತು. ನಿದ್ರೆ ನಿಶ್ಯಕ್ತಿಗಳಿಂದಾಗಿ ಹಾಗೆ ಭಾಸವಾಗಿರಬೇಕೆಂದುಕೊಂಡೆ. ಆದರೆ ಹೊರಗಡೆಯಿಂದ ನನ್ನ ಅತ್ತಿಗೆ ನೆಲ ಅಲುಗಾಡುತ್ತಿದೆ ಎಂದು ಕೂಗಿಕೊಂಡಳು. ಕ್ಷಣಾರ್ಧದಲ್ಲಿ ಹಾಹಾಕಾರ ಎದ್ದಿತು. ಎದ್ದು ಹೊರಗಡೆ ಬಂದು ಹುಲ್ಲುಗಾವಲಲ್ಲಿ ನಿಂತೆ. ನೆಲ ಬಲವಾಗಿ ಅಲುಗಾಡುತ್ತಿತ್ತು. ನೋಡುನೋಡುತ್ತಿದ್ದ ಹಾಗೆ ಎರಡಂತಸ್ತಿನ ದಾಯಿಗಳ ವಸತಿಗೃಹ ನೆಲಕ್ಕುರುಳಿತು. ಹಾಸ್ಪಿಟಲ್ ಕಟ್ಟಡದ ಕೆಲಭಾಗ ಕುಪ್ಪಳಿಸಿತು. ನೆಲ ಅಲುಗಾಡುವುದರ ಜೊತೆಗೆ ನೂರಾರು ರೈಲುಗಾಡಿಗಳು ಒಂದೇ ಕಾಲಕ್ಕೆ ವೇಗವಾಗಿ ಸಾಗುತ್ತಿದ್ದ ಹಾಗೆ ಭೂಗರ್ಭದಿಂದ ಭಯಂಕರವಾದ ಸದ್ದು ಕೇಳಬರುತ್ತಿತ್ತು. ಬೀಳುತ್ತಿದ್ದ ಕಟ್ಟಡಗಳಿಂದೆದ್ದ ಧೂಳು

ಗಗನಕ್ಕೇರುತ್ತಿತ್ತು. ಸುತ್ತಲಿನ ಜನರ ಚೀತ್ಕಾರದ ಜೊತೆಗೆ ಈ ಕೋಲಾಹಲ ಐದಾರು ನಿಮಿಷ ಸಂತತವಾಗಿ ನಡೆಯಿತು. ಹೀಗೆ ನಡೆದದ್ದು ಅಭೂತಪೂರ್ವವಾದ ಬಿಹಾರದ ಭಯಂಕರ ಭೂಕಂಪ !

ಸಾಯಂಕಾಲದ ವರೆಗೆ ಬಯಲಲ್ಲಿಯೆ ಉಳಿದೆ. ಊರಲ್ಲಿ ಸಾವಿರಾರು ಮನೆಗಳು ಬಿದ್ದ ವರದಿಗಳು ಬಂದವು. ಗಾಯಹೊಂದಿದವರನ್ನು ಆಸ್ಪತ್ರೆಗೆ ತರುವುದಕ್ಕಾರಂಭವಾಯಿತು. ಎಷ್ಟೋ ತಿಂಗಳಿಂದ ಹೊರಜಗತ್ತಿನ ಸಂಪರ್ಕ ತಪ್ಪಿದ ನನಗ ಹೊರಗಿನವರ ಕೂಡ ಮಾತಾಡುವ ಅವಕಾಶ ಬಂದಿತು. ಯಾರನ್ನು ಮಾತನಾಡಿಸಿದರೂ ಭೂಕಂಪದಿಂದಾದ ಅಪಾರ ನಷ್ಟದ ವಿವರಗಳೇ ಬರುತ್ತಿದ್ದುವು. ಎಷ್ಟು ಕೇಡಾಗಿದೆ, ಎಂಥದಾಗಿದೆ ತಿಳಿಯುವುದು ಆಗ ಸಾಧ್ಯವಿರದಿದ್ದರೂ ಕೇಡು ಅಪಾರವಾಗಿತ್ತು ಎನ್ನುವಲ್ಲಿ ಸಂದೇಹವಿರಲಿಲ್ಲ. ಆ ರಾತ್ರಿ ಮತ್ತೊಮ್ಮೆ ಭೂಕಂಪವಾಯಿತು. ಮರುದಿನ ಬೆಳಿಗ್ಗೆ ನನ್ನನ್ನು ನೋಡಲೆಂದು ಬಂದ ಡಾಕ್ಟರ್ ಬ್ಯಾನರ್ಜಿಯವರ ಕೂಡ ಮಾತನಾಡುತ್ತಿದ್ದಾಗ ಮೂರನೆಯ ಬಾರಿ ಭೂಕಂಪವಾಯಿತು. ಸೆಕ್ರೆಟರಿಯೆಟ್ ಭವನದ ಒಂದು ಭಾಗ ಬಿದ್ದಿತ್ತೆಂದೂ ಆ ಗೊಂದಲದ ಮೂಲಕವೆ ನನ್ನ ಬಿಡುಗಡೆ ನಿಧಾನವಾಗಿತ್ತೆಂದೂ ಬ್ಯಾನರ್ಜಿ ಹೇಳಿದರು. ಮುಂದೆ ಎರಡು ದಿನಗಳ ನಂತರ ಬೇಕಾದರೆ ನಾನು ಹೋಗಬಹುದೆಂದು, ಇಲ್ಲವಾದರೆ ಆಸ್ಪತ್ರೆಯಲ್ಲಿ ಉಪಚಾರಹೊಂದಬಹುದೆಂದು ನನಗೆ ತಿಳಿಸಲಾಯಿತು.

ದಿನ ಕಳೆದ ಹಾಗೆ ಅನಾಹುತದ ಭಯಂಕರ ಸ್ವರೂಪ ನಮಗೆ ಅರಿವಾಗತೊಡಗಿತು. ಸಂಪರ್ಕ ಸಾಧನಗಳೆಲ್ಲವೂ ಕಡಿದು ಹೋಗಿದ್ದರಿಂದ ವರದಿಗಳು ಬರುವುದಕ್ಕೆ ನಿಧಾನವಾಗುತ್ತಿತ್ತು. ಆದರೆ ಉತ್ತರ ಬಿಹಾರದಲ್ಲಿ, ವಿಶೇಷವಾಗಿ ಮೋಂಘೀರ ಜಿಲ್ಲೆಯಲ್ಲಿ ತೆರಪಿಲ್ಲದ ಹಾನಿಯಾಗಿತ್ತು. ನನ್ನಗಿನ್ನೂ ತುಂಬಾ ನಿಶ್ಶಕ್ತಿ ಆದರೆ ಪರಿಹಾರದ ಯೋಜನೆಯಲ್ಲಿ ನನ್ನ ದೇಹಾಲಸ್ಯ ಮರೆತು ಹೋಯಿತು. ಪರಿಹಾರ ಸಮಿತಿಯೊಂದನ್ನು ಏರ್ಪಡಿಸಿದೆ. ಆ ಕೆಲಸಕ್ಕನುಕೂಲವಾಗಲೆಂದು ಸರಕಾರದವರು ಕಾಂಗ್ರೆಸ್ ಕಾರ್ಯಕರ್ತರನ್ನು ಬಿಡುಗಡೆ ಮಾಡಿದರು. ಕಾಂಗ್ರೆಸ್ಸು ಬೇರೆಯಾಗಿ ಪರಿಹಾರ ನಿಧಿಯನ್ನು ಕೂಡಿಸದೆ ಸರಕಾರದೊಡನೆ ಸಹಕರಿಸಬೇಕೆಂದು ಸೂಚನೆ ಬಂದಾಗ ಇದ್ದ ಪರಿಸ್ಥಿತಿಯಲ್ಲಿ ಎರಡು ಬೇರೆ ಬೇರೆ ಪರಿಹಾರ ನಿಧಿಗಳಿರುವುದು ಒಳ್ಳೆಯದೆಂದೂ ಸರಕಾರದ ನಿಧಿಗಿಂತ ಹೆಚ್ಚಾಗಿ ಕಾಂಗ್ರೆಸಿನ ನಿಧಿಗೆ ಹಣ ದೊರೆತು ಉಪಯೋಗವಾಗುವುದೆಂದೂ ತಿಳಿಸಿದ್ದನ್ನು ಸರಕಾರ ಒಪ್ಪಿಕೊಂಡು ಪರಿಹಾರ ಕೆಲಸದಲ್ಲಿ ಸಹಾಯಮಾಡಿತು.

ಭೂಕಂಪದಿಂದ ಆದ ನಷ್ಟ, ಒದಗಿಸಬೇಕಾಗಿದ್ದ ಪರಿಹಾರ, ನಾಡಿನ ಮೂಲೆ ಮೂಲೆಯಿಂದಲೂ ಹಾರ್ದಿಕವಾಗಿ ಬಂದ ಸಹಾಯವನ್ನು ಸ್ವಲ್ಪದರಲ್ಲಿ ವಿವರಿಸುವುದು ಸಾಧ್ಯವಿಲ್ಲ. ಬಿದ್ದ ಮನೆಗಳ ಕೆಳಗೆ ಸಿಕ್ಕು ಸತ್ತವರ ಸಂಖ್ಯೆ ಎಣಿಕೆ ಮೀರಿತ್ತು. ಮನೆ ಇಲ್ಲದೆ, ಆಹಾರವಿಲ್ಲದೆ ಗೋಳಿಗೀಡಾದವರ ಸಂಖ್ಯೆಯೂ ಹಾಗೆಯೆ. ನದಿಗಳ ಪ್ರವಾಹ ವಿಸ್ತಾರಗಳು ಬದಲಾಗಿದ್ದವು. ಫಲದ್ರೂಪವಾಗಿದ್ದ ಭೂಮಿ ಹಲವೆಡೆಯಲ್ಲಿ ಮರಳುಗಾಡಾಗಿದ್ದವು. ಒದಗಿಸಬೇಕಾದ ಪರಿಹಾರದ ಸ್ವರೂಪವನ್ನು ನಿರ್ಣಯಿಸುವುಕ್ಕೆಯೆ ಕೆಲ ಕಾಲವಾಯಿತು. ಸಂತ್ರಸ್ತರಿಗೆ ಮೊದಲು ಅನ್ನ, ನೀರು, ಬಟ್ಟೆ ವಸತಿಸೌಕರ್ಯಗಳನ್ನು ಒದಗಿಸುವುದು; ಬಿದ್ದು ಹೋದ ಹಳ್ಳಿಗಳು ಬೇರೆಡೆ ನೆಲಸುವಂತೆ ವ್ಯವಸ್ಥೆ ಮಾಡುವುದು ; ಎಂದು ಮುಂತಾಗಿ ನೂರು ವಿಧದಲ್ಲಿ ಯೋಜನೆಗಳನ್ನು ಮಾಡುತ್ತಿದ್ದ ಹಾಗೆ ಮಳೆಗಾಲ ತೊಡಗಿ ಭೂಕಂಪದಲ್ಲಿ ನಡುಗಿದ ಭೂಪ್ರದೇಶ ನೆರೆಹಾವಳಿಗೀಡಾಯಿತು. ನೆರೆಹಾವಳಿಯ ನಂತರ ರೋಗರುಜಿನ

ದೇಶದ ಎಲ್ಲ ಕಡೆಯಿಂದಲೂ ಜನಧನ ಸಹಾಯ ಬಂದಿತು ಪರಿಹಾರ ಕಾರ್ಯ ಒಂದು ಸ್ವತಂತ್ರ ಸರಕಾರದ ರೀತಿಯಲ್ಲಿ ಕೆಲಸ ಮಾಡಿತು. ಗಾಂಧೀಜಿಯವರು, ಮತ್ತಿತರ ನಾಯ

ಕರು ಸಂಚಾರ ಕೈಕೊಂಡು ಸಲಹೆ ಕೊಟ್ಟರು. ಆ ಕಾಲದಲ್ಲಿ ಇಡೀ ದೇಶವೇ ಬಿಹಾರದ ದುಃಖ ದಲ್ಲಿ ಪಾಲುಗಾರನಾಗಿ ಪರಿಹಾರವನ್ನು ಒದವಿ ಸಿತು. ಅದರ ಕೆಲಸವನ್ನು ಸರಿಯಾಗಿ ನಡಸಿ ಕೊಂಡು ಹೋಗುವುದರ ಹೊರತು ಮುಂದೆ ಸುಮಾರು ಒಂದು ಒಂದೂವರೆ ವರ್ಷ ನಾನು ಮಾಡಬೇಕಾದುದೇನೂ ಇರಲಿಲ್ಲ. ನಾನು ಏನು ಮಾಡಿದೆನೊ, ಎಷ್ಟು ಮಾಡಿದೆನೊ! ಹೇಗಿದ್ದರೂ ಮುಂಬಯಿಯಲ್ಲಿ ಸೇರಲಿದ್ದ ಕಾಂಗ್ರೆಸ್ ಅಧಿ ವೇಶನಕ್ಕೆ ನನ್ನನ್ನು ಅಧ್ಯಕ್ಷನನ್ನಾಗಿ ಆರಿಸಿದ್ದು ನನ್ನ ಬಿಹಾರ ಪರಿಹಾರ ಸೇವೆಗೊಂದು ಮನ್ನಣೆ ಎಂದು ತಿಳಿದಾಗ ನನಗೆ ಸಮಾಧಾನವೆನಿಸಿದ ಹಾಗೆ ನಮ್ಮ ಜನತೆಯ ಔದಾರ್ಯದ ಅರಿವೂ ಉಂಟಾಯಿತು.

## ಬಂಧುವಿಯೋಗ

೧೯೩೪ರ ಮಧ್ಯದಲ್ಲಿ ಪಾಟ್ನಾದಲ್ಲಿ ಸೇರಿದ ಎ. ಐ. ಸಿ. ಸಿ. ಸಭೆಯನ್ನು ಮುಗಿಯಿಸಿಕೊಂಡು ವರ್ಧಾಕ್ಕೆ ಹೋಗಬೇಕೆನ್ನುವಷ್ಟರಲ್ಲಿ ಮನೆ ಯಿಂದ ತಂತಿ ಬಂದಿತು--ನನ್ನ ಅಣ್ಣನ ಆರೋಗ್ಯ ಚಿಂತಾಜನಕವಾಗಿದೆ ಎಂದು. ಛಪರಾಕ್ಕೆ ಧಾವಿ ಸಿದೆ. ಭೂಕಂಪದ ಪರಿಹಾರದ ಕೆಲಸದಲ್ಲಿ ತೀರ ಸೋತುಹೋಗಿದ್ದಾಗ ಆಸಾಮಿನಲ್ಲಿ ಆತ ಕೊಂಡಿದ್ದ ಕೆಲವು ಭೂಮಿಯ ಕೆಲಸದ ಸಂಬಂಧ ದಲ್ಲಿ ಅಲ್ಲಿಗೆ ಹೋಗಿ ಚಳಿಜ್ವರವನ್ನು ತಂದಿದ್ದ. ಮೂತ್ರಾಶಯದ ರೋಗದಿಂದ ಬಳಲುತ್ತಿದ್ದ ಆತನಿಗೆ ಶಸ್ತ್ರಕ್ರಿಯೆ ಅಗತ್ಯ ಎಂದು ಡಾಕ್ಟರರು ಹೇಳಿದರು. ಅದು ಕೂಡ ತಟ್ಟನೆ ಆಗಬೇಕು. ಕಲ್ಕತ್ತೆಯಿಂದ ವಿಖ್ಯಾತ ಶಸ್ತ್ರಚಿಕಿತ್ಸಕರನ್ನು ಕರೆಯಿಸಿಕೊಂಡೆ. ಆದರೆ ಆ ಚಿಕಿತ್ಸೆಯನ್ನು ತಡೆದುಕೊಳ್ಳುವ ಸ್ಥಿತಿಯಲ್ಲಿ ರೋಗಿ ಇರಲಿಲ್ಲ ವೆಂದು ಅವರು ಅಭಿಪ್ರಾಯಪಟ್ಟರು. ಮುಂದೆ ಎರಡು ದಿನಗಳಲ್ಲಿ ನನ್ನ ಅಣ್ಣ ತೀರಿದ.

ನನ್ನ ಅಣ್ಣನ ನಿಧನ ನನಗೆ ಅದೆಂಥ ಆಘಾತ ವಾಗಿತ್ತೆನ್ನುವುದನ್ನು ವಿವರಿಸುವುದು ಸಾಧ್ಯವಿಲ್ಲ. ಮನೆತನದ ಭಾರವನ್ನು ಮೊದಲಿನಿಂದ ಆತನೇ ಹೊತ್ತಿದ್ದ. ನಾನು ಪಾಟ್ನಾದಲ್ಲಿ ವಕೀಲಿ ಮಾಡು ತ್ತಿದ್ದಾಗಲೂ ಆತನೇ ಎಲ್ಲ ವ್ಯವಸ್ಥೆಗಳನ್ನು ಮಾಡುತ್ತಿದ್ದ. ಮುಂದೆ ನಾನು ಅಸಹಕಾರ ಚಳುವಳಿಯಲ್ಲಿ ಸೇರಿದ ನಂತರವಂತೂ ಸರಿಯೆ. ನನ್ನ ಹೆಂಡತಿ ಮಕ್ಕಳು ಎಲ್ಲರೂ ಯಾವಾಗಲೂ ಆತನ ಹತ್ತಿರವೇ ಇದ್ದವರು. ಎಲ್ಲರನ್ನೂ ತನ್ನ ಮಕ್ಕಳಂತೆಯೆ ನೋಡಿಕೊಳ್ಳುತ್ತಿದ್ದ. ನಾನು ವಕೀಲಿ ನಡಸುತ್ತಿದ್ದಾಗ ಕೂಡ ನಾನಿದ್ದಲ್ಲಿ ಯಾವಾಗಲಾದರೂ ಬಂದು ನನ್ನ ಬಟ್ಟೆ-ಬರೆ ಊಟ-ಉಪಚಾರಗಳ ವ್ಯವಸ್ಥೆಗಳನ್ನು ತಾನೇ ಪರಿಶೀಲಿಸಿ ಸೂಚನೆಗಳನ್ನು ಕೊಟ್ಟು ಹೋಗು ತ್ತಿದ್ದ. ಗೀತೆಯ ಅಧ್ಯಯನದಿಂದ, ಮಹಾತ್ಮರ, ನೂರಾರು ಮಿತ್ರರ ಸಹಾನುಭೂತಿಯ ಮಾತು ಗಳಿಂದ ಆ ದುಃಖವನ್ನು ತಡೆದುಕೊಳ್ಳಲು ನನಗೆ ಸಾಧ್ಯವಾಯಿತು.

ಅಣ್ಣನ ಸಾವಿನಿಂದಾಗಿ ಮನೆತನದ ಆರ್ಥಿಕ ಸ್ಥಿತಿಯ ಚಿತ್ರ ನನ್ನೆದುರಿಗೆ ನಿಂತು ನನ್ನನ್ನು ಕಂಗೆಡಿಸಿತು. ನಮ್ಮ ತಂದೆಯ ಕಾಲದಿಂದ ಇದ್ದ ಒಂದಿಷ್ಟು ಸಾಲ ಹಾಗೆಯೇ ಉಳಿದಿತ್ತು. ಜಮೀನುದಾರಿಯ ಆದಾಯ ತುಂಬಿದ ಮನೆಗೆ ಸಾಲದಾಗಿರಬೇಕು. ಅಂತೆಯೆ ನನ್ನ ಅಣ್ಣ ಒಂದೆರಡು ವ್ಯವಹಾರಗಳಲ್ಲಿ ತೊಡಗಿದ್ದ. ಕೆಲ ಕಾಲ ಮೊದಲು ಭತ್ತದ ಗಿರಣಿಯೊಂದನ್ನು ಹಾಕಿದ್ದ. ಹಣ ಕಡಿಮೆ ಬಿದ್ದಾಗ ನಾನು ಜಮ ನಾಲಾಲ ಬಜಾಜರ ಕಡೆಯಿಂದ ಒಂದಿಷ್ಟು ಸಾಲ ಕೊಡಿಸಿದ್ದೆ. ಗಿರಣಿ ಚನ್ನಾಗಿ ನಡೆದಿತ್ತು. ಆದರೆ ಒಂದು ಸಲ ಗುಮಾಸ್ತರ ಅಚಾತುರ್ಯ ದಿಂದ ಕೊಂಡ ಬೆಲೆಗಿಂತ ಕಡಿಮೆ ಹಣಕ್ಕೆ ನೂರಾರು ಚೀಲ ಅಕ್ಕಿಯನ್ನು ಮಾರುತ್ತಿದ್ದುದು ನನ್ನ ಗಮನಕ್ಕೆ ಬಂದಾಗ ಲೆಕ್ಕವನ್ನು ಪೂರ್ತಿ ಯಾಗಿ ಪರಿಶೀಲಿಸಿದರೆ ಸಾವಿರಾರು ರೂಪಾಯಿ ಗಳ ನಷ್ಟ ಕಣ್ಣೆದುರಿಗೆ ನಿಂತಿತು. ಹೀಗೆಯೆ ಆತ ತೆರೆದಿದ್ದ ಇಲೆಕ್ಟ್ರಿಕ್ ಕಂಪನಿಯಲ್ಲಿಯೂ ನಷ್ಟವಾಗಿತ್ತು. ಕಂಪನಿಯ ಲೈಸೆನ್ಸು ವೈಯಕ್ತಿಕ ವಾಗಿ ಆತನ ಹೆಸರಿನಲ್ಲಿದ್ದುದರಿಂದ ಶೇರುಹಣ ಈತನಿಗೆ ಉಪಯೋಗವಾಗಲಿಲ್ಲ. ಒಟ್ಟು ಲೆಕ್ಕ ಮಾಡಿದಾಗ ಸುಮಾರು ಎಪ್ಪತ್ತು ಸಾವಿರದ ಸಾಲ

ವನ್ನು ನಾನು ಎದುರಿಸಬೇಕಾದ ಸನ್ನಿವೇಶ ಒದಗಿತು.

ದಿಕ್ಕುತೋಚದೆ ಇದ್ದ ಪರಿಸ್ಥಿತಿಯನ್ನು ಜಮನಾಲಾಲ ಬಜಾಜರಿಗೆ ವಿವರಿಸಿ ಅವರನ್ನು ಕರೆಯಿಸಿಕೊಂಡೆ. ಅವರ ಜೊತೆಯಲ್ಲಿ ಶೇಡಿಯಾ ಎಂಬ ವ್ಯವಹಾರಸ್ಥರು ಬಂದಿದ್ದರು. ಪಿತ್ರಾರ್ಜಿತ ಆಸ್ತಿಯನ್ನೆಲ್ಲ ಅವರು ಅರುವತ್ತು ಸಾವಿರ ರೂಪಾಯಿಗೆ ಕೊಳ್ಳಲು ಒಪ್ಪಿದರು. ನನಗಾದರೂ ಆ ಬಗೆಯಲ್ಲಿ ಯಾವ ಮೋಹ ಇರಲಿಲ್ಲ. ಆದರೆ ದೀರ್ಘಾಲೋಚನೆಯ ನಂತರ ಹಾಗೆ ಮಾಡುವುದು ಬಜಾಜರಿಗೆ ಸಮ್ಮತವಾಗಲಿಲ್ಲ. ತಾವೇ ಆಸ್ತಿಯನ್ನು ತಮ್ಮ ಹೆಸರಿಗೆ ತೆಗೆದುಕೊಂಡು ಮುಕ್ಕಾಲು ಪಾಲು ಹಣವನ್ನು ತಾವು, ಉಳಿದ ಹಣವನ್ನು ಬಿರ್ಲಾ ಅವರಿಂದ ಕೊಡಿಸಿ ನನ್ನನ್ನು ಋಣಮುಕ್ತನನ್ನಾಗಿ ಮಾಡಿದರು. ಆದರೆ ನನ್ನ ಆಸ್ತಿಯನ್ನು ಪಡೆದು ಬಜಾಜರಿಗೆ ಬಿಹಾರದಲ್ಲಿ ಜಮೀನುದಾರರಾಗಬೇಕಿರಲಿಲ್ಲ. ಆಸ್ತಿಯನ್ನು ಯೋಗ್ಯ ಬೆಲೆಗೆ ಮಾರಿ ತಾವು ಕೊಟ್ಟ ಹಣವನ್ನು ತಿರುಗಿ ಪಡೆಯಬೇಕಿತ್ತು. ಆದರೆ ಭೂಸುಧಾರಣೆಯ ಮಸೂದೆಗಳಿಂದಾಗಿ ಬರಬಹುದಾದ ಬೆಲೆ ಇಳಿಯತೊಡಗಿತ್ತು. ಕೊನೆಯಲ್ಲಿ ಯೋಗ್ಯ ಬೆಲೆ ಸಿಧ್ಧಾರವಾಗಿ ಆಸ್ತಿಯು ಮಾರಾಟವಾಯಿತು. ಮನೆಯಲ್ಲಿಯ ಚಿನ್ನ ಮುಂತಾದ ಬೆಲೆಯುಳ್ಳ ಒಡವೆಗಳನ್ನು ಸಾಲದ ಬಡ್ಡಿಗಾಗಿ ಮಾರಬೇಕಾಗಿ ಬಂದಿತ್ತು. ಹೀಗಿದ್ದರೂ ಸಾಲ ತೀರಿತು ಎನ್ನುವ ದೊಡ್ಡ ಸಮಾಧಾನ ನನ್ನದಾಯಿತು. ನನ್ನ ಅಣ್ಣ ತೀರಿದಾಗ ಬಜಾಜರು ಆತನ ಸ್ಥಾನದಲ್ಲಿ ನಿಂತು ಎಲ್ಲವನ್ನು ನಡಸಿಕೊಟ್ಟ ಬಗ್ಗೆ ನಾನು ಅವರಿಗೆ ಧನ್ಯವಾದ ಹೇಳಲು ಮಾತು ಸಾಲದು. ಇಂಥ ಸಂದರ್ಭದಲ್ಲಿ ನನ್ನ ಅಣ್ಣನ ಮಕ್ಕಳು, ನನ್ನ ಮಕ್ಕಳು ತೋರಿಸಿದ ಧೈರ್ಯ, ತಾಳ್ಮೆ, ತಿಳಿವುಗಳನ್ನು ನೆನೆದರೆ ಎದೆ ತುಂಬಿಬರುತ್ತದೆ. ಒಟ್ಟಿನಲ್ಲಿ ಆ ಕಾಲ ನನ್ನ ಆಯುಷ್ಯದಲ್ಲಿಯೇ ತೀರ ಕಷ್ಟದ ಕಾಲವಾಯಿತು. ನನ್ನ ಅಣ್ಣನ ಸಾವು ಸಾಲದೆಂಬಂತೆ ಜನಾರ್ದನನ ಆರು ವರ್ಷದ ಮಗು ಮುಂದೆ ಕೆಲವೇ ದಿನಗಳಲ್ಲಿ ವಿಷಮ ಜ್ವರಕ್ಕೆ ಬಲಿಯಾಯಿತು.

## ಕಾಂಗ್ರೆಸ್ ಅಧ್ಯಕ್ಷಪದ

ಈ ನನ್ನ ವೈಯಕ್ತಿಕ ಕಷ್ಟಗಳ ಹಿನ್ನೆಲೆಯಲ್ಲಿ ಮುಂಬೈಯ ಕಾಂಗ್ರೆಸ್ ಅಧಿವೇಶನಕ್ಕೆ ನನ್ನನ್ನು ಅಧ್ಯಕ್ಷನನ್ನಾಗಿ ಆರಿಸಲಾಯಿತು. ಮುಂಬೈಯ ಜನತೆ ನನಗೆ ತೋರಿದ ಗೌರವಾದರ ನಿಜವಾಗಿಯೂ ಚಿರಸ್ಮರಣೀಯವಾಗಿದೆ. ಕಲಕತ್ತಾ ಮೇಲಿನಿಂದ ಬಂದು ಕಲ್ಯಾಣದಲ್ಲಿಳಿದ ನನ್ನನ್ನು ವಿಶೇಷ ರೈಲಿನಿಂದ ವಿಕ್ಟೋರಿಯಾ ಟರ್ಮಿನಸ್ ವರೆಗೆ ಕರೆತಂದು ಅಲ್ಲಿಂದ ಮೆರವಣಿಗೆ ಹೊರಡಿಸಿದರು. ಲಕ್ಷಾಂತರ ರೂಪಾಯಿ ವೆಚ್ಚ ಮಾಡಿ ಊರಲ್ಲಿಯ ಬೇರೆಬೇರೆ ಭಾಗಗಳನ್ನು ಆಯಾಯ ಭಾಗಗಳ ವೈಶಿಷ್ಟ್ಯ ಸ್ಪಷ್ಟವಾಗುವಂತೆ ಸಿಂಗರಿಸಲಾಗಿತ್ತು. ಸರೋಜಿನಿ ನಾಯ್ಡು ಅವರ ಒತ್ತಾಯಕ್ಕಾಗಿ ನನ್ನೊಡನೆ ಮೆರವಣಿಗೆ ಹೊರಟ ನನ್ನ ಸಹಧರ್ಮಿಣಿಯನ್ನು ಕಂಡ ಅನೇಕರಿಗೆ ನನಗೂ ಒಬ್ಬ ಹೆಂಡತಿ ಇದ್ದಾಳೆ ಎಂದು ಮೊದಲ ಬಾರಿ ತಿಳಿದಿರಬೇಕು! ನನ್ನ ಆರೋಗ್ಯ ಸರಿಯಾಗಿರದಿದ್ದರೂ ಜನತೆಯ ಒಲುಮೆಯ ಒತ್ತಾಯಕ್ಕೆ ಮಣಿದು ಮೂರು ನಾಲ್ಕು ಗಂಟೆಗಳ ಕಾಲ ಮೆರವಣಿಗೆಯಲ್ಲಿ ಹೋಗಬೇಕಾಯಿತು.

ಸಮುದ್ರತೀರದಲ್ಲಿ ನಿಲ್ಲಿಸಲಾಗಿದ್ದ ಭವ್ಯ ಮಂಟಪದಲ್ಲಿ ಅಧಿವೇಶನ ನಡೆಯಿತು. ಗಾಂಧೀಜಿಯವರು ಕಾಂಗ್ರೆಸಿನಿಂದ ನಿವೃತ್ತರಾಗಬೇಕೆಂದ ವಿಷಯದಲ್ಲಿ ತೀವ್ರ ಚರ್ಚೆ ನಡೆದಿತ್ತು. ಹಾಗೆಯೆ ಕಾಂಗ್ರೆಸ್ ಘಟನೆಗೆ ತಿದ್ದುಪಡಿ, ಜಾತೀಯ ಐತೀರ್ಪಿನ ಬಗ್ಗೆ ಇನ್ನೊಂದು ಗೊತ್ತುವಳಿ ಅಧಿವೇಶನದ ಮುಖ್ಯಾಂಶಗಳಾಗಿದ್ದವು ಐತೀರ್ಪಿನ ಬಗ್ಗೆ ಪಂಡಿತ ಮಾಲವೀಯರು ಒಂದು ತಿದ್ದುಪಡಿಯನ್ನು ಮಂಡಿಸಿ ಮಾತನಾಡಿದ್ದರು. ಉಳಿದವರು ಮಾತನಾಡಿದ ಮೇಲೆ ಮಾಲವೀಯರಿಗೆ ಮತ್ತೆ ಮಾತನಾಡಬೇಕಿತ್ತು. ಹಾಗೆ ಮಾತನಾಡಲು ಅವರಿಗೆ ನಿಯಮಾನುಸಾರವಾಗಿ ಅವಕಾಶ ಸಿಕ್ಕಲಾರದ್ದರಿಂದ ಅವರಿಗೆ ಮಾತನಾಡಲು ಅಧ್ಯಕ್ಷಸ್ಥಾನದಿಂದ ನಾನು ಅಪ್ಪಣೆ ಕೊಡದೆ ಇದ್ದುದು ಗಾಂಧೀಜಿಯವರ ಲಕ್ಷ್ಯವನ್ನು ಸೆಳೆದಿತ್ತು. ರಾಜೇಂದ್ರ ಪ್ರಸಾದ

ಒಪ್ಪಬಹುದಾಗಿತ್ತು, ಆದರೆ ಕಾಂಗ್ರೆಸ್ ಅಧ್ಯಕ್ಷ ಒಪ್ಪುವುದು ಹೇಗೆ? ಎಂದಿದ್ದೆ.

ಕಾಂಗ್ರೆಸ್ ಅಧ್ಯಕ್ಷನೆಂದು ದಿಲ್ಲಿಯಲ್ಲಿ ಜಿನ್ನಾ ಅವರೊಡನೆ ಮಾತುಕತೆ ನಡೆಸಿದೆ. ಯಾವ ಒಂದು ನಿಲುಗಡೆಗೂ ಬರಲಾಗಲಿಲ್ಲ. ಇದಾದ ನಂತರ ಕಾಂಗ್ರೆಸ್ ಪ್ರಚಾರಕ್ಕಾಗಿ ನಾನು ದೇಶದುದ್ದಕ್ಕೂ ಸಂಚರಿಸಿ ಒಂದು ದೃಷ್ಟಿಯಿಂದ ಮುಂಬರುವ ಚುನಾವಣೆಗಳಿಗಾಗಿ ಆಗಿನಿಂದಲೇ ಸಿದ್ಧತೆಗಳನ್ನು ಮಾಡಿಕೊಳ್ಳಬೇಕೆಂದು ಸಂಕಲ್ಪಿಸಿದ್ದೆ. ಪಂಜಾಬದಿಂದ ಸಂಚಾರ ಕಾರ್ಯಕ್ರಮ ಆರಂಭವಾಯಿತು. ಸ್ಥಳೀಯ ಕಾಂಗ್ರೆಸಿಗರಲ್ಲಿಯ ಒಳಒಡಕುಗಳು, "ಸ್ಥಳೀಯ ರಾಜಕೀಯ"ದ ಪರಿಣಾಮವಾಗಿ ಆಗಬಹುದಾದ ತೊಂದರೆಗಳ ಅನುಭವ ಪಂಜಾಬದ ಸಂಚಾರದಲ್ಲಿ ನನ್ನ ಪ್ರತೀತಿಗೆ ಬಂದಿತು. ಆಚಾರ್ಯ ಕೃಪಲಾನಿ (ಮುಂಬಯಿಯ ಅಧಿವೇಶನದ ನಂತರ ನಾನು ಅವರನ್ನು ಕಾಂಗ್ರೆಸ್ ಕಾರ್ಯದರ್ಶಿಯಾಗಿ ನಿಯೋಜಿಸಿದ್ದೆ) ಯವರೊಡನೆ ಜಲಂದರವನ್ನು ಬೆಳಗಿನ ನಾಲ್ಕು ಗಂಟೆಗೆ ತಲುಪಿದೆ. ಜಲಂದರಕ್ಕೆ ಎರಡು ನಿಲ್ದಾಣ—ಸಿಟಿ ಮತ್ತು ಕ್ಯಾಂಟನ್‌ಮೆಂಟ ಎಂದು. ಮೊದಲನೆಯ ನಿಲ್ದಾಣದಲ್ಲಿ ಕೆಲವು ಕಾಂಗ್ರೆಸ್ ಕಾರ್ಯಕರ್ತರು ಬಂದಿದ್ದರು. ಎಲ್ಲಿ ಇಳಿಯಬೇಕೆನ್ನುವುದು ನಮಗೆ ತಿಳಿಯದ್ದರಿಂದ ಬಂದಿದ್ದ ಆ ಕಾರ್ಯಕರ್ತರ ಸೂಚನೆಯ ಮೇರೆಗೆ ಇಳಿದೆವು. ರಾಯಝಾದಾ ಹಂಸರಾಜರಲ್ಲಿ ನಾವು ಉಳಿದುಕೊಳ್ಳುವುದೆಂದು ಗೊತ್ತಾಗಿತ್ತು. ಆದರೆ ಅವರು ಕಾಣಲೇ ಇಲ್ಲ. ಬೆಳಗಾದ ಮೇಲೆ ನಮ್ಮನ್ನು ಊರಲ್ಲಿ ಕರೆದೊಯ್ಯುವ ಕಾರ್ಯಕ್ರಮವಿರಬೇಕೆಂದುಕೊಂಡು ನಾವು ವೇಟಿಂಗ್ ರೂಂನಲ್ಲಿ ಕಾಯುತ್ತಿದ್ದಾಗ ರಾಯಝಾದಾ ಹಂಸರಾಜರು ನಾವಿದ್ದಲ್ಲಿಗೆ ಬಂದು ನಾವು ಹೊರಡುವಂತೆ ಹೇಳಿದರು. ನಮ್ಮನ್ನು ಇಳಿಸಿಕೊಂಡ ಕಾರ್ಯ-ಕರ್ತರು ಅಲ್ಲಿಯ ಕಾಂಗ್ರೆಸಿನಲ್ಲಿಯ ಒಂದು ಪಕ್ಷ, ಹಂಸರಾಜರದು ಇನ್ನೊಂದು ಎನ್ನುವುದು ಸ್ಪಷ್ಟವಾಯಿತು. ನಮ್ಮೆದುರಿನಲ್ಲಿಯೆ ಎರಡು ಗುಂಪುಗಳಲ್ಲಿ ವಾಗ್ಯುದ್ಧ ಮೊದಲಾಯಿತು. ಕೊನೆಗೆ ನಾವು ಒಬ್ಬರಲ್ಲಿ ಉಪಾಹಾರವನ್ನು ಇನ್ನೊಬ್ಬರಲ್ಲಿ ಊಟವನ್ನು ಮಾಡಬೇಕೆಂದು ಗೊತ್ತಾಯಿತು!

ಅಲ್ಲಿಂದ ನಾವು ಹೋದದ್ದು ಲಾಹೋರಿಗೆ—ಅಲ್ಲಿಯೂ ಇಂಥದೇ ಅನುಭವ. ಪ್ರಾಂತೀಯ ಕಾಂಗ್ರೆಸ್ ಅಧ್ಯಕ್ಷರಾಗಿದ್ದ ಡಾ. ಸತ್ಯಪಾಲರ ಮನೆಯಲ್ಲಿ ಉಳಿಯಬೇಕಾಗಿದ್ದ ನಮ್ಮನ್ನು ಇನ್ನೊಂದು ಗುಂಪಿನವರು ಬೇರೆ ಎಲ್ಲಿಯೊ ಕರೆದುಕೊಂಡು ಹೋಗಿದ್ದರು. ಇಂಥ ಒಳಒಡಕುಗಳಿಂದಾಗಿ ಬಂದವರಿಗೆ ತೊಂದರೆಯಾಗುವುದು ಹಾಗಿರಲಿ; ಅವರು ಬಂದ ಕೆಲಸ ಒಮ್ಮತದ ವಾತಾವರಣದಲ್ಲಿ ನಡೆಯಲಾಗದ್ದಕ್ಕೆ ವಿರಸವೂ ಉಂಟಾಗುತ್ತದೆ.

## ಕರ್ನಾಟಕ ಯಾತ್ರೆ

ವರ್ಹಾಡ ಸಂಚಾರ ಮುಗಿಸಿಕೊಂಡು ಮಹಾರಾಷ್ಟ್ರ ಮತ್ತು ಕರ್ನಾಟಕದ ಸಂಚಾರ ಮೊದಲಾಯಿತು. ಪ್ರತಿನಿತ್ಯ ಬೆಳಗಿನ ಏಳು ಗಂಟೆಯಿಂದ ಪ್ರಾರಂಭವಾದ ಕಾರ್ಯಕ್ರಮ ನಡುರಾತ್ರಿಯವರೆಗೆ ನಡೆಯುತ್ತಿತ್ತು. ಹತ್ತೆಂಟು ಕಡೆಗಳಲ್ಲಿ ಸಾರ್ವಜನಿಕ ಸಭೆಗಳಲ್ಲಿ ಮಾತನಾಡಬೇಕಾಗುತ್ತಿತ್ತು. ಹೆಚ್ಚಾಗಿ ಕಾರಿನಲ್ಲಿಯೆ ಪ್ರಯಾಣಮಾಡುತ್ತಿದ್ದದ್ದರಿಂದ ಸಾಧ್ಯವಿದ್ದಷ್ಟು ಹೆಚ್ಚು ಕಡೆಗಳಲ್ಲಿ ಜನರ ಸಂಪರ್ಕ ಬೆಳೆಯಿಸಲು ಅನುಕೂಲವಾಗುತ್ತಿತ್ತು. ಕರ್ನಾಟಕದ ಕರಾವಳಿಯಗುಂಟ ಮೊದಲು ಮೈಸೂರ ವರೆಗೆ ಹಾಗೆ ಹಿಂದಿರುಗುವಾಗ ಬೆಳಗಾಂವಿ, ವಿಜಾಪೂರ, ಸೊಲ್ಲಾಪುರ, ಸಾತಾರೆ, ರತ್ನಾಗಿರಿ ಅಹಮದನಗರಗಳನ್ನು ಸಂದರ್ಶಿಸಿದೆ. ಕರ್ನಾಟಕದ ಪ್ರವಾಸಮಾಡುತ್ತಿದ್ದ ಹಾಗೆಲ್ಲ ಸುತ್ತಲಿನ ನಿಸರ್ಗ ಸೌಂದರ್ಯ ನನ್ನ ಕಣ್ಣನ್ನು ಸೆಳೆಯುತ್ತಿದ್ದ ಹಾಗೆ ಜನರ ನಡೆ-ನುಡಿ ಉಡುಪುಗಳ ವೈವಿಧ್ಯ ಮನಸ್ಸನ್ನಾವರಿಸುತ್ತಿತ್ತು. ಈ ಎಲ್ಲ ವೈವಿಧ್ಯದ ಹಿಂದಡಗಿದ ಭಾರತೀಯತೆ ಎಲ್ಲವನ್ನೂ ಒಂದಾಗಿಸುತ್ತಿತ್ತು. ಡೆಕ್ಕನ್ ತಪ್ಪಲಿನ ಒಂದಂಚಿನಲ್ಲಿ ಸಾತಾರೆ, ಸೊಲ್ಲಾಪುರಗಳ ನಿರ್ಬಯಲುಗಳಾದರೆ ಇನ್ನೊಂದಂಚಿನಲ್ಲಿ ಮೈಸೂರಿನ, ಕೊಡ

ಗಿನ ನಿಬಿಡನಿಸರ್ಗ ಸೌಂದರ್ಯ. ಕೊಡಗಿನಲ್ಲಿ ಒಂದು ಗುಡ್ಡದ ಎತ್ತರದ ಮೇಲಿನ ಬಯಲೊಂದರಲ್ಲಿ ಭಾಷಣವನ್ನೇರ್ಪಡಿಸಲಾಗಿತ್ತು. ಎದುರಿನಲ್ಲಿ ಹಸಿರು ತುಂಬಿದ ಪರ್ವತ ಶ್ರೇಣಿಗಳು ಕಣ್ಣು ಹರಿಯುವ ವರೆಗೂ ಹಬ್ಬಿದ್ದವು.

ಮಹಾರಾಷ್ಟ್ರದ ಜನತೆಗೆ ಹೂವುಗಳೆಂದರೆ ಪ್ರೀತಿ ಎಂದು ಕಾಣುತ್ತದೆ. ಹೋದಹೋದಲ್ಲೆಲ್ಲ ನನಗೆ ಹೂವಿನ ಹಾರಗಳನ್ನು ಹಾಕಲಾಗಿತ್ತು. ಅವರ ಹೂವಿನ ಹೊರೆಯನ್ನು ಹೊರಲಾರದೆ, ಹೂವುಗಳಿಗಾಗಿ ಇಷ್ಟೊಂದು ಹಣವನ್ನು ಹಾಳು ಮಾಡದೆ ಅದಕ್ಕೆ ಬದಲಾಗಿ ಕೈನೂಲಿನ ಮಾಲೆ ಹಾಕಿದರೆ ಒಳ್ಳೆಯದೆಂದು ಹೇಳಿದ್ದನ್ನು ಶಂಕರರಾವ ದೇವರು ಒಪ್ಪಿದರು. ಹೀಗಾಗಿ ಅಂದಿನಿಂದ ಮುಂದೆ ಎಲ್ಲ ಕಡೆಯಲ್ಲಿಯೂ ಕೈ-ನೂಲಿನ ಮಾಲೆಯೇ. ಇದರ ಪರಿಣಾಮವಾಗಿ ನಾನು ಸಂಚಾರದಿಂದ ಹಿಂದಿರುಗಿದಾಗ ನನಗೆ ಮುಂದೆ ವರ್ಷಾನುವರ್ಷವೂ ಬಟ್ಟೆಗಳಿಗೆ ಸಾಲ ಬಹುದಾದಷ್ಟು ನೂಲು ನನ್ನ ಹತ್ತಿರ ಸಂಗ್ರಹವಾಗಿತ್ತು! ಮಹಾರಾಷ್ಟ್ರದಲ್ಲಿಯ ಕಾರ್ಯಕ್ರಮವನ್ನು ಚಾಚೂ ತಪ್ಪದೆ, ಒಂದು ಕಡೆಯಲ್ಲಿಯೂ ವಿಲಂಬವಿಲ್ಲದೆ, ಶಂಕರರಾವ ದೇವ್ ನಡಸಿಕೊಟ್ಟರು. ಸೊಲ್ಲಾಪುರದಲ್ಲಿ ಮೆರವಣಿಗೆಯ ಸಿದ್ಧತೆಗಳೆಲ್ಲವೂ ಆದಾಗ ಗೊಂದಲವಾಗಬಹುದೆಂದು ಅದನ್ನು ಪ್ರತಿಬಂಧಿಸಲಾಯಿತು. ಕಾರ್ಯಕರ್ತರು ಧೃತಿಗೆಡದೆ ಊರವರೆಲ್ಲರೂ ತಮ್ಮ ತಮ್ಮ ಮನೆಗಳೆದುರಿನಲ್ಲಿ, ಮನೆಯ ಮೇಲಟ್ಟಗಳಲ್ಲಿ ನಿಂತು ನೋಡಿ ಮಾತ್ರ ಮೆರವಣಿಗೆಯಲ್ಲಿ ಭಾಗ ವಹಿಸಬೇಕೆಂದು ಹೇಳಿದ್ದನ್ನು ಸೊಲ್ಲಾಪುರದ ನಾಗರಿಕರು ಆದರ್ಶ ರೀತಿಯಲ್ಲಿ ನಡಸಿಕೊಟ್ಟರು. ನನ್ನ ಕಾರು ಬೀದಿಯಲ್ಲಿ ಹಾಯ್ದು ಹೋಗುತ್ತಿದ್ದಾಗ ಸಾವಿರಾರು ಜನರು ತಮ್ಮ ಬಾಗಿಲುಗಳಲ್ಲಿಯೆ ನಿಂತು ತಮ್ಮ ಗೌರವ ಸಲ್ಲಿಸಿದರು. ಗದ್ದಲ-ಧೂಳುಗಳಿಲ್ಲದ ಅಂಥ ಮೆರವಣಿಗೆಯ ಅನುಭವ ಅದ್ವಿತೀಯ——ಜನ ತೋರಿದ ತಾಳ್ಮೆ ಶಿಸ್ತುಗಳೂ ಅದ್ವಿತೀಯ!

ಜವಾಹರಲಾಲ ಅಧ್ಯಕ್ಷತೆಯಲ್ಲಿ ಲಖ್ನೋ ಕಾಂಗ್ರೆಸ್ ಅಧಿವೇಶನವಾದ ನಂತರದಲ್ಲಿ ನಾಗಪುರದಲ್ಲಿ ಹಿಂದೀ ಸಾಹಿತ್ಯ ಸಮ್ಮೇಳನ ನನ್ನ ಅಧ್ಯಕ್ಷತೆಯಲ್ಲಿ ಜರುಗಿತು. ಹಿಂದೀ ಪ್ರಚಾರವನ್ನು ನಾನು ಕಲ್ಕತ್ತೆಯಲ್ಲಿದ್ದಾಗಿನಿಂದ ಮಾಡಿದ್ದೆನಲ್ಲದೆ ಕೆಲವಟ್ಟಿಗೆ ಹಿಂದೀ ಸಾಹಿತ್ಯ ಸಮ್ಮೇಳನಗಳು ನಡೆಯುವ ಏರ್ಪಾಡುಗಳಿಗೆ ನಾನು ಕಾರಣನಾಗಿದ್ದೆ. ರಾಜಕೀಯದ ಮುನ್ನಡೆಗೆ ಸರಿಯಾಗಿ ರಾಷ್ಟ್ರಭಾಷೆಯ ಪ್ರಶ್ನೆ ಹೆಚ್ಚಾಗಿ ಜನರೆದುರು ಬರತೊಡಗಿದ್ದ ಆ ವಿಚಾರದಲ್ಲಿ ನಿರ್ದಿಷ್ಟವಾದ ಧೋರಣೆಯನ್ನು ತಾಳುವುದು ಅಗತ್ಯವಾಗುತ್ತಿದ್ದಿತು. ಆ ಬಗೆಯಲ್ಲಿನ ನನ್ನ ಕೆಲವು ವಿಚಾರಗಳನ್ನು ಅಧ್ಯಕ್ಷೀಯ ಭಾಷಣದಲ್ಲಿ ವಿವರಿಸಿದೆ. ಇಡೀ ದೇಶದ ವ್ಯವಹಾರಗಳಿಗಾಗಿ ಒಂದೇ ಭಾಷೆ ಇರಬೇಕಾದುದು ಅನಿವಾರ್ಯ. ಆ ಸ್ಥಾನ ಇಂಗ್ಲಿಷಿಗೆ ಸಲ್ಲದು. ಹಿಂದೀ, ಹಿಂದುಸ್ತಾನಿ, ಉರ್ದು– ಹೆಸರು ಯಾವುದೇ ಇದ್ದರೂ ಆ ಗೌರವ ಹಿಂದಿಗೆಯೆ ಸಲ್ಲಬೇಕಾದದ್ದು ಅನಿವಾರ್ಯ. ಅಖಿಲ ಭಾರತ ವ್ಯವಹಾರಗಳಲ್ಲಿ,

ಅಂತರ—ಪ್ರಾಂತೀಯ ಸಂಪರ್ಕಗಳಲ್ಲಿ ಹಿಂದೀ ಭಾಷೆ ಉಪಯೋಗವಾದಷ್ಟು ಇನ್ನಾವ ಭಾರತೀಯ ಭಾಷೆಯೂ ಉಪಯೋಗವಾಗಲಾರದು. ಪ್ರಾದೇಶಿಕ ಭಾಷೆಗಳನ್ನು ನಾವು ಕಡೆಗಣಿಸಬೇಕಿಲ್ಲ ಭಾರತದ ಎಲ್ಲ ಭಾಷೆಗಳಿಂದ ಪೋಷಿತವಾಗಿ ಬೆಳೆದು ನಿಲ್ಲಬೇಕಾದ ಹಿಂದೀ ಭಾಷೆಯೆ ಭಾರತದ ಭಾಷೆ ಎಂದು ಮುಂತಾಗಿ ಪ್ರತಿಪಾದಿಸಿದೆ.

ಇಡೀ ೧೯೩೬ರ ಉದ್ದಕ್ಕೂ ಮುಂಬಗುವ ಚುನಾವಣೆಗಳಿಗಾಗಿ ಪ್ರಚಾರ ನಡೆಯಿತು. ಆ ಒಂದು ಕೆಲಸದ ಹೊರತು ಬೇರೆ ಕೆಲಸವನ್ನು ನಾನು ಆಗ ಮಾಡಲಿಲ್ಲ. ಜವಾಹರಲಾಲರು ಆಗ ಕೈಕೊಂಡ 'ಬಿರುಗಾಳಿ ಸಂಚಾರ'ಗಳು ಚುನಾವಣೆಗಳಲ್ಲಿಯು ಕಾಂಗ್ರೆಸ್ಸಿನ ಭವಿತವ್ಯವನ್ನು ಭದ್ರಪಡಿಸಿದವು. ಮೂವತ್ತೇಳರಲ್ಲಿ ಚುನಾವಣೆಗಳು ನಡೆದಾಗ ಆರು ಪ್ರಾಂತಗಳಲ್ಲಿ ಕಾಂಗ್ರೆಸ್ಸಿಗೆ ಸ್ಪಷ್ಟವಾದ ಬಹುಮತ ದೊರಕಿತ್ತಲ್ಲದೆ ಉಳಿದ ಪ್ರಾಂತಗಳಲ್ಲಿಯಾದರೂ ಕಾಂಗ್ರೆಸು ಒಂದು ಗಣ್ಯವಾದ ಪಕ್ಷವಾಗಿ ನಿಲ್ಲಬಹುದಾದ ಪ್ರಮಾಣದಲ್ಲಿ ಸ್ಥಾನಗಳು ದೊರಕಿದ್ದವು.

ಬಹುಮತ ದೊರಕಿದ ಪ್ರಾಂತಗಳಲ್ಲಿ ಮಂತ್ರಿಮಂಡಲಗಳನ್ನು ಸ್ಥಾಪಿಸಬೇಕೆ — ಬಾರದೆ ಎನ್ನುವ ಪ್ರಶ್ನೆ ನಮ್ಮೆದುರಿಗೆ ಬಂದಿತು ೧೯೩೫ರ ರಾಜ್ಯಘಟನೆಯನ್ವಯ ಕೆಲವೊಂದು ಸಂದರ್ಭಗಳಲ್ಲಿ ಗವರ್ನರರು ವಿಶೇಷಾಧಿಕಾರಗಳನ್ನು ವಹಿಸಿ ಮಂತ್ರಿಮಂಡಲಗಳನ್ನು ತಿರಸ್ಕರಿಸುವುದು ಸಾಧ್ಯವಿತ್ತು. ಅಂಥ ವಿಶೇಷಾಧಿಕಾರಗಳನ್ನು ಗವರ್ನರರು ಉಪಯೋಗಿಸುವುದಿಲ್ಲವೆಂಬ ಆಶ್ವಾಸನವನ್ನು ಬ್ರಿಟಿಶ್ ಸರಕಾರ ಕೊಡದ ಹೊರತು ಮಂತ್ರಿಮಂಡಲಗಳನ್ನು ರಚಿಸುವ ಹಾಗಿಲ್ಲವೆಂದು ನಿರ್ಣಯವನ್ನು ಕೈಕೊಂಡೆವು. ಅಧಿಕಾರಕ್ಕೆ ಆತುರಪಟ್ಟ ಕಾಂಗ್ರೆಸ್ಸು ಮಂತ್ರಿಮಂಡಲಗಳನ್ನು ರಚಿಸಬಹುದೆಂದು ನಿರೀಕ್ಷಿಸಿದ್ದ ಸರಕಾರಕ್ಕೆ ನಿರಾಶೆಯಾಯಿತು. ಕೊನೆಗೆ ಸರಕಾರ ಮಣಿಯಬೇಕಾಯಿತು. ಆರು ಪ್ರಾಂತಗಳಲ್ಲಿ ಕಾಂಗ್ರೆಸ್ ಅಧಿಕಾರಾರೂಢವಾಯಿತು. ಆದರೆ ಮುಂದೆ ಎಂಟು ತಿಂಗಳಾಗುವಷ್ಟರಲ್ಲಿ ಸಮಸ್ಯೆಯೊಂದು ತಲೆಯೆತ್ತಿತು. "ರಾಜಕೀಯ ಅಪರಾಧ" ಗಳಿಗಾಗಿ ಬಂಧಿಸಲ್ಪಟ್ಟವರನ್ನು ಬಿಡುಗಡೆ ಮಾಡಬೇಕಾದುದು ಕಾಂಗ್ರೆಸ್ ಚುನಾವಣಾ ಘೋಷಣೆಯಲ್ಲಿಯ ಒಂದಂಶವಾಗಿದ್ದರಿಂದ ಆ ಬಗೆಯಲ್ಲಿ ಕಾಂಗ್ರೆಸ್ ಮಂತ್ರಿಮಂಡಲಗಳು ಆತುರವಾಗಿರುವುದು ಸ್ವಾಭಾವಿಕವಾಗಿತ್ತು. ಆದರೆ ಗವರ್ನರರು ಒಪ್ಪಲಿಲ್ಲ. ಬಿಹಾರ ಮತ್ತು ಸಂಯುಕ್ತಪ್ರಾಂತಗಳಲ್ಲಿ ಮಂತ್ರಿಮಂಡಲಗಳು ರಾಜೀನಾಮೆ ಕೊಡುವುದೆಂದು ನಿರ್ಣಯಿಸಿ ಹರಿಪುರ ಕಾಂಗ್ರೆಸ್ ಅಧಿವೇಶನಕ್ಕೆ ಎರಡು ದಿನ ಇರುವಾಗ ರಾಜೀನಾಮೆಯನ್ನು ಒಪ್ಪಿಸಿದವು. ಆದರೆ ಕಾಂಗ್ರೆಸ್ ಅಧಿವೇಶನ ನಡೆದಾಗ ಸರಕಾರ ಕೈದಿಗಳನ್ನು ಬಿಡುಗಡೆ ಮಾಡಲೊಪ್ಪಿ ಕಾಂಗ್ರೆಸ್ ಮಂತ್ರಿಮಂಡಲಗಳು ಮುಂದುವರಿಯುವಂತೆ ಮಾಡಿತು.

## ಅಪ್ರಿಯ ಕರ್ತವ್ಯಗಳು

ಮಂತ್ರಿಮಂಡಲಗಳು ಕಾಂಗ್ರೆಸಿನ ಆದೇಶಗಳಿಗೆ ಅಧೀನವಾಗಿ ಕೆಲಸ ಮಾಡುತ್ತಿದ್ದರೂ ಕೆಲವು ಸ್ಥಳೀಯ ಅಸಂತುಷ್ಟ ರಾಜಕಾರಣಿಗಳು ತೊಡಕುಗಳನ್ನುಂಟುಮಾಡುತ್ತಿದ್ದರು. ಇದರಿಂದಾಗಿ ನಾನು ಕೆಲವೊಂದು ಅಪ್ರಿಯವಾದ ಹೊಣೆಗಾರಿಕೆಗಳನ್ನು ನಿರ್ವಹಿಸಬೇಕಾಗಿ ಬಂದಿತು. ಕಾಂಗ್ರೆಸ್ ಅಧ್ಯಕ್ಷರಾಗಿದ್ದ ಸುಭಾಷ ಬೋಸರು ಭಿನ್ನಾಭಿಪ್ರಾಯವನ್ನು ವ್ಯಕ್ತಮಾಡಿ ರಾಜೀನಾಮೆ ಕೊಟ್ಟದ್ದರಿಂದ ಗಾಂಧೀಜಿಯವರ ಆದೇಶಕ್ಕೆ ಮಣಿದು ನಾನು ಎರಡನೆಯ ಬಾರಿ ಅಧ್ಯಕ್ಷತೆಯನ್ನು ಒಪ್ಪಬೇಕಾಯಿತು. ಎ ಐ ಸಿ ಸಿ ಯ ಬಹುಮತದ ಒಂದು ನಿರ್ಣಯವನ್ನು ಪ್ರತಿಭಟಿಸಿ ಬಹಿರಂಗವಾಗಿ ಕಾಂಗ್ರೆಸಿನ ವಿರುದ್ಧ ಸುಭಾಷರು ಹೇಳಿಕೆಯನ್ನು ಹೊರಡಿಸಿದ್ದಕ್ಕಾಗಿ ಅವರ ವಿರುದ್ಧ ಶಿಸ್ತಿನ ಕ್ರಮವನ್ನು ಕೈಕೊಳ್ಳುವುದು ನನ್ನ ಪಾಲಿಗೆ ಬಂದಿತು. ಎರಡು ಸಲ ಕಾಂಗ್ರೆಸ್ ಅಧಿವೇಶನಕ್ಕೆ ಅಧ್ಯಕ್ಷರೆಂದು ಚುನಾಯಿತರಾಗಿದ್ದ

ಸುಭಾಷರ ವಿರುದ್ಧ ಕ್ರಮ ಕೈಕೊಳ್ಳುವುದು ಸುಲಭ ವಿಷಯವಾಗಿರಲಿಲ್ಲ. ಅವರ ತ್ಯಾಗ, ದೇಶಭಕ್ತಿಗಳ ಬಗೆಯಲ್ಲಿ ಯಾರೂ ಏನೂ ಅನ್ನುವಹಾಗಿರಲಿಲ್ಲ. ಅಲ್ಲದೆ ಸುಭಾಷರು ನನಗೆ ಮೊದಲಿನಿಂದಲೂ ತೀರ ಬೇಕಾದವರು. ಶರತ್ ಬೋಸರು ನನಗೆ ಕಲಕತ್ತಾ ಪ್ರೆಸಿಡೆನ್ಸಿ ಕಾಲೇಜಿನಲ್ಲಿ ಸಮಕಾಲೀನರು. ಒಂದೇ ವಸತಿಗೃಹದಲ್ಲಿದ್ದು ಗೆಳೆಯರಾಗಿ ಬೆಳೆದವರು ಆದರೆ ಪ್ರಶ್ನೆ ವೈಯಕ್ತಿಕವಾಗಿರಲಿಲ್ಲ. ಕಾಂಗ್ರೆಸ್ ಅಧ್ಯಕ್ಷನೆಂದು ಕೆಲಸ ಮಾಡಬೇಕಾಗಿತ್ತು. ಹೀಗಾಗಿ ಸುಭಾಷರನ್ನು ಕಾಂಗ್ರೆಸ್ ಸಂಸ್ಥೆಯಿಂದ ಹೊರಗೆ ಕಳಿಸಬೇಕಾಯಿತು. ಮಧ್ಯಪ್ರಾಂತದ "ಖರೆ ಪ್ರಕರಣ" ದಲ್ಲಿ, ಓಡಿಸಾ ಮಂತ್ರಿ ಮಂಡಲದ ವಿಷಯದಲ್ಲಿ ಇಂಥದೇ ನಿಷ್ಠುರವಾದ ಧೋರಣೆಯನ್ನು ನಾನು ತಾಳಬೇಕಾಗಿ ಬಂದಿತು.

ರಾಮಗಢ ಕಾಂಗ್ರೆಸ್ ಅಧಿವೇಶನದ ಸಿದ್ಧತೆಗಳಲ್ಲಿ ನಾನು ತೊಡಗಿದ್ದಾಗ ಹಿಟ್ಲರ್ ಪೋಲಂಡಿನ ಮೇಲೇರಿ ಹೋದ. ಮುಂದೆ ಎರಡು ದಿನಗಳಲ್ಲಿ ಇಂಗ್ಲಂಡ್ ಮತ್ತು ಫ್ರಾನ್ಸ್ ಜರ್ಮನಿಯ ವಿರುದ್ಧ ಯುದ್ಧ ಸಾರಿದವು ಕಾಂಗ್ರೆಸ್ ಸಂಸ್ಥೆಯನ್ನಾಗಲಿ, ಪ್ರಾಂತಗಳಲ್ಲಿ ಅಧಿಕಾರಾರೂಢವಾಗಿದ್ದ ಮಂತ್ರಿಮಂಡಲಗಳನ್ನಾಗಲಿ ಒಂದು ಮಾತನ್ನು ಕೇಳದೆ ಬ್ರಿಟಿಷ್ ಸರಕಾರ ಭಾರತವೂ ಯುದ್ಧದಲ್ಲಿ ಸೇರಿದ ಬಗ್ಗೆ ಘೋಷಣೆಯನ್ನು ಮಾಡಿತು ಬ್ರಿಟನ್ನಿನ ಬಗೆಗೆ ಕಾಂಗ್ರೆಸ್ಸಿನಲ್ಲಿ ಸಹಾನುಭೂತಿ ಇದ್ದಿತು ಬ್ರಿಟನ್ನಿಗೆ ಬೇಕಾದ ಸಹಾಯವನ್ನು ಭಾರತ ಕೊಡುವುದೆಂದು ಗಾಂಧೀಜಿಯವರು ಸ್ಪಷ್ಟವಾಗಿ ಹೇಳಿದ್ದರು. ಆದರೆ ಯುದ್ಧಾನಂತರದಲ್ಲಿ ಭಾರತದ ಬಗೆಯಲ್ಲಿ ಇಂಗ್ಲಂಡು ಯಾವ ರೀತಿ ನಡೆದುಕೊಳ್ಳತಕ್ಕದ್ದು ಎನ್ನುವ ಬಗೆಯಲ್ಲಿ ನೇರವಾದ ಆಶ್ವಾಸನವನ್ನು ಕಾಂಗ್ರೆಸ್ಸು ಅಪೇಕ್ಷಿಸಿತು. ಪ್ರಜಾಪ್ರಭುತ್ವದ ಬಗೆಯಲ್ಲಿ ದೊಡ್ಡ ಮಾತುಗಳನ್ನು ಹೇಳಿ ಅದನ್ನುಳಿಸಿಕೊಳ್ಳುವುದಕ್ಕಾಗಿಯೇ ಯುದ್ಧ ಎಂದು ಸಾರಿದ ಬ್ರಿಟನ್ನು ಅದೇ ಪ್ರಜಾಪ್ರಭುತ್ವದ ಆಶ್ವಾಸನವನ್ನು ಭಾರತಕ್ಕೆ

ಕೊಡದ ಹೊರತು ಕಾಂಗ್ರೆಸ್ ಯುದ್ಧ ಯತ್ನದಲ್ಲಿ ಸಹಕರಿಸಲಾರದೆಂಬ ನಿಲುಮೆ ನಿಧಾನವಾಗಿ ಸ್ಥಿರಗೊಂಡಿತು. ೧೯೩೯ ರಿಂದ ೧೯೪೨ ರ ವರೆಗೂ ಬ್ರಿಟಿಶರಿಂದ ಯಾವ ಆಶ್ವಾಸನವೂ ಬರಲಿಲ್ಲ. ಹೀಗಾಗಿ ಯುದ್ಧ ಪ್ರಾರಂಭವಾದ ಕೆಲವೇ ದಿನಗಳಲ್ಲಿ ಕಾಂಗ್ರೆಸ್ ಮಂತ್ರಿಮಂಡಲಗಳು ರಾಜೀನಾಮೆ ಕೊಡಬೇಕಾಯಿತು.

ಬಿಹಾರದ ಮಂತ್ರಿ ಮಂಡಲ ಮೂರು ಕೆಲಸಗಳನ್ನು ನನಗೆ ಒಪ್ಪಿಸಿತ್ತು. ಬಿಹಾರ ಕಾರ್ಮಿಕ ವಿಚಾರಣಾಸಮಿತಿಯ ಅಧ್ಯಕ್ಷನಾಗಿ, ವಿದ್ಯಾಭ್ಯಾಸದ ಪುನರ್ವ್ಯವಸ್ಥೆ ಮತ್ತು ಹಿಂದುಸ್ತಾನಿ ಭಾಷಾ ಸಮಿತಿಯ ಸದಸ್ಯನಾಗಿ ನಾನು ಕೆಲಸ ಮಾಡಬೇಕಾಗಿತ್ತು. ಡಾ॥ ಝಕೀರ್ ಹುಸೇನ, ಪ್ರೊ. ಕೆ. ಟಿ. ಶಾಹಾ, ಕೆ. ಜಿ. ಸೈಯದೈನ, ಡಾ॥ ಸಚ್ಚಿದಾನಂದಸಿಂಹ ಮುಂತಾದ ಮಹನೀಯರ ಸಹಕಾರವಿರದಿದ್ದರೆ ಈ ಯಾವ ಕೆಲಸಗಳೂ ನನ್ನಿಂದಾಗುತ್ತಿರಲಿಲ್ಲ. ಕಾರ್ಮಿಕ ವಿಚಾರಣಾ ಸಮಿತಿಯ ಕೆಲಸ ನನಗೆ ಹೊಸದು. ಬಿಹಾರದಲ್ಲಿ ಅನೇಕ ಬಗೆಯ ಕಾರಖಾನೆಗಳು, ಅನೇಕ ಉದ್ಯಮಸಂಸ್ಥೆಗಳಿರುವುದರಿಂದ ಸಮಸ್ಯೆಗಳು ತೊಡಗಿಕಿನವಾಗಿದ್ದವು. ರಾಮಗಡ ಅಧಿವೇಶನದ ನಂತರದಲ್ಲಿ ತೊಡಗಿದ ಈ ಕೆಲಸಗಳನ್ನು ನಾನು ಪೂರೈಸಿದಾಗ ತೀರ ದಣಿದು ಹೋಗುವಂತಾಯಿತು. ಪಾಟ್ನಾಕ್ಕೆ ಹಿಂದಿರುಗಿದಾಗ ಎಚ್ಚರ ತಪ್ಪಿ ಬಿದ್ದೆ. ಡಾ. ಬ್ಯಾನರ್ಜಿಯವರ ಉಪಚಾರದೊಡನೆ ನನ್ನ ಹಳ್ಳಿಯಾದ ಜೀರಾದೇಯಿಯಲ್ಲಿ ಒಂದು ತಿಂಗಳು ನಾನು ಪಡೆದ ವಿಶ್ರಾಂತಿ ಮತ್ತೆ ನನ್ನನ್ನು ಚೇತರಿಸಿತು.

ಇದೇ ಸುಮಾರಿಗೆ ದೇಶೀಯ ಸಂಸ್ಥಾನಗಳಲ್ಲಿಯೂ ಕಾಂಗ್ರೆಸ್ ಚಳುವಳಿ ಬಲಗೊಳ್ಳುತ್ತಲಿತ್ತು. ವರ್ಧಾದಲ್ಲಿ ನನ್ನನ್ನು ಕಂಡ ಮೈಸೂರಿನ ದಾಸಪ್ಪನವರ ಕೋರಿಕೆಯ ಮೇರೆಗೆ ಬೆಂಗಳೂರು, ಮೈಸೂರಿಗೆ ಹೋಗಿ ಕಾಂಗ್ರೆಸ್ ಪ್ರಚಾರ ಮಾಡಿ ಬಂದೆ. ಹಿಂದಿರುಗುವಾಗ ದಾಸಪ್ಪನವರು ನನ್ನನ್ನು ಹಳೇಬೀಡು, ಬೇಲೂರು ಶ್ರವಣಬೆಳಗೊಳ, ಗೆರಸೊಪ್ಪೆಯ ಮಾರ್ಗವಾಗಿ ಕರೆತಂದರು. ಕಲೆಯ, ನಿಸರ್ಗದ ವೈಭವಗಳನ್ನು ನೋಡುವ ಅನುಕೂಲ ನನ್ನದಾಯಿತು. ಶ್ರವಣಬೆಳಗೊಳದ ಗೋಮಟೇಶ್ವರನ ಶಿಲಾಮೂರ್ತಿಯನ್ನು, ಹಳೇಬೀಡಿನ ಕಲಾವೈಭವವನ್ನು ನೋಡಿದಾಗ ಪ್ರಪಂಚದಲ್ಲಿಯ ಅದ್ವಿತೀಯವಾದ ಈ ಎರಡನ್ನು ಯಾರೂ ನೋಡದೆ ಇರಬಾರದು ಎಂದೆನಿಸಿತು. ಗೆರಸೊಪ್ಪೆಯ ಜಲಪ್ರಪಾತ ಕಣ್ಣಿಗೊಂದು ಹಬ್ಬ. ಅಲ್ಲಿ ಕಟ್ಟಲಾಗುತ್ತಿದ್ದ ವಿದ್ಯುದಾಗಾರ ಅಲ್ಲಿಯ ನಿಸರ್ಗ ಸೌಂದರ್ಯವನ್ನು ಕೆಡಿಸಬಾರದು.

೧೯೪೧ರ ಜೂನ್ ೨೨ನೇ ದಿನ ನಾನು ಡಾಕಾದಲ್ಲಿದ್ದೆ. ಅಲ್ಲಿಯ ಹಿಂದು ಮುಸ್ಲಿಂ ಗಲಭೆಗಳನ್ನು ಶಾಂತಪಡಿಸುವುದಕ್ಕೆಂದು ಹೋಗಿದ್ದೆ. ಅದೇ ದಿನ ಹಿಟ್ಲರ್ ರಶಿಯಾ ವಿರುದ್ಧ ಯುದ್ಧ ಸಾರಿದ ಮರುದಿನ ಬ್ರಿಟಿಶ ಸರಕಾರದ ಪ್ರತಿನಿಧಿಯಾಗಿ ಸರ್ ಸ್ಟಾಫರ್ಡ್ ಕ್ರಿಪ್ಸರು ತಮ್ಮ ಯೋಜನೆಯೊಂದಿಗೆ ಭಾರತಕ್ಕೆ ಆಗಮಿಸಿದರು. ಕ್ರಿಪ್ಸ್ ಯೋಜನೆ ಎರಡು ಭಾಗವಾಗಿತ್ತು. ಭಾರತದ ಭಾವೀ ರಾಜ್ಯಘಟನೆಯನ್ನು ಪ್ರಾಂತೀಯ ವಿಧಾನ ಸಭೆಗಳು ಆಯ್ಕೆಮಾಡಿದ ಪ್ರತಿನಿಧಿಗಳ ಸಂವಿಧಾನ ಸಭೆಯೆ ನಿರ್ಣಯಮಾಡಬೇಕು ಎನ್ನುವುದು ಒಂದು ಭಾಗ. ವಾಯಿಸರಾಯರ ಕಾರ್ಯಕಾರಿ ಮಂಡಲದಲ್ಲಿ ಭಾರತೀಯರಿಗೆ ಪ್ರವೇಶ ಕೊಡುವ ಭಾಗ ಎರಡನೆಯದು. ಯುದ್ಧ ಮತ್ತು ಸಂರಕ್ಷಣೆ ಶಾಖೆಗಳು ವಾಯಿಸರಾಯರಿಗೆ ಸೇರಿದ್ದು ಎಂದು ವಿಧಿಸಲಾಗಿದ್ದರಿಂದ ನಿಜವಾದ ಅಧಿಕಾರ ಭಾರತೀಯ ಪ್ರತಿನಿಧಿಗಳ ಕೈಗೆ ಬರಲಾರದೆಂದು ಕಾಂಗ್ರೆಸ್ಸು ಕ್ರಿಪ್ಸ್ ಯೋಜನೆಯನ್ನು ತಿರಸ್ಕರಿಸಬೇಕಾಯಿತು.

ಬ್ರಹ್ಮದೇಶದ ಗಡಿಯವರೆಗೆ ಜಪಾನಿನ ಸೈನಿಕರು ಬಂದಿದ್ದರು. ಮಲಯಾ, ಇಂಡೋಚಾಯ್ನಾಗಳಲ್ಲಿಯಾದ ಹಾಗೆ ಭಾರತದ ಪೂರ್ವಗಡಿಯ ಆಕ್ರಮಣ ನಡೆಯಬಹುದೆಂದು ಹೆದರಿಕೆ ಅನುದಿನವೂ ಬೆಳೆಯುತ್ತಲಿದ್ದಿತು. ತಮ್ಮ ಸಾಮ್ರಾಜ್ಯವನ್ನು ಬಿಟ್ಟುಕೊಡದ ಬ್ರಿಟಿಶರಿಗೂ ಹೊಸದಾಗಿ ಸಾಮ್ರಾಜ್ಯವನ್ನು ಸ್ಥಾಪಿಸಬೇಕೆನ್ನುತ್ತಿದ್ದ ಜಪಾ

ನೀಯರಿಗೂ ಕಾಂಗ್ರೆಸ್ ದೃಷ್ಟಿಯಿಂದ ಯಾವ ಅಂತರವೂ ಇರಲಿಲ್ಲ. ಈ ವಿಷಯದಲ್ಲಿ ಜನರಿಗೆ ಯೋಗ್ಯ ತಿಳಿವಳಿಕೆಯನ್ನು ಕೊಡುವುದಗತ್ಯವಾದ್ದರಿಂದ ವಿಶೇಷವಾಗಿ ಬಿಹಾರದಲ್ಲಿ ಸಂಚಾರ ಕೈಕೊಳ್ಳಬೇಕಾಯಿತು. ಮೊಂಘೀರ ಗಯಾ ಭಾಗಗಳು, ಪೂರ್ವಬಿಹಾರದಲ್ಲಿ ಇತರ ಪ್ರದೇಶಗಳು ಒಂದು ದೊಡ್ಡ ಮಿಲಿಟರಿ ಠಾಣ್ಯವಾಗಿ ಪರಿವರ್ತನಗೊಂಡಿದ್ದವು. ವಿಮಾನ ನಿಲ್ದಾಣಗಳಿಗಾಗಿ, ಮಿಲಿಟರಿಯ ಠಾಣ್ಯಗಳಿಗಾಗಿ ಅನೇಕರಿಂದ ಭೂಮಿಗಳನ್ನು ಕಸಿದುಕೊಳ್ಳಲಾಗಿತ್ತು. ಅಂಥವರ ನೂರಾರು ಗೋಳುಗಳನ್ನು ಕೇಳಿಕೊಂಡು ಅಂಥ ಎಲ್ಲರಿಗೂ ಯುದ್ಧ ಮುಗಿದ ಮೇಲೆ ಅವರವರ ಭೂಮಿ ಅವರಿಗೆ ಸಿಕ್ಕಬೇಕೆಂದೂ ಅವರೆಲ್ಲರಿಗೆ ಯೋಗ್ಯ ಪರಿಹಾರ ಸಿಕ್ಕಬೇಕೆಂದೂ ಸರಕಾರದೊಡನೆ ಮಾತುಕತೆ ನಡೆಸಿ ಅಗತ್ಯವಾದ ಆಶ್ವಾಸನವನ್ನು ಪಡೆದೆ.

## ಚಲೇಜಾವ್

ಸರಕಾರದ ಧೋರಣೆ ದಿನದಿನವೂ ಕಾಂಗ್ರೆಸ್ಸನ್ನು ಬೇಸರಗೊಳಿಸಿ ನೇರವಾದ ಒಂದು ದಾರಿಯನ್ನು ಹಿಡಿಯದಿದ್ದರೆ ಭಾರತದ ಭವಿತವ್ಯ ನಿರ್ಣಯವಾಗಲಾರದೆಂದು ೧೯೪೨ ಅಗಸ್ಟದಲ್ಲಿ ಮುಂಬಯಿಯಲ್ಲಿ ಸೇರಿದ ಎಐಸಿಸಿ ಸಭೆ "ಭಾರತದಿಂದ ತೊಲಗಿರಿ" ಎಂದು ಇತಿಹಾಸ ಪ್ರಸಿದ್ಧವಾದ ಗೊತ್ತುವಳಿಯನ್ನು ಅಂಗೀಕರಿಸಿತು. ಬೆಳಗಾಗುವ ಮುನ್ನವೆ ಕಾಂಗ್ರೆಸ್ ನಾಯಕರನ್ನೆಲ್ಲ ಬಂಧಿಸಲಾಯಿತು. ನಲವತ್ತೆರಡರ ಆಂದೋಲನ ಪ್ರಾರಂಭವಾಯಿತು.

ಈ ಆಂದೋಲನದಲ್ಲಿ ವಿಧ್ವಂಸಕ ಚಟುವಟಿಕೆಗಳನ್ನು ಕುರಿತು ಒಂದೆರಡು ಮಾತುಗಳನ್ನು ಹೇಳಲೇಬೇಕು. ರೈಲುಕಂಬಿಗಳನ್ನು ಕೀಳಬಹುದೆ, ಸಂಪರ್ಕ ಸಾಧನಗಳನ್ನು ಹಾಳು ಮಾಡಬಹುದೆ ಎನ್ನುವ ಪ್ರಶ್ನೆಗಳಿಗೆ ಗಾಂಧೀಜಿಯವರಾಗಲಿ, ಕಾಂಗ್ರೆಸ್ಸಾಗಲಿ ನೇರವಾದ ಉತ್ತರವನ್ನು ಹೇಳಿರಲಿಲ್ಲ. ಕಾಂಗ್ರೆಸ್ಸಿನ ಕಾರ್ಯಕ್ರಮ ಜನರಿಗೆ ತಿಳಿಯುವ ಮೊದಲೆ ನಾಯಕರನ್ನು ಬಂಧಿಸಲಾಗಿತ್ತು. ಅವರ ಬಂಧನವಾದ ದಿನವೇ ಅಮೆರಿಯವರು ಬಾನುಲಿ ಭಾಷಣ ಮಾಡಿ ಕಾಂಗ್ರೆಸ್ಸಿನ ಕಾರ್ಯಕ್ರಮ ಖಂಡಿತವಾಗಿ ವಿಧ್ವಂಸಕವಾಗಿತ್ತು ಎಂದು ಸಾರಿದರು. ಯಾವುದೂ ತಿಳಿಯದ ಜನತೆ ಅದೇ ಕಾಂಗ್ರೆಸ್ಸಿನ ಆದೇಶವಾಗಿದ್ದಿರಬಹುದು ಎಂದು ತಿಳಿದು ಹಾಗೆ ನಡೆದು ಕೊಂಡಿದ್ದರೆ ಆಶ್ಚರ್ಯವೇನೂ ಇಲ್ಲ. ಅದು ಹೇಗಿದ್ದರೂ ಜನತೆ ಜಾಗ್ರತವಾಗಿತ್ತು. ಅದಕ್ಕೆ ಇದಿರಾಗಿ ಸರಕಾರವೂ ದಬ್ಬಾಳಿಕೆಯ ಪರಮಾವಧಿಗೆ ಸಿದ್ಧವಾಗಿತ್ತು. ಸರಕಾರ ಜನರನ್ನು ಹತ್ತಿಕ್ಕುವ ಕೆಲಸದಲ್ಲಿ ಕೈಕೊಂಡ ವಿಪರೀತ ಕ್ರಮಗಳ ವಿವರಣೆ ಅನಗತ್ಯ. ಅನೇಕರಿಗೆ ಆ ವಿಷಯ ನಿನ್ನೆಮೊನ್ನೆಯದಾದ್ದರಿಂದ ಪರಿಚಿತವಾದದ್ದೇ ಇದೆ. ಆದರೆ ಬಿಹಾರದಲ್ಲಿಯ ಒಂದೆರಡು ಉದಾಹರಣೆಗಳನ್ನು ಹೇಳಬಹುದು.

ಸಕಾಲದಲ್ಲಿ ನನ್ನನ್ನು ಸೆರೆಹಿಡಿದು ಬಂಕೀಪುರ (ಪಾಟ್ನಾ) ಜೇಲಿನಲ್ಲಿಡಲಾಯಿತು. ರಾಂಚೀ ಪಾಟ್ನಾ ರಸ್ತೆಯ ಮೇಲೆ ಸಾರಿಗೆಗೆ ಅಡ್ಡಿಮಾಡಿ ಧಾನ್ಯ ಹೇರಿಕೊಂಡು ಹೋಗುತ್ತಿದ್ದ ಗಾಡಿಯನ್ನು ಲೂಟಿ ಮಾಡಿದನೆಂಬ ಆರೋಪಕ್ಕೆ ಗುರಿಮಾಡಿ ಒಬ್ಬನನ್ನು ಬಂಧಿಸಿ ಅಲ್ಲಿಗೆ ತರಲಾಗಿತ್ತು. ಬೇನೆಯಿಂದ ಬಳಲುತ್ತಿದ್ದ ಆ ಮುದುಕನಿಗೆ ಸರಿಯಾಗಿ ನಡೆಯಲೂ ಬರುತ್ತಿರಲಿಲ್ಲ. ಯಾವುದೋ ಬೇನೆಯಿಂದಾಗಿ ಆತನ ಕೈ ಬೆರಳುಗಳು ಮಡಿಚಿಹೋಗಿದ್ದವು. ಅಂಥವ ಓಡಿಹೋಗಲು ಯತ್ನಿಸಿದನೆಂದೂ ಒಂದು ಮೈಲಿನಾಚೆ ಆತನನ್ನು ಹಿಡಿಯಲಾಯಿತೆಂದೂ ಪೋಲೀಸರ ವಾದ. ಆ ವಾದವನ್ನು ಒಪ್ಪಿ ನ್ಯಾಯಾಧೀಶರು ಆತನಿಗೆ ಏಳು ವರ್ಷದ ಶಿಕ್ಷೆಯನ್ನು ವಿಧಿಸಿದ್ದರು. ಜೇಲು ಅಧಿಕಾರಿಗಳ ಮುಖಾಂತರ ತೀರ್ಪಿನ ಪ್ರತಿಯೊಂದನ್ನು ತರಿಸಿಕೊಂಡು ಹೈಕೋರ್ಟಿಗೆ ಅಪೀಲೊಂದನ್ನು ನಾನು ತಯಾರಿಸಿ ಕೊಟ್ಟೆ. ಹೈಕೋರ್ಟು ಆತನನ್ನು ಬಿಡುಗಡೆ ಮಾಡಿತು.

ಪಾಟ್ನಾ ಜಿಲ್ಲೆಯಲ್ಲಿ ಕೆಲವೊಂದು ಭಾಗ ಮಳೆಗಾಲದಲ್ಲಿ ನಡುಗಡ್ಡೆಯಾದಂತಾಗುತ್ತದೆ. ಸುಮಾರು ಮೂರು ತಿಂಗಳು ಕಾಲ ಅಲ್ಲಿಗೆ ಅಂಚೆ

ಯುವ ಕೂಡ ಹೋಗುವುದಿಲ್ಲ. ಆದರೆ ಅಂಥ ಒಂದು ಹಳ್ಳಿಯಲ್ಲಿಯ ಕೆಲವರನ್ನು ಪೋಲೀಸರು ಬಂಧಿಸಿ ಅಲ್ಲಿ ಅವರು ಪ್ರತಿಸರಕಾರ ಸ್ಥಾಪಿಸಿದ್ದ ರೆಂದು ಶಿಕ್ಷೆಗೆ ಗುರಿಮಾಡಿದ್ದರು. ಪೋಲೀಸರ ವಾದದ ಪ್ರಕಾರ ಒಬ್ಬ "ರಾಜ"ನಾಗಿದ್ದ, ಇನ್ನು ಕೆಲವರು "ಮಂತ್ರಿಗಳು", ಇನ್ನೊಬ್ಬ "ದಂಡನಾಯಕ." ಈ ದಂಡನಾಯಕ ಬಂಕೀಪುರ ಜೇಲಿಗೆ ಬಂದಾಗ ನಿಲ್ಲಲೂ ಆಗದಷ್ಟು ಬೇನೆಯಿಂದ ಬಳಲುತ್ತಿದ್ದ. ಅವರು ಪ್ರತಿಸರಕಾರವನ್ನು ಮುಂಬಯಿಯಲ್ಲಿಯ ಗೊತ್ತುವಳಿಗನುಸಾರವಾಗಿ ಏರ್ಪಡಿಸಿದ್ದರೆಂದು ವಾದಿಸಲಾಗಿತ್ತು. ಆದರೆ ಅದು ಮಳೆಗಾಲವಾದ್ದರಿಂದ ಅವರಿಗೆ ಹೊರ ಜಗತ್ತಿನ ಸಂಪರ್ಕವಿದ್ದಿರಲಾರದೆಂಬ ಅಂಶವನ್ನು ಪೋಲೀಸರು ಮರೆತುಬಿಟ್ಟಿದ್ದರು. ಆ ರಾಜ, ಮಂತ್ರಿಮಂಡಲ, ದಂಡನಾಯಕ ಎಲ್ಲರೂ ಬಿಡುಗಡೆಯಾದರು. ಆದರೆ ಅಷ್ಟಾಗುವವರೆಗೆ ಎರಡು ವರ್ಷ ಜೇಲುವಾಸವನ್ನು ಅನುಭವಿಸಿದ್ದರು. ಇಂಥ ಉದಾಹರಣೆಗಳು ಅಸಂಖ್ಯಾತ!

## ಪುಸ್ತಕ ಬರೆದೆ

ಈ ಸಲದ ಜೇಲುವಾಸದಲ್ಲಿ ನಾನು ಬರೆಯಲು ಪ್ರಾರಂಭಿಸಿದೆ. ಹಿಂದು - ಮುಸ್ಲಿಂ ಸಂಬಂಧಗಳನ್ನು ಐತಿಹಾಸಿಕವಾಗಿ ಪರಿಶೀಲಿಸಿ ಪಾಕಿಸ್ತಾನದ ಬೇಡಿಕೆಯನ್ನು ಕೂಲಂಕಷವಾಗಿ, ನಿಷ್ಪಕ್ಷಪಾತವಾಗಿ ಚರ್ಚಿಸುವ ಒಂದು ಪುಸ್ತಕವನ್ನು ಬರೆದು ಮುಗಿಯಿಸಿದೆ. ಅದೇ ನನ್ನ "ವಿಭಕ್ತ ಭಾರತ" ಎನ್ನುವ ಪುಸ್ತಕ. ಇಷ್ಟು ದೊಡ್ಡದಾಗಬಹುದೆಂಬ ಎಣಿಕೆ ಬರೆಯಲುಪಕ್ರಮಿಸಿದಾಗ ನನಗಿರಲಿಲ್ಲ. ಪ್ರಕಟಮಾಡುವ ಯೋಚನೆಯೂ ಇರಲಿಲ್ಲ. ಬಿಡುಗಡೆಯಾದ ಮೇಲೆ ಪುಸ್ತಕವನ್ನು ಪ್ರಕಾಶಗೊಳಿಸಲು ಅನುಕೂಲವಾಯಿತು. ಈ ಪುಸ್ತಕವನ್ನು ನಾನು ಬರೆಯುತ್ತಿದ್ದುದನ್ನು ಒಬ್ಬ

ಪೋಲೀಸ ಅಧಿಕಾರಿ ತಿಳಿದುಕೊಂಡ. ಅದರ ಪ್ರಕಾಶನದ ಬಗೆಯಲ್ಲಿ ಆಸ್ಥೆವಹಿಸಿ ನಾನು ಜೇಲಿನಲ್ಲಿರುವಾಗಲೆ ಅನೇಕ ಬಗೆಯ ಅನುಕೂಲಗಳು ನನಗೆ ಸಿಕ್ಕುವಂತೆ ಸಹಕರಿಸಿದ್ದ.

ನನ್ನ ಈ ಆತ್ಮಚರಿತ್ರೆಯನ್ನೂ ಜೇಲಿನಲ್ಲಿಯೆ ಬರೆದೆ. ರಾಮಗಡ ಕಾಂಗ್ರೆಸಿನ ನಂತರದ ಭಾಗವನ್ನು ಬಿಡುಗಡೆಯಾದ ನಂತರ ಬರೆದೆ. ಇದನ್ನು ಬರೆಯುತ್ತಿರುವಾಗಲೆಲ್ಲವೂ ಯಾತಕ್ಕೆ ಬರೆಯಬೇಕೆಂಬ ಯೋಚನೆ ನನ್ನ ಮನಸ್ಸಿನೆದುರು ನಿಂತಿದೆ. ನಾನು ಏನನ್ನು ಸಾಧಿಸಿದ್ದರೂ ಎಷ್ಟನ್ನು ಸಾಧಿಸಿದ್ದರೂ ಅದನ್ನು ಸಾಧ್ಯವಾಗಿಸಿದ್ದವರು ಇಬ್ಬರು — ಮಹಾತ್ಮಾ ಗಾಂಧಿಯವರು ಮತ್ತು ನನ್ನ ಅಣ್ಣ. ದೇಶದ ಸೇವೆಗೆ, ಕಾಂಗ್ರೆಸಿನ ಸೇವೆಗೆ ನನ್ನ ಜೀವನವನ್ನು ನಾನು ಮುಡಿಪಾಗಿಸಿದ್ದು ನಿಜ. ಕಾಂಗ್ರೆಸಿನ ಕೆಲಸ ನಡೆದ ರೀತಿಯ ಬಗೆಯಲ್ಲಿ ಈ ಜೀವನಚರಿತ್ರೆ ಕೆಲವೊಂದು ವಿವರಗಳನ್ನು ಕೊಡಬಹುದಾದರೆ ಅದೇ ಒಂದು ಸಮರ್ಥನೆ ಎಂದು ಬರೆದೆ, ಪ್ರಕಟನೆಗೂ ಒಪ್ಪಿದೆ.

೧೯೪೫ರ ಜೂನ ೧೪ನೆಯ ರಾತ್ರಿ ವೈಸರಾಯ ವಾವೆಲ್ ಬಾನುಲಿ ಭಾಷಣ ಮಾಡಿ ಮರುದಿನ ಕಾಂಗ್ರೆಸ್ ನಾಯಕರನ್ನು ಹೊಸ ರಾಜಕೀಯ ಯೋಜನೆಯೊಂದನ್ನು ಚರ್ಚಿಸುವುದಕ್ಕೆ ಬಿಡುಗಡೆ ಮಾಡಲಾಗುವುದೆಂದು ಸಾರಿದರು. ಮರುದಿನ ಎಲ್ಲರೊಡನೆ ನನ್ನ ಬಿಡುಗಡೆಯಾಯಿತು. ಸಿಮ್ಲಾ ಸಮ್ಮೇಳನದಲ್ಲಿ ನಾನೂ ಭಾಗವಹಿಸಬೇಕೆಂದು ಕರೆ ಬಂದಿತು. ಮಾತುಕತೆಗಳು ನಡೆದವು. ಕ್ರಿಪ್ಸ್ ಯೋಜನೆಯನ್ನು ಕೆಲಮಟ್ಟಿಗೆ ಬದಲಾಯಿಸಲಾಗಿತ್ತು. ವೈಸರಾಯರ ಕಾರ್ಯಕಾರಿ ಮಂಡಲದಲ್ಲಿ ಹಿಂದು ಮುಸ್ಲಿಂರಿಗೆ ಸಮಾನ ಪ್ರಾತಿನಿಧ್ಯವನ್ನು ಕೊಡಮಾಡಿತ್ತು. ಹರಿಜನರಿಗೆ ಪ್ರತ್ಯೇಕವಾಗಿ ಸ್ಥಳವಿದ್ದಿತು. ಕಾಂಗ್ರೆಸು ಸುದೀರ್ಘವಾಗಿ ಚರ್ಚೆ ಮಾಡಿ ವಾವೆಲ್‌ರಿಂದ ಅನೇಕ ವಿಷಯಗಳನ್ನು ಸ್ಪಷ್ಟವಾಗಿಸಿಕೊಂಡು ಯೋಜನೆಯನ್ನು ಒಪ್ಪುವುದರಲ್ಲಿತ್ತು. ಆದರೆ ಮುಸ್ಲಿಂ ಲೀಗು ಮುಸಲ್ಮಾನರ ಏಕಮೇವ ಪ್ರಾತಿನಿಧಿಕ ಸಂಸ್ಥೆಯೆಂದು ಜಿನ್ನಾ ಹಟ ಹಿಡಿದದ್ದರಿಂದ ಸಿಮ್ಲಾ ಸಮ್ಮೇಳನ ವಿಫಲವಾಯಿತು.

ಬಿಹಾರಕ್ಕೆ ಹಿಂದಿರುಗಿದಾಗ ಮೂರು ವರ್ಷಗಳಲ್ಲಿ ರಾಜಕೀಯ ಆಂದೋಲನದ ಪರಿಣಾಮವಾಗಿ ಸಂಕಟಕ್ಕೀಡಾದವರ ಕತೆಗಳು ನನ್ನನ್ನು ತಲ್ಲಣಿಸಿದವು. ಸಂತ್ರಸ್ತರಿಗೆ ಪರಿಹಾರ ಒದಗಿಸಲೇಬೇಕೆಂದು ನಿರ್ಧರಿಸಿದೆ. ಆದರೆ ದೇಹಾಲಸ್ಯದ ಮೂಲಕ ಕೂಡಲೆ ಸಂಚಾರಕ್ಕೆ ಹೊರಡಲಾಗಲಿಲ್ಲ. ಬಿಹಾರದ ಮಳೆಗಾಲ ತಪ್ಪಿಸಲೆಂದು ಬಜಾಜರ ಸೂಚನೆಯನ್ನು ಒಪ್ಪಿ ರಾಜಸ್ಥಾನದಲ್ಲಿ ವಿಶ್ರಾಂತಿ ಪಡೆಯುವುದೆಂದು ಪಿಲಾನಿಗೆ ಬಂದೆ. ನನ್ನ ಆರೋಗ್ಯ ಸುಧಾರಿಸಿ ನಾನು ಹೊರಡುವುದು ಸಮೀಪಿಸಿದಾಗ ಪಿಲಾನಿ ಕಾಲೇಜಿನ ಪ್ರಿನ್ಸಿಪಾಲರು ಸಂತ್ರಸ್ತರ ಬಗೆಯಲ್ಲಿಯ ನನ್ನ ಅಭಿಪ್ರಾಯವನ್ನು ತಿಳಿದು ಒಂದು ವಿದ್ಯಾರ್ಥಿಗಳ ಸಭೆಯನ್ನುದ್ದೇಶಿಸಿ ನಾನು ಮಾತನಾಡಬೇಕೆಂದರು. ಸಭೆ ಮುಗಿದಾಗ ವಿದ್ಯಾರ್ಥಿಗಳು ಒಂದು ಸಾವಿರ ರೂಪಾಯಿಗಳನ್ನು ಕೊಟ್ಟು ಅನಿರೀಕ್ಷಿತವಾಗಿ ಸಂತ್ರಸ್ತರ ಪರಿಹಾರ ನಿಧಿಯನ್ನು ಮೊದಲು ಮಾಡಿದರು. ರಾಜಸ್ಥಾನದಲ್ಲಿಯೆ ನನಗೆ ಸುಮಾರು ೧೬,೦೦೦ ರೂಪಾಯಿ ಸಿಕ್ಕವು. ಆ ಬಗೆಯಲ್ಲಿ ಬಿಹಾರದ ಉದ್ದಕ್ಕೂ ಸಂಚಾರ ಕೈಕೊಂಡಾಗ ಎಲ್ಲಿಲ್ಲದ ಉತ್ಸಾಹದಿಂದ ಜನತೆ ಮುಂದೆ ಬಂದು ಧನಸಹಾಯ ನೀಡಿತು. ಬಿಹಾರ ಒಂದೇ ಪ್ರಾಂತದಲ್ಲಿ ಐದು ಲಕ್ಷ ರೂಪಾಯಿ ಕೈಸೇರಿದುವು. ಮನೆಮಾರುಗಳನ್ನು ಕಳೆದುಕೊಂಡ ಅನೇಕರಿಗೆ ಸಹಾಯ ಒದಗಿಸಲು ಸಾಧ್ಯವಾಯಿತು.

ಮುಂದಿನ ಕತೆ ಸರ್ವಶ್ರುತವಾದ ಇತ್ತೀಚಿನ ಇತಿಹಾಸ. ಇಂಗ್ಲಂಡಿನಲ್ಲಿ ಕಾರ್ಮಿಕ ಮಂತ್ರಿಮಂಡಲ ಅಧಿಕಾರಕ್ಕೆ ಬಂದು ಆಟ್ಲಿಯವರು ಮುಖ್ಯಮಂತ್ರಿಗಳಾದಾಗ ಭಾರತದ ರಾಜಕೀಯ ಸಮಸ್ಯೆಯನ್ನು ಬಗೆಹರಿಯಿಸಿಯೇಬಿಡುವ ಆತುರ

ಅವರಲ್ಲಿ ಸ್ಪಷ್ಟವಾಗಿ ಕಾಣಿಸಿತು. ಕ್ಯಾಬಿನೆಟ್ ಮಿಶನ್ ಯೋಜನೆಯನ್ನು ಕಾಂಗ್ರೆಸ್ ಪರಿಶೀಲಿಸಿ ಒಪ್ಪಿಕೊಳ್ಳುತ್ತಲಿದ್ದಾಗ ಪಾಕಿಸ್ತಾನದ ಹಟಹಿಡಿದ ಜಿನ್ನಾ ಅನೇಕ ತೊಂದರೆಗಳನ್ನುಂಟು ಮಾಡಿದರು. ಆದರೆ ೧೯೪೬ರಲ್ಲಿ ವಾವೆಲ್ಲರ ಆಮಂತ್ರಣವನ್ನು ಮನ್ನಿಸಿ ಕಾಂಗ್ರೆಸ್ ಕೇಂದ್ರ ಮಂತ್ರಿಮಂಡಲವನ್ನು ಸ್ಥಾಪಿಸಿತು. ಮೊದಲು ದೂರ ಉಳಿದ ಮುಸ್ಲಿಂ ಲೀಗು ನಿಧಾನವಾಗಿ ಬಂದು ಅಧಿಕಾರ ವಹಿಸಿತು.

ಹೊರಗೆಯೆ ಉಳಿದು ನನ್ನ ಕಾಂಗ್ರೆಸ್ ಸೇವೆಯನ್ನು ಮುಂದುವರಿಸಬೇಕೆಂಬ ನನ್ನ ಇಚ್ಛೆಯನ್ನು ಗಾಂಧೀಜಿಯವರು ಮನ್ನಿಸಲಿಲ್ಲ. ಅವರ ಒತ್ತಾಯಕ್ಕೆ ಮಣಿದು ಆಹಾರ-ಕೃಷಿ ವಿಭಾಗದ ಮಂತ್ರಿಪದವನ್ನು ಅಂಗೀಕರಿಸಿದೆ. ನನಗೆ ತಿಳಿದ ಮಟ್ಟಿಗೆ ದೇಶದಲ್ಲಿಯ ಅನ್ನಸಂಕಷ್ಟವನ್ನು ನಿವಾರಿಸಲು ಯತ್ನಿಸಿದೆ. ೧೯೪೭ರ ಮಾರ್ಚ ದಲ್ಲಿ ವಾವೆಲ್ಲರ ಬದಲಾಗಿ ಮೌಂಟಬ್ಯಾಟನ್ ಬಂದಾಗ ವಾತಾವರಣ ಇನ್ನೂ ಬದಲಾಯಿತು. ಆಗಸ್ಟ ೧೫ರಂದು ಅಧಿಕಾರದ ಹಸ್ತಾಂತರ ನಡೆದು ಭಾರತ ಬಂಧಮುಕ್ತವಾಯಿತು.

ಹೊಸ ಸಂವಿಧಾನದ ಯೋಜನೆಯಾಗಬೇಕಾದಾಗ ಸಂವಿಧಾನಸಭೆಯ ಅಧ್ಯಕ್ಷರು ಯಾರಾ[ಗ]ಬೇಕು ಎನ್ನುವ ಪ್ರಶ್ನೆ ಬಂದಿತು. ಎಲ್ಲರಿಗ[ೂ] ಹಿರಿಯರಾಗಿ ಹಳೆಯ ತಲೆಮಾರಿನ ನಾಯಕರ[ಾ]ಗಿದ್ದ ಡಾ॥ ಸಚ್ಚಿದಾನಂದಸಿಂಹರನ್ನು ಮೊದ[ಲ] ಅಧ್ಯಕ್ಷರನ್ನಾಗಿ ಮಾಡಲಾಯಿತು. ಗೋಪಾ[ಲ]ಸ್ವಾಮಿ ಅಯ್ಯಂಗಾರರ ಹೆಸರನ್ನು ನಾನ[ು] ಸೂಚಿಸಿದೆ. ಆದರೆ ಮಂತ್ರಿಮಂಡಲ ನನ್ನನ[್ನು] ಒತ್ತಾಯಿಸಿತು. ಮಂತ್ರಿಮಂಡಲದಲ್ಲಿಯ ನನ[್ನ] ಕೆಲಸದ ಜೊತೆಯಲ್ಲಿ ಸಂವಿಧಾನ ಸಭೆಯ ಅಧ್ಯಕ್ಷತೆಯ ಕೆಲಸವನ್ನು ಒಪ್ಪಿ ಮಾಡಬೇಕ[ಾ]ಯಿತು. ನವಭಾರತದ ಸಂವಿಧಾನ ಸಭೆಯ ಅಧ್ಯಕ್ಷತೆಯನ್ನು ವಹಿಸುವ ಗೌರವ ನನ[ಗೆ] ದಾಯಿತು. ದೇವರ ಮೇಲೆ ಭಾರ ಹಾಕಿ ಆ ಗುರುತರವಾದ ಕಾರ್ಯಭಾರವನ್ನು ನಿರ್ವ[]ಹಿಸಿದೆ.

ಸಂವಿಧಾನ ಸಿದ್ಧವಾಗಿ ನಮ್ಮ ನಾಡ[ು] ಸ್ವತಂತ್ರ ಪ್ರಜಾರಾಜ್ಯವಾದಾಗ ಜನತೆಯ ಔದಾರ್ಯ ನನ್ನನ್ನು ಭಾರತದ ಮೊದಲ ರಾಷ್ಟ್ರಪತಿಯನ್ನಾಗಿಸಿತು.



ಯುದ್ಧ ನಡೆದಿದ್ದಾಗ ಅಬ್ರಹಾಮ ಲಿಂಕನ್ನರು ಸೈನ್ಯಾಧಿಕಾರಿಗೆ ಒಂದು ದಾಳಿಯ ಆಜ್ಞೆ ಕಳಿಸಿದರು. ಅದರ ಜೊತೆ ಬರೆದ ಪತ್ರದಲ್ಲಿ “ಈ ದಾಳಿಯಲ್ಲಿ ನೀವು ವಿಜಯಿಗಳಾದರೆ ನಾನು ಆಜ್ಞೆ ಕಳಿಸಿದ್ದೆನೆಂದು ಹೇಳಬೇಡಿರಿ. ಆದರೆ ಸೋತರೆ ಮಾತ್ರ ನನ್ನ ಹೆಸರು ಹೇಳಿರಿ. ಅಪಯಶಸ್ಸಿನ ಹೊಣೆ ನನ್ನದು” ಎಂದು ಬರೆದಿದ್ದರು.

Edited, printed and published by H. R. Moharay at
the Samyukta Karnatak Press, Koppikar Road, Hubli



Regd. No. B 7487

**KASTU**

May, 1958

A comprehensive Kannada Monthly Digest which circul throughout the New Mysore State and commands the hig number of readers wherever Kannada is spoken in India. caters to all tastes and is appreciated by all alike.

**As. 12**
( 75 nP. )



ಲೋಕಶಿಕ್ಷಣ ಟ್ರಸ್ಟಿನ
ಪ್ರಕಾಶನ